ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಹ.ಆಯಿಶಾ(ರ) ಪ್ರವಾದಿ ಮಹಮ್ಮದ್(ಸ)ರ ಪತ್ನಿಯರಲ್ಲಿ ಅತ್ಯಂತ ಕಿರಿಯವರಾಗಿದ್ದರು. ಉಳಿದವರಲ್ಲಿ ಕೆಲವರು ಕನ್ಯೆಯರೋ ವಿಧವೆಯರೊ ಆಗಿದ್ದರು. ಪ್ರವಾದಿಯವರಿಂದ ಅವರ ಜೀವನದ ಎಲ್ಲ ವಿವರಗಳನ್ನು ನೇರವಾಗಿ ಅರಿತು ಸಮುದಾಯಕ್ಕೆ ವರ್ಗಾಯಿಸಿದ ಕೀರ್ತಿ ಹ. ಆಯಿಶಾ(ರ)ರಿಗೆ ಸಲ್ಲುತ್ತದೆ. ಅವರು ಸುಮಾರು 2500 ಹದೀಸ್‌ಗಳನ್ನು ವರದಿ ಮಾಡಿದ್ದಾರೆ. 'ಧರ್ಮದ ಅರ್ಥ ಜ್ಞಾನವನ್ನು ಆಯಿಶಾರಿಂದ ಕಲಿತುಕೊಳ್ಳಿ' ಎಂದು ಪ್ರವಾದಿವರ್ಯರು(ಸ) ಹೇಳಿದ್ದಾರೆ, ಆದ್ದರಿಂದ ಆಯಿಶಾ ಓರ್ವರೇ ಮಹಿಳೆಯರಿಗೆ ಸಂಬಧಿಸಿದ ವಿಷಯಗಳನ್ನು ಚೆನ್ನಾಗಿ ಅರಿತವರು ಎಂಬುದಕ್ಕೆ ಇದು ಸಾಕ್ಷಿಯಾಗಿದೆ.

ಆಯಿಶಾ(ರ)ರ ಚಟುವಟಿಕೆಗಳು ಜೀವನದ ಎಲ್ಲ ರಂಗಗಳನ್ನು ವ್ಯಾಪಿಸಿದೆ. ಶೈಕ್ಷಣಿಕ, ಕೌಟುಂಬಿಕ, ಸಾಮಾಜಿಕ, ರಾಜಕೀಯ ಮೊದಲಾದ ಯಾವ ರಂಗವೂ ಅದರಿಂದ ಹೊರತಾಗಿಲ್ಲ. ಪ್ರವಾದಿ ಪತ್ನಿಯರ ಪೈಕಿ ಆಯಿಶಾರಲ್ಲಿ ಅನೇಕ ವೈಶಿಷ್ಟ್ಯಗಳಿದ್ದವು. 'ಹರ್‍ರುತ್ ಆಯಿಶಾ(ರ)' ಎಂಬ ಈ ಕೃತಿಯಲ್ಲಿ ಅವರ ಜೀವನದ ವಿವಿಧ ಮಜಲುಗಳನ್ನು ಪರಿಚಯಿಸಲಾಗಿದೆ. ಮಾಯಿಲ್ ಖೈರಾಬಾದಿಯವರ 'ಉಮ್ಮುಲ್ ಮೂಮಿನೀನ್ ಹರ್‍ರುತ್ ಆಯೀಶಾ(ರ)' ಎಂಬ ಉರ್ದು ಕೃತಿಯನ್ನು ಸಹೋದರಿ 'ಮಿಸ್ಬಾ ತರೀಕೆರೆ' ಸುಂದರವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಕನ್ನಡ ಜನತೆಗೆ ಚರಿತ್ರೆಯ ಕುರಿತಾದ ಜ್ಞಾನ ವೃದ್ಧಿಗೆ ಈ ಕೃತಿಯು ಸಹಾಯಕವಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಸತ್ಯವಿಶ್ವಾಸಿಗಳ ಮಾತೆ

ಇಸ್ಲಾಮಿನ ಪ್ರಥಮ ಖಲೀಫರಾದ ಹ. ಅಬೂಬಕರ್(ರ)ರವರ ಕಿರಿಯ ಪುತ್ರಿ ಹ. ಆಯಿಶಾ(ರ) ಇಸ್ಲಾಮೀ ಇತಿಹಾಸದಲ್ಲಿ ಹ. ಅಬೂಬಕರ್(ರ)ರು ಪ್ರಸಿದ್ಧರಾದಂತೆ, ಪ್ರಸಿದ್ಧರಾಗಿದ್ದಾರೆ.

ಹ. ಆಯಿಶಾ(ರ) ಅಂತ್ಯ ಪ್ರವಾದಿ ಮುಹಮ್ಮದ್(ಸ)ರವರ ಪ್ರಿಯ ಪತ್ನಿ. ಅಲ್ಲಾಹನು ಪ್ರವಾದಿ ಮುಹಮ್ಮದ್(ಸ)ರ ಪತ್ನಿಯರನ್ನು 'ಉಮ್ಮುಹಾತುಲ್ ಮೂಮಿನೀನ್' (ಸತ್ಯವಿಶ್ವಾಸಿಗಳ ಮಾತೆಯರು) ಎಂದು ಅಭಿಸಂಬೋಧಿಸಿದ್ದಾನೆ.

ಉಮ್ಮುಲ್ ಮುಅ್‌ಮಿನೀನ್ ಹ. ಆಯಿಶಾ(ರ) ತಮ್ಮ ತಂದೆಯ ಹೆಸರಿನೊಂದಿಗೆ 'ಆಯಿಶಾಸಿದ್ದೀಕಾ' ಎಂದು ಪ್ರಸಿದ್ಧರಾಗಿದ್ದಾರೆ. ಪ್ರವಾದಿವರ್ಯರು(ಸ) ಅಬೂಬಕರ್(ರ)ರವರಿಗೆ 'ಸಿದ್ದೀಕ್' ಎಂದು ಆಯಿಶಾ(ರ)ರಿಗೆ 'ಬಿಂತಿ ಸಿದ್ದೀಕಾ' ಎಂಬ ಬಿರುದು ನೀಡಿದರು.

'ಉಮ್ಮುಲ್ ಮೂಮಿನೀನ್' ಎಂಬ ಬಿರುದು ದೊರಕುವ ಮುನ್ನ ಆಯಿಶಾ(ರ)ರನ್ನು 'ಉಮ್ಮು ಅಬ್ದುಲ್ಲಾ' (ಅಬ್ದುಲ್ಲಾರ ಮಾತೆ) ಎಂದು ಕರೆಯುತ್ತಿದ್ದರು. ಹ. ಆಯಿಶಾ(ರ)ರು ಪ್ರವಾದಿವರ್ಯರಲ್ಲಿ(ಸ) ಸಮಾಲೋಚನೆ ನಡೆಸಿ 'ಉಮ್ಮು ಅಬ್ದುಲ್ಲಾ' ಎಂಬ ಉಪನಾಮವನ್ನು ಇಟ್ಟುಕೊಂಡಿದ್ದರು. ಅರೇಬಿಯಾದಲ್ಲಿ ಇಂತಹವರ ತಂದೆ ಅಥವಾ ತಾಯಿ ಎಂದು ಕರೆಯಿಸಿಕೊಳ್ಳುವ ಸಂಪ್ರದಾಯವಿತ್ತು. ಆಯಿಶಾ(ರ)ರಿಗೆ ಸಂತಾನವಿಲ್ಲದ ಕಾರಣ ಪ್ರವಾದಿವರ್ಯರಲ್ಲಿ(ಸ) ಸಮಾಲೋಚನೆ ನಡೆಸಿ ತನ್ನ ಸೋದರಿ ಪುತ್ರ ಅಬ್ದುಲ್ಲಾ(ರ)ರ ಹೆಸರಿನಲ್ಲಿ 'ಉಮ್ಮು ಅಬ್ದುಲ್ಲಾ' ಎಂದು ಕರೆಸಿಕೊಂಡರು. ಇತರೆ ಪತ್ನಿಯರು ಅವರವರ ಸಂತಾನಗಳ ಹೆಸರಿನಲ್ಲಿ ಉಪನಾಮ ಇಟ್ಟುಕೊಳ್ಳಲು ಅನುಮತಿಸಿದರು. ಅಬ್ದುಲ್ಲಾ(ರ)ರು ಆಯಿಶಾ(ರ)ರ ಹಿರಿಯ ಸಹೋದರಿ ಅಸ್ಮಾ(ರ)ರ ಹಿರಿಯ ಪುತ್ರ. ಇಸ್ಲಾಮಿನಲ್ಲಿ ಚಿಕ್ಕಮ್ಮನನ್ನು ತಾಯಿಗೆ ಸಮಾನ ಎಂದು ಭಾವಿಸುವುದರಿಂದ ಪ್ರವಾದಿವರ್ಯರು(ಸ) ಈ ಸಲಹೆ ನೀಡಿದ್ದರು. ಆಯಿಶಾ(ರ)ರವರ ಕುಟುಂಬದ

ಸರ್ವ ಸದಸ್ಯರು ಪ್ರವಾದಿವರ್ಯರ(ಸ) ಸಂಗಾತಿಗಳು. ಮಾನವರಲ್ಲಿ ಪ್ರವಾದಿಗ ಬಳಿಕ ಶ್ರೇಷ್ಠ ಸ್ಥಾನಮಾನ ಸಹಾಬಿಗಳದ್ದಾಗಿದೆ. ಈ ಸಹಾಬಿಗಳ ಸಂಬಂಧಗಳನ್ನೊವ ನೋಡಿರಿ.

- ✦ ಹ. ಆಯಿಶಾ(ರ)ರ ತಾತ (ತಂದೆಯ ತಂದೆ) ಹ. ಅಬೂ ಕುಹಾಫಾ
- ✦ ಹ. ಆಯಿಶಾ(ರ)ರ ತಂದೆ ಹ. ಅಬೂಬಕರ್ ಸಿದ್ದೀಕ್(ರ)
- ✦ ಹ. ಆಯಿಶಾ(ರ)ರ ತಾಯಿ ಉಮ್ಮು ರೂಮಾನ(ರ)
- ✦ ಹ. ಆಯಿಶಾ(ರ)ರ ಸಹೋದರ ಅಬ್ದುರ್ರಹ್ಮಾನ್(ರ)
- ✦ ಹ. ಆಯಿಶಾ(ರ)ರ ಸಹೋದರಿ ಅಸ್ಮಾ(ರ)

ಹ. ಆಯಿಶಾ(ರ)ರ ಹೊರತು ಬೇರಾವ ಸಹಾಬಿಗಳ ಕುಟುಂಬಗಳಲ್ಲ ಇಂತಹ ವೈಶಿಷ್ಟ್ಯ ಕಂಡು ಬರುವುದಿಲ್ಲ.

ಹ. ಆಯಿಶಾ(ರ) ತಮ್ಮ ತಂದೆ-ತಾಯಿಯ ಕುರಿತು, "ಅವರನ ಗುರುತಿಸಿದಂದಿನಿಂದ ಮುಸ್ಲಿಮರಾಗಿಯೇ ಕಂಡೆ" ಎಂದಿದ್ದಾರೆ. ತಾತ ಮಕ ವಿಜಯದ ವೇಳೆ ಮುಸ್ಲಿಮರಾಗಿ ಸಹಾಬಿಗಳ ಸಾಲಿನಲ್ಲಿ ಸೇರಿಕೊಂಡರು.

## ಬಾಲ್ಯ:

ಮಗುವಿನ ಚಲನ-ವಲನಗಳನ್ನು, ಆಸೆ-ಅಭಿರುಚಿಗಳನ್ನು ಕಂಡು ಅದ ಭವಿಷ್ಯವನ್ನು ಹೇಳಬಹುದಾಗಿದೆ. ಏಕೆಂದರೆ ಮಗುವಿನಲ್ಲಿ ಹುದುಗಿರು ಸಾಮರ್ಥ್ಯಗಳು ಗೋಚರಿಸುತ್ತವೆ. ಹ. ಆಯಿಶಾರ(ರ) ಬಾಲ್ಯವು ಇದ ಕನ್ನಡಿಯಾಗಿದೆ.

## ಮುಖಭಾವ:

ಆಯಿಶಾರು(ರ) ಬಾಲ್ಯದಿಂದಲೇ ಶ್ವೇತ ವರ್ಣ, ನಗುಮೊಗದ ಚೆಲುವೆ ತೆಳ್ಳಗಿನ ಮೈಕಟ್ಟು, ಚುರುಕು ಬುದ್ಧಿಯ ಅವರನ್ನು ಕಂಡವರು 'ಹುಮೇರಾ ಎಂದು ಕರೆಯುತ್ತಿದ್ದರು. ಅರಬಿ ಭಾಷೆಯಲ್ಲಿ 'ಹುಮೇರಾ' ಎಂದರೆ ಬೆಳ್ಳ ಹಾಗೂ ತೆಳ್ಳಗೆ ಇರುವವಳು ಎಂದರ್ಥ. ಆಯಿಶಾ(ರ) ಬಾಲ್ಯದಲ್ಲಿ ವೇಗವಾ ಓಡುವವರಾಗಿದ್ದರು. ಆಯಿಶಾ(ರ) ಹಾಗೂ ಪ್ರವಾದಿವರ್ಯರ(ಸ ವಿವಾಹವಾದ ಬಳಿಕ ಅವರೀರ್ವರ ಮಧ್ಯೆ ನಡೆದ ಓಟದ ಸ್ಪರ್ಧೆಯಲ್ ಆಯಿಶಾ(ರ) ಗೆದ್ದರು. ಬೆಳೆದಂತೆ ತೆಳ್ಳಗಿದ್ದ ಆಯಿಶಾರು(ರ) ದಷ್ಟ ಪುಷ್ಟರಾದರು

## ಆಟ-ವಿನೋದ ಹಾಗೂ ಚತುರತೆ:

ಹ. ಆಯಿಶಾರಿಗೆ(ರ) ಆಟೋಟಗಳಲ್ಲಿ ತೀವ್ರ ಆಸಕ್ತಿ. ಸಮ ವಯಸ್ಸಿನ ಗೆಳತಿಯರ ಗುಂಪನ್ನು ಕಟ್ಟಿಕೊಂಡು ಬಗೆ-ಬಗೆಯ ಆಟಗಳನ್ನು ಆಡುತ್ತಿದ್ದರು. ಗೆಳತಿಯರು ಎಂದೂ ಸಹ ಅವರಿಂದ ಮುನಿಸಿಕೊಳ್ಳುತ್ತಿರಲಿಲ್ಲ. ತಂಡದ ನಾಯಕಿಯಾಗಿ ಎಲ್ಲರನ್ನೂ ಖುಷಿಪಡಿಸುತ್ತಿದ್ದರು. ಆಟೋಟಗಳ ಸಂದರ್ಭದಲ್ಲೂ ಸಭ್ಯತೆ ಹಾಗೂ ಶಿಷ್ಟಾಚಾರಗಳನ್ನು ಪಾಲಿಸುತ್ತಿದ್ದರು.

ಹ. ಆಯಿಶಾ(ರ)ರ ತಂದೆ ಅಬೂಬಕರ್ ಸಿದ್ದೀಕ್(ರ)ರವರು ಪ್ರವಾದಿ ಮುಹಮ್ಮದ್(ಸ)ರ ಆಪ್ತಮಿತ್ರರು. ಇಸ್ಲಾಮಿನ ಕಾರ್ಯ ಚಟುವಟಿಕೆಗಳಲ್ಲಿ ಸದಾ ಒಟ್ಟಿಗೆ ಇರುತ್ತಿದ್ದರು. ಈ ಕಾರಣಕ್ಕಾಗಿ ಪ್ರವಾದಿವರ್ಯರು(ಸ) ಅಬೂಬಕರ್(ರ)ರವರ ಮನೆಗೆ ಆಗಾಗ ಬರುತ್ತಿದ್ದರು. ಈ ವೇಳೆಯಲ್ಲಿ ಆಯಿಶಾ(ರ)ರು ಸಭ್ಯತೆಯನ್ನು ಪಾಲಿಸುತ್ತಿದ್ದರು. ಆಟವನ್ನು ನಿಲ್ಲಿಸುತ್ತಿದ್ದರು ಅಥವಾ ಆಟವನ್ನು ನಿಲ್ಲಿಸಿ ಅಡಗಿಕೊಳ್ಳುತ್ತಿದ್ದರು. ಈ ದೃಶ್ಯವನ್ನು ಕಂಡ ಪ್ರವಾದಿಯವರು(ಸ) ಎಲ್ಲರನ್ನೂ ಒಟ್ಟಿಗೆ ಸೇರಿಸಿ ಆಡಲು ಹೇಳುತ್ತಿದ್ದರು.

ಹ. ಆಯಿಶಾ(ರ)ರಿಗೆ ಜೋಕಾಲಿ ಅತ್ಯಂತ ಪ್ರಿಯವಾದ ಆಟ. ಹೆಚ್ಚಿನ ಸಮಯ ಬೊಂಬೆಯಾಟದಲ್ಲಿ ಕಳೆಯುತ್ತಿದ್ದರು. ಹೊಸ ಹೊಸ ಮಾದರಿಯ ಬೊಂಬೆಗಳನ್ನು ಸ್ವತಃ ತಯಾರಿಸುತ್ತಿದ್ದರು. ಗೊಂಬೆಗಳ ತಯಾರಿಕೆಯಲ್ಲಿ ಅವರ(ರ) ತುಂಟಾಟ ವ್ಯಕ್ತವಾಗುತ್ತಿತ್ತು. ಈ ತುಂಟಾಟದ ಜೊತೆಗೆ ಒಂದೊಂದು ವಿಷಯವೂ ಅಡಗಿರುತಿತ್ತು. ಇದರಲ್ಲಿ ಅವರ ಜಾಣತನ ವ್ಯಕ್ತವಾಗುತ್ತದೆ.

ಒಂದು ಸ್ವಾರಸ್ಯಕರ ಘಟನೆ ಹೀಗಿದೆ- ಒಮ್ಮೆ ಆಯಿಶಾರು(ರ) ಗೊಂಬೆಯಾಟ ಆಡುತ್ತಿದ್ದರು. ಅಲ್ಲಿಗೆ ಪ್ರವಾದಿವರ್ಯರು(ಸ) ಆಗಮಿಸಿದರು. ಎರಡು ರೆಕ್ಕೆಗಳನ್ನು ಹೊಂದಿದ ಕುದುರೆಯನ್ನು ಕಂಡ ಪ್ರವಾದಿವರ್ಯರು(ಸ), "ಆಯಿಶಾ(ರ)! ಇದೇನಿದು, ಕುದುರೆಗೆ ರೆಕ್ಕೆಗಳು?" ಎಂದು ಪ್ರಶ್ನಿಸಿದರು. "ಹ. ಸುಲೈಮಾನ್(ಅ)ರ ಕುದುರೆಗಳಿಗೂ ರೆಕ್ಕೆಗಳಿತ್ತಲ್ಲವೇ..." ಎಂದು ತಟ್ಟನೆ ಉತ್ತರಿಸಿದರು. ಸಮಯೋಚಿತ, ಸಮಂಜಸ ಉತ್ತರ ಕೇಳಿದ ಪ್ರವಾದಿವರ್ಯರು(ಸ) ಮುಗುಳ್ನಕ್ಕರು.

ಹ. ಆಯಿಶಾರ(ರ) ಹೆತ್ತವರು ಪ್ರವಾದಿಗಳ ಕಥೆಗಳನ್ನು ಹೇಳುತ್ತಿದ್ದರು. ಆಯಿಶಾರು(ರ) ಅದನ್ನು ನೆನಪಿಡುತ್ತಿದ್ದರು. ಇದನ್ನು ತಮ್ಮ ಆಟೋಟಗಳಲ್ಲಿ ಉಪಯೋಗಿಸುತ್ತಿದ್ದರು. ಬಾಲ್ಯದ ಘಟನೆಗಳನ್ನು ಜೀವನ ಪರ್ಯಂತ ನೆನಪಿಡುವಷ್ಟು ಸ್ಮರಣ ಶಕ್ತಿಯನ್ನು ಅಲ್ಲಾಹನು ಆಯಿಶಾರಿಗೆ(ರ) ದಯಪಾಲಿಸಿದ್ದನು. ಆಟವಾಡುವ ಸಂದರ್ಭದಲ್ಲಿ ಮಾತಾಪಿತರಿಂದ ಯಾವುದೇ ಒಂದು ವಚನ ಕೇಳಿದೊಡನೆಯೇ ನೆನಪಿಡುತ್ತಿದ್ದರು.

ಆಯಿಶಾ(ರ) ಬಾಲ್ಯದಿಂದಲೇ ಬುದ್ಧಿವಂತಿಕೆ, ಚಾಣಾಕ್ಷತೆಗೆ ಪ್ರಸಿದ್ಧರಾಗಿದ್ದರು. ಅವರ(ರ) ಸ್ಮರಣಶಕ್ತಿಯು ಅದ್ಭುತವಾಗಿತ್ತು. ಪ್ರವಾದಿವರ್ಯರು(ಸ) ಹಾಗೂ ಅಬೂಬಕರ್(ರ)ರವರು ಮಕ್ಕಾದಿಂದ ಮದೀನಾಕ್ಕೆ ಹಿಜ್ರತ್ ಹೊರಟ ಸಂದರ್ಭದಲ್ಲಿ ಆಯಿಶಾರಿಗೆ(ರ) ಎಂಟು ವರ್ಷ ವಯಸ್ಸಾಗಿತ್ತು. ಹಿಜ್ರತ್‌ನ ಪ್ರತಿಯೊಂದು ಘಟನೆಯು ಆಯಿಶಾರಿಗೆ(ರ) ನೆನಪಿದ್ದವು. ಬಾಲ್ಯದ ಘಟನೆಗಳನ್ನು ಈ ರೀತಿ ನೆನಪಿಟ್ಟುಕೊಳ್ಳುವುದು ಪವಾಡವೇ ಸರಿ. ಇದು ದೇವಕೃಪೆ ಅಥವಾ ಅಲ್ಲಾಹನು ಅವರನ್ನು ಪ್ರವಾದಿ ಪತ್ನಿಯಾಗಿಸಲು ಸಿದ್ಧಗೊಳಿಸುತ್ತಿದ್ದನೋ ಎಂದೆನಿಸುತ್ತದೆ. ಏಕೆಂದರೆ 'ಉಮ್ಮುಲ್ ಮುಅ್‌ಮಿನೀನ್' ಆದ ಬಳಿಕ ಪ್ರವಾದಿಯವರ(ಸ) ಒಂದೊಂದು ವಚನವನ್ನೂ ನೆನಪಿಡುವುದು, ಅಗತ್ಯಾನುಸಾರ ಜನರಿಗೆ ತಲುಪಿಸುವುದು ಅಲ್ಲಾಹನ ಯುಕ್ತಿಯೇ ಆಗಿರಬಹುದು.

ಹ. ಆಯಿಶಾರು(ರ) 'ಉಮ್ಮುಲ್ ಮುಅ್‌ಮಿನೀನ್' ಆಗಿಲ್ಲದಿರುತ್ತಿದ್ದರೆ ಸಮುದಾಯವು ಅದೆಷ್ಟೋ ವಿಷಯಗಳಿಂದ ವಂಚಿತವಾಗುತ್ತಿತ್ತು. ಇಡೀ ಜಗತ್ತಿನ ಮಹಿಳೆಯರಲ್ಲಿ ಆಯಿಶಾರ(ರ) ಸ್ಥಾನ ಶ್ರೇಷ್ಠವಾಗಿದೆ. ಈ ಕಾರಣದಿಂದಲೇ ಆಯಿಶಾರು(ರ) ಸ್ತ್ರೀಯರಿಗೆ ಮಾದರಿಯಾಗಿದ್ದಾರೆ.

**ವಿವಾಹ:**

ಪ್ರವಾದಿವರ್ಯರ(ಸ) ಮೊದಲ ವಿವಾಹ ಖದೀಜಾ(ರ)ರೊಂದಿಗೆ ನೆರವೇರಿತ್ತು. ಆಗ ಪ್ರವಾದಿ ಮುಹಮ್ಮದ್(ಸ)ರಿಗೆ 25 ಹಾಗೂ ಖದೀಜಾ(ರ)ರಿಗೆ 40 ವರ್ಷ ವಯಸ್ಸಾಗಿತ್ತು. 40 ವರ್ಷ ಪ್ರಾಯದಲ್ಲಿ ಮುಹಮ್ಮದ್(ಸ)ರಿಗೆ ಪ್ರವಾದಿತ್ವ ಲಭಿಸಿತು. ಆಗ ಖದೀಜಾ(ರ)ರ ವಯಸ್ಸು 55 ವರ್ಷ. ಪ್ರವಾದಿಗಳಾಗಿ ನೇಮಕಗೊಂಡ ಬಳಿಕ ಮುಹಮ್ಮದ್(ಸ)ರು ಕುರೈಶ್ ಗೋತ್ರದ ನಾಯಕರ ಪೀಡನೆ ಬಗ್ಗೆ ತಿಳಿದಿದ್ದರು. ಈ ಎಲ್ಲಾ ಸಂಕಷ್ಟಗಳ ವೇಳೆ ಖದೀಜಾ(ರ)ರು ಮುಹಮ್ಮದ್(ಸ)ರೊಂದಿಗೆ ಇದ್ದದ್ದು ಮಾತ್ರವಲ್ಲ, ತನ್ನೆಲ್ಲಾ ಸಂಪತ್ತನ್ನು ವ್ಯಯಿಸಿದರು. ಖದೀಜಾ(ರ)ರು ತಮ್ಮ 65ನೇ ವಯಸ್ಸಿನಲ್ಲಿ ನಿಧನರಾದರು. ಅದೇ ವರ್ಷ ತನ್ನ ಪ್ರೀತಿಯ ಚಿಕ್ಕಪ್ಪ ಅಬೂತಾಲಿಬ್‌ರನ್ನು ಕಳಕೊಂಡರು. ಈ ಸಂದರ್ಭದಲ್ಲಿ ಆಪ್ತಮಿತ್ರ ಅಬೂಬಕರ್(ರ)ರವರು ಪ್ರವಾದಿಯವರ(ಸ) ಗುರಾಣಿಯಾದರು. ಆದರೆ ಪತ್ನಿಯ ವಿಯೋಗದಿಂದ ಉಂಟಾದ ನೋವನ್ನು ಆಪ್ತಮಿತ್ರರಿಂದಲೂ ನಿವಾರಿಸಲು ಸಾಧ್ಯವಾಗಲಿಲ್ಲ. ಸಹಾಬಿಗಳು ಪ್ರವಾದಿಯವರನ್ನು(ಸ) ಕಂಡು ಮರುಗುತ್ತಿದ್ದರು ಹಾಗೂ ಸಂತೈಸುತ್ತಿದ್ದರು.

ಈ ಸಮಯದಲ್ಲಿ ಅವರು ಒಂದು ಕನಸು ಕಂಡರು. ಓರ್ವ ದೇವಚರ ರೇಷ್ಮೆ ಬಟ್ಟೆಯಿಂದ ಸುತ್ತಿದ್ದ ಒಂದು ವಸ್ತುವನ್ನು ಪ್ರವಾದಿ(ಸ)ರಿಗೆ ನೀಡಿದರು. 'ಇದರಲ್ಲೇನಿದೆ?" ಎಂದು ಪ್ರವಾದಿ(ಸ) ಪ್ರಶ್ನಿಸಿದರು. "ಈಕೆ ನಿಮ್ಮ ಪತ್ನಿ" ಎಂಬ ಉತ್ತರ ಸಿಕ್ಕಿತು. ಬಟ್ಟೆಯನ್ನು ಸರಿಸಿ ನೋಡಿದಾಗ ಆಯಿಶಾ(ರ)ರನ್ನು ಕಂಡರು.

ಪ್ರವಾದಿಯವರ(ಸ) ಕುಟುಂಬದಲ್ಲಿದ್ದ ಓರ್ವ ಪ್ರಸಿದ್ಧ ಸಹಾಬಿ ಹ. ಉಸ್ಮಾನ್ ಬಿನ್ ಮಝ್‌ಊನ್(ರ)ರವರ ಪತ್ನಿ ಖೌಲ ಬಿಂತಿ ಹಕೀಮ್(ರ) ಒಂದು ದಿನ ಪ್ರವಾದಿಯವರ(ಸ) ಬಳಿ ಬಂದು ನೀವು ಮರುವಿವಾಹವಾಗಿರಿ ಎಂದು ವಿವಾಹದ ಪ್ರಸ್ತಾಪವಿತ್ತರು. "ಯಾರೊಂದಿಗೆ?" ಎಂದು ಪ್ರವಾದಿಯವರು(ಸ) ಪ್ರಶ್ನಿಸಿದರು. "ಓರ್ವ ವಿಧವೆ ಹಾಗೂ ಓರ್ವ ಅವಿವಾಹಿತೆ ಹೆಣ್ಣು. ನಿಮ್ಮಿಚ್ಚೆಯಂತೆ ಅವರೀರ್ವರಲ್ಲಿ ಒಬ್ಬರನ್ನು ವಿವಾಹವಾಗಿರಿ" ಎಂದರು ಖೌಲ. ಪ್ರವಾದಿಯವರು(ಸ) ಅವರಿಬ್ಬರ ಬಗ್ಗೆ ವಿಚಾರಿಸಿದರು. "ವಿಧವೆ ಸೌದಾ ಬಿಂತಿ ಝಮ್‌ಅ(ರ) ಹಾಗೂ ಅವಿವಾಹಿತೆ ನಿಮ್ಮ ಮಿತ್ರ ಅಬೂಬಕರ್(ರ)ರ ಪುತ್ರಿ ಆಯಿಶಾ(ರ)" ಎಂದರು.

ಪ್ರವಾದಿಯವರು(ಸ) ವಿವಾಹ ಪ್ರಸ್ತಾಪ ಇಡುವಂತೆ ಖೌಲ(ರ)ರಲ್ಲಿ ಕೇಳಿಕೊಂಡರು. ಖೌಲ(ರ)ರು ಅಬೂಬಕರ್(ರ)ರಲ್ಲಿ ಪ್ರಸ್ತಾಪಿಸಿದಾಗ ಅವರು(ರ) ಸಮ್ಮತಿಸಿದರು. ಹೀಗೆ ಅವರಿಬ್ಬರ ವಿವಾಹ ಜರುಗಿತು. ವಿವಾಹವಾದಾಗ ಆಯಿಶಾ(ರ)ರಿಗೆ ಆರು ವರ್ಷ ವಯಸ್ಸಾಗಿತ್ತು. ಚಿಕ್ಕ ಪ್ರಾಯದಲ್ಲಿ ಮನೆಯ ಜವಾಬ್ದಾರಿ ಅಸಾಧ್ಯ ಎಂದು ಭಾವಿಸಿ ಪ್ರವಾದಿಯವರು(ಸ) ಪುನಃ ಸೌದಾ(ರ)ರೊಂದಿಗೆ ವಿವಾಹವಾದರು. ಸೌಧ(ರ)ರವರು ಮನೆಯ ಉಸ್ತುವಾರಿಯನ್ನು ವಹಿಸಿಕೊಂಡು ಆದರ್ಶ ಪತ್ನಿಯ ಹೊಣೆಗಾರಿಕೆಯನ್ನು ನಿಭಾಯಿಸಿದರು.

ಆಯಿಶಾ(ರ)ರವರ ವಿವಾಹವು ಅತ್ಯಂತ ಸರಳವಾಗಿ ನೆರವೇರಿತು. ಅತಿಯ್ಯಾ(ರ) ಹೇಳುತ್ತಾರೆ, "ಆಯಿಶಾ(ರ)ರವರು ಚಿಕ್ಕ ಮಕ್ಕಳೊಂದಿಗೆ ಆಟವಾಡುತ್ತಿದ್ದರು. ದಾದಿ ಬಂದು ಅವರನ್ನು(ರ) ಕರೆದುಕೊಂಡು ಹೋದರು. ಅಬೂಬಕರ್(ರ)ರವರು ಮಗಳ ನಿಕಾಹ್ ನೆರವೇರಿಸಿದರು."

ಇಂದು ಅದ್ದೂರಿಯ, ಆಡಂಬರದ, ದುಂದುವೆಚ್ಚದ ಮದುವೆಗಳು ಜರುಗುತ್ತಿವೆ. ಧಾರಾಳ ವರದಕ್ಷಿಣೆ ನೀಡಲಾಗುತ್ತದೆ. ನಿಶ್ಚಿತಾರ್ಥ ಹಾಗೂ ಇತರ ಸಂಪ್ರದಾಯಗಳು ಎಗ್ಗಿಲ್ಲದೆ ಸಾಗುತ್ತಿವೆ. ಸಾಲದಲ್ಲೇ ಹುಟ್ಟಿ, ಸಾಲದಲ್ಲೇ ಬದುಕಿ, ಸಾಲದಲ್ಲೇ ಸಾಯುವ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ನಮ್ಮ

ಪ್ರತಿಷ್ಠೆಗಾಗಿ ಅದ್ದೂರಿ ಮದುವೆಗಳು ಜರುಗುವುದಾದರೆ ಧರ್ಮದ ರಕ್ಷಣ
ಸಾಧ್ಯವೇ? ಚಾರಿತ್ರ್ಯವಂತ ಅಳಿಯನು ಸಿಗುವನೇ, ಪ್ರವಾದಿಯವರ(ಸ
ಸಹಾಬಿಗಳ(ರ) ವಿವಾಹದ ಮಾದರಿಗಳನ್ನು ಅನುಸರಿಸಲು ಹಿಂಜರಿಕೆ ಏ
ಇತ್ಯಾದಿ ಪ್ರಶ್ನೆಗಳು ಕಾಡುತ್ತವೆ. ಆದರ್ಶ ವ್ಯಕ್ತಿಗಳ ಮಾದರಿಯನ್ನು ಕಡೆಗಣಿ
ಭವಿಷ್ಯದಲ್ಲಿ ನಿಮ್ಮ ನಾಶಕ್ಕೆ ದುಃಖಿಸಬೇಡಿ. ಸ್ವತಃ ರೋಗಕ್ಕೆ ಆಹ್ವಾ
ನೀಡುವವರು ಅದಕ್ಕೆ ಯಾವುದೇ ಮದ್ದಿಲ್ಲ ಎಂಬುದನ್ನು ಅರಿತುಕೊಳ್ಳಿ.

**ವಿದಾಯ:**

ಆಯಿಶಾ(ರ)ರು ವಿವಾಹದ ಬಳಿಕ ಮೂರು ವರ್ಷಗಳ ಕಾಲ ತವರು
ಮನೆಯಲ್ಲೇ ಉಳಿದುಕೊಂಡರು. ಮೂರನೇ ವರ್ಷ ಪ್ರವಾದಿಯವರು(ಸ)
ಮದೀನಾಕ್ಕೆ ಹಿಜ್ರತ್ ಹೋದರು. ತನ್ನ ಮಗಳು ಹಾಗೂ ಸೌದಾ(ರ)ರನ್ನು
ಕರೆತರಲು ಓರ್ವ ವ್ಯಕ್ತಿಯನ್ನು ಮಕ್ಕಾಕ್ಕೆ ಕಳುಹಿಸಿದರು. ಅಬೂಬಕರ್(ರ)ರವರೂ
ತನ್ನ ಕುಟುಂಬದವರನ್ನು ಕರೆತರಲು ಓರ್ವ ವ್ಯಕ್ತಿಯನ್ನು ಕಳುಹಿಸಿದರು
ಪ್ರವಾದಿಯವರ(ಸ) ಪುತ್ರಿಯರಾದ ಫಾತಿಮಾ(ರ) ಹಾಗೂ ಉಮ್ಮು
ಕುಲ್ಸೂಮ್(ರ), ಪತ್ನಿ ಸೌದಾ(ರ)ರೊಂದಿಗೆ ಆಯಿಶಾ(ರ) ಮತ್ತವರ ತಾಯಿ
ಉಮ್ಮು ರುಮಾನ(ರ) ಮದೀನಾ ತಲುಪಿದರು.

ಆಯಿಶಾ(ರ)ರು ಮದೀನಾ ತಲುಪಿ ತನ್ನ ತಂದೆ ಅಬೂಬಕರ್(ರ)ರ
ಮನೆ ಸೇರಿದರು. ಆಯಿಶಾ(ರ)ರಿಗೆ ಹೊಸ ವಾತಾವರಣ ಒಗ್ಗದೆ ಕಾಯಿಲೆ
ಬಿದ್ದರು. ಅವರ(ರ) ತಲೆಗೂದಲು ಉದುರಲಾರಂಭಿಸಿತು. ಗುಣಮುಖರಾದ
ಬಳಿಕ ಅಬೂಬಕರ್(ರ)ರು “ನಿಮ್ಮ ಮನೆಗೆ ಕರೆಯಿರಿ” ಎಂದರು.
"ಮಹ್ರ್(ವಧುದಕ್ಷಿಣೆ) ನೀಡಲು ನನ್ನ ಬಳಿ ಹಣವಿಲ್ಲ" ಎಂದರು
ಪ್ರವಾದಿಯವರು(ಸ). ಆ ಹಣವನ್ನು ಸ್ವತಃ ಅಬೂಬಕರ್(ರ)ರೇ ನೀಡಿದರು.
ವಧುದಕ್ಷಿಣೆ ನೀಡಿ ಆಯಿಶಾ(ರ)ರನ್ನು ಕರೆಯಿಸಿಕೊಂಡರು.

ನಾವು ಪ್ರವಾದಿಯವರ(ಸ) ಚರ್ಯೆಯ ಪಾಲನೆ ಮಾಡುತ್ತಿದ್ದೇವೆಯೇ?
ಎಷ್ಟು ಮಂದಿ ಪ್ರಾಮಾಣಿಕವಾಗಿ ವಧುದಕ್ಷಿಣೆ ನೀಡುತ್ತಿದ್ದಾರೆ? ಆಯಿಶಾ(ರ)ರು
ಪ್ರವಾದಿಯವರ(ಸ) ಮನೆ ಪ್ರವೇಶಿಸಿದಾಗ ಅವರ ಆತಿಥ್ಯದ ಸ್ವಾರಸ್ಯಕರ
ಘಟನೆ ಕೇಳಿರಿ. ಅಸ್ಮಾ ಬಿಂತಿ ಯಝೀದ್(ರ) ಹೇಳುತ್ತಾರೆ, "ಆಯಿಶಾ(ರ)ರು
ಪ್ರವಾದಿಯವರ(ಸ) ಮನೆಗೆ ಬಂದಾಗ ನಾನು ಅಲ್ಲಿದ್ದೆ. ಅಂದು
ಪ್ರವಾದಿಯವರ(ಸ) ಮನೆಯಲ್ಲಿ ಒಂದು ಲೋಟ ಹಾಲಿತ್ತು.
ಪ್ರವಾದಿಯವರು(ಸ) ಸ್ವಲ್ಪ ಕುಡಿದು ಆಯಿಶಾ(ರ)ರಿಗೆ ನೀಡಿದರು. ಅವರು
ನಾಚಿಕೆಗೊಂಡರು. “ಪ್ರವಾದಿಯವರ(ಸ) ಉಡುಗೊರೆ ಹಿಂದಿರುಗಿಸಬೇಡಿ”

ಎಂದು ನಾನು ಹೇಳಿದೆ. ಅವರು(ರ) ನಾಚಿಕೊಂಡೇ ಕೊಂಚ ಹಾಲು ಕುಡಿದು ಲೋಟವನ್ನು ಕೆಳಗಿಟ್ಟರು. ಪ್ರವಾದಿಯವರು(ಸ) "ನಿಮ್ಮ ಸ್ನೇಹಿತೆಯರಿಗೆ ನೀಡಿರಿ" ಎಂದರು. "ಯಾ ರಸೂಲಲ್ಲಾಹ್! ನಮಗೆ ಹಸಿವಿಲ್ಲ" ಎಂದವರು ಉತ್ತರಿಸಿದರು. "ಸುಳ್ಳು ಹೇಳದಿರಿ. ಒಂದೊಂದು ಸುಳ್ಳು ಅಲ್ಲಾಹನ ಬಳಿ ದಾಖಲಾಗುತ್ತದೆ" ಎಂದರು.

ಆಯಿಶಾ(ರ)ರ ವಿವಾಹವು ಅರೇಬಿಯಾದ ಮೂರು ದುಷ್ಟ ಸಂಪ್ರದಾಯಗಳನ್ನು ತೊಡೆದು ಹಾಕಿತು.

ಮೊದಲನೆಯದಾಗಿ, ಅರಬರು ಶವ್ವಾಲ್ ತಿಂಗಳಲ್ಲಿ ವಿವಾಹ ಏರ್ಪಾಟು ಮಾಡುತ್ತಿರಲಿಲ್ಲ, ಮಧುಮಕ್ಕಳಿಗೆ ವಿದಾಯ ಕೋರುತ್ತಿರಲಿಲ್ಲ. ಆದರೆ ಆಯಿಶಾ(ರ)ರ ವಿವಾಹ ಮತ್ತು ವಿದಾಯ ಶವ್ವಾಲ್ ತಿಂಗಳಲ್ಲೇ ನಡೆಯಿತು. ಅರಬರ ಪ್ರಕಾರ ಶವ್ವಾಲ್ ತಿಂಗಳು ಅಶುಭವಾಗಿತ್ತು. ಯಾವುದೇ ತಿಂಗಳು ಅಶುಭವಲ್ಲವೆಂದು ಇಸ್ಲಾಮ್ ಸಾರಿತು.

ಎರಡನೆಯದಾಗಿ, ಅರಬರಲ್ಲಿ ಮಲ ಸಹೋದರನ ಮಗಳ ಜೊತೆ ವಿವಾಹ ನಿಷಿದ್ಧವಾಗಿತ್ತು. ಅಬೂಬಕರ್(ರ)ರು ಪ್ರವಾದಿಯವರ(ಸ) ಮಲ ಸಹೋದರರಾಗಿದ್ದರು. ಹೀಗೆ ಮಲ ಸಹೋದರನ ಮಗಳೊಂದಿಗೆ ನೆರವೇರುವ ವಿವಾಹವು ಧರ್ಮಬದ್ಧವಾಯಿತು.

ಮೂರನೆಯದಾಗಿ, ಮದುಮಗಳಿಗೆ ವಿದಾಯ ಕೋರುವ ಸಂದರ್ಭದಲ್ಲಿ ದಿಬ್ಬಣದ ಮುಂದೆ ಬೆಂಕಿ ಉರಿಸಲಾಗುತ್ತಿತ್ತು. ಆದರೆ ಆಯಿಶಾ(ರ)ರ ವಿದಾಯ ಸಂದರ್ಭದಲ್ಲಿ ಈ ಆಚರಣೆಯನ್ನು ನೆರವೇರಿಸಲಿಲ್ಲ.

ಆಯಿಶಾ(ರ)ರು ಹೇಳುತ್ತಾರೆ, "ನನ್ನ ವಿವಾಹವು ರೂಢಿ, ಸಂಪ್ರದಾಯಗಳಿಂದ ಮುಕ್ತವಾಗಿತ್ತು. ನಾನೇ ಅದೃಷ್ಟಶಾಲಿ ಎಂದು ಭಾವಿಸುತ್ತೇನೆ. ಇದರಿಂದ ನನಗೆ ಯಾವುದೇ ಅನಾಹುತ ಸಂಭವಿಸಲಿಲ್ಲ. ಅಲ್ಲಾಹನಿಗೆ ಸ್ತುತಿ" ಎಂದರು.

## ಶಿಕ್ಷಣ ಮತ್ತು ತರಬೇತಿ:

ಶಿಕ್ಷಣವೆಂದರೆ ಓದು-ಬರಹವೆಂದು ಅರ್ಥೈಸಲಾಗಿದೆ. ಆದರೆ, ಅದು ಶಿಕ್ಷಣದ ಒಂದು ಭಾಗ ಮಾತ್ರ. ಓದು-ಬರಹ ಬಾರದವರೂ ಜ್ಞಾನಿಗಳಾಗಬಹುದು. ಅನಕ್ಷರಸ್ಥರಾದರೂ ಬಡಗಿ, ದರ್ಜಿ, ಶಿಲ್ಪಿ, ಅಡುಗೆಯವರು ತಮ್ಮ ವೃತ್ತಿಯಲ್ಲಿ ಪ್ರವೀಣರಾಗಿರುತ್ತಾರೆ. ಅನಕ್ಷರಸ್ಥ ತಾಯಿಯು ತನ್ನ ಮಕ್ಕಳ ಪಾಲನೆ-ಪೋಷಣೆ ಅಚ್ಚುಕಟ್ಟಾಗಿ ನಿಭಾಯಿಸಬಲ್ಲಳು. ಇಡೀ

ಕುಟುಂಬವನ್ನು ಶಿಸ್ತುಬದ್ಧವಾಗಿ ಮುನ್ನಡೆಸುತ್ತಾಳೆ. ಆದರೆ, ಬಾಯಿ ಮಾತಿನಿಂದ ಕಲಿತ ವಿಷಯಗಳನ್ನು ದಾಖಲಿಸಲು ಓದು-ಬರಹದ ಅಗತ್ಯವಿದೆ. ಬಾಯಿ ಮಾತಿನಿಂದ ಕಲಿತ ವಿಷಯಗಳು ಒಂದು ಕಾಲಕ್ಕೆ ಅಳಿದು ಹೋಗಬಹುದು. ಆದರೆ ಬರಹ ರೂಪದಲ್ಲಿ ದಾಖಲಿಸಿದ ವಿಷಯಗಳು ಕಾಲ ಕಾಲಕ್ಕೂ ಪ್ರಯೋಜನಕ್ಕೆ ಬರುತ್ತವೆ. ಅವು ಭಾಷಾಂತರಗೊಂಡು ವಿಶ್ವವ್ಯಾಪಿಯಾಗುತ್ತವೆ. ಜ್ಞಾನವು ಅಷ್ಟ ದಿಕ್ಕುಗಳಿಗೂ ಪಸರಿಸುತ್ತದೆ. ಸಾಕ್ಷರರು ಪ್ರಾಚೀನ ಸಾಹಿತ್ಯಗಳನ್ನು ಬಳಸಿ ಅದರೊಂದಿಗೆ ತಮ್ಮ ಜ್ಞಾನವನ್ನು ತುಂಬಿ ನೂತನ ಸಾಹಿತ್ಯ ಕ್ಷೇತ್ರಕ್ಕೆ ಸಮರ್ಪಿಸುತ್ತಾರೆ. ಹೀಗೆ ಜ್ಞಾನವು ನದಿಯಂತೆ ಹರಿದು ವಿಸ್ತೃತಗೊಳ್ಳುತ್ತದೆ. ಸಾಕ್ಷರರ ಜ್ಞಾನದ ಆಧಾರದಲ್ಲಿ ಬೃಹತ್ ಸಾಹಿತ್ಯವು ಸಂಯೋಜನೆಗೊಳ್ಳುತ್ತದೆ.

ನಾವು ಕಾಣುತ್ತಿರುವ ವ್ಯಕ್ತಿಗಳು ಹಾಗೂ ಆ ವೃತ್ತಿ ಕುಶಲರು ಅಲ್ಪಕಾಲದಲ್ಲಿ ಜ್ಞಾನಗಳಿಸಿದವರಲ್ಲ. ಇದರ ಹಿಂದೆ ಅನುಭವಸ್ಥರ ಹಲವಾರು ವರ್ಷಗಳ ಪರಿಶ್ರಮವಿದೆ. ಅವರು ಪ್ರತಿಯೊಂದು ವಿಷಯಗಳನ್ನು ಲೇಖನಿಯ ಮೂಲಕ ಕ್ರೋಢೀಕರಿಸಿದ್ದಾರೆ. ಇಂದು ಸಾಹಿತ್ಯ ಲೋಕವು ಕಲೆಯ ಬೀಡಾಗಿದೆ. ಇವೆಲ್ಲವೂ ಓದು-ಬರಹದ ಫಲವಾಗಿದೆ.

ಓದು-ಬರಹದ ಮಹತ್ವವನ್ನು ಪ್ರವಾದಿಯವರು(ಸ) ಅರಿತಿದ್ದರು. ಬದ್ರ್ ಯುದ್ಧದ ವಿಜಯದ ಬಳಿಕ ಕೈದಿಗಳು ಪ್ರವಾದಿಯವರ(ಸ) ಸಮಕ್ಷಮ ಹಾಜರಿದ್ದರು. ಹತ್ತು ಜನ ಮುಸ್ಲಿಮರಿಗೆ ಓದು-ಬರಹ ಕಲಿಸಿಕೊಟ್ಟ ಕೈದಿಯನ್ನು ಬಿಡುಗಡೆಗೊಳಿಸಲಾಗುವುದು ಎಂದು ಪ್ರವಾದಿಯವರು(ಸ) ತೀರ್ಮಾನಿಸಿದರು. ಈ ಘಟನೆಯು ಪ್ರವಾದಿಯವರು(ಸ) ವಿದ್ಯೆಗೆ ನೀಡಿದ ಮಹತ್ವವನ್ನು ಸಾರುತ್ತದೆ.

**ಪ್ರಾಚೀನ ಕಾಲದ ಅರಬರ ಸ್ವಭಾವ:**

ಪ್ರವಾದಿಯವರ(ಸ) ಆಗಮನಕ್ಕೆ ಮೊದಲು ಅಜ್ಞಾನ ಕಾಲದ ಅರಬರಿಗೆ ತಮ್ಮ ಸ್ಮರಣಶಕ್ತಿಯ ಮೇಲೆ ಅಭಿಮಾನವಿತ್ತು. ಹಲವು ಪೀಳಿಗೆಗಳ ಇತಿಹಾಸವನ್ನು ನೆನಪಿಟ್ಟುಕೊಳ್ಳುತ್ತಿದ್ದರು. ಒಂಟೆಗಳ ಪೂರ್ವಜರನ್ನೂ ಸಹ ನೆನಪಿಡುತ್ತಿದ್ದರು. ಇದೇ ರೀತಿ ತಮ್ಮ ವಂಶಾವಳಿಯನ್ನೂ ನೆನಪಿಡುತ್ತಿದ್ದರು. ಕಾವ್ಯಗಳ ಸ್ಥಿತಿಯೂ ಹೀಗೆಯೇ ಮುಂದವರೆದಿತ್ತು. ಜ್ಞಾಪಕಶಕ್ತಿಯಲ್ಲಿ ದುರ್ಬಲರೇ ಬರೆದಿಡುತ್ತಾರೆಂದು ಗರ್ವದಿಂದ ಹೇಳಿಕೊಳ್ಳುತ್ತಿದ್ದರು. ಪ್ರವಾದಿಯವರು(ಸ) ಅರಬ ಮಧ್ಯೆ ಪ್ರವಾದಿಯಾಗಿ ನೇಮಕಗೊಂಡದ್ದು ಅಲ್ಲಾಹನ ಯುಕ್ತಿಯೇ ಸರಿ. ಕುರ್‌ಆನ್ ಕಂಠಪಾಠ ಮಾಡಲು, ಪ್ರವಾದಿ ವಚನಗಳನ್ನು ಕಲಿಯಲು ಧರ್ಮದ ಜ್ಞಾನವನ್ನು ಮುಂದಿನ ಪೀಳಿಗೆಗೆ ರವಾನಿಸಲು ಇದು ಅಲ್ಲಾಹನ ತೀರ್ಮಾನವಾಗಿತ್ತು.

ಪ್ರವಾದಿಯವರು(ಸ) ಸಂದೇಶ ಪ್ರಚಾರ ಆರಂಭಿಸಿದಾಗ 17 ಮಂದಿ ಮಾತ್ರ ಓದು-ಬರಹ ಬಲ್ಲವರಿದ್ದರೆಂದು ಇತಿಹಾಸ ಗ್ರಂಥಗಳಲ್ಲಿ ಉಲ್ಲೇಖವಿದೆ. ಇವರಲ್ಲಿ ಶಿಫಾ ಬಿಂತಿ ಅಬ್ದುಲ್ಲಾ ಅದ್‌ವೀಯಾ ಹೆಸರಿನ ಓರ್ವ ಮಹಿಳೆ ಇದ್ದರು. ಇಸ್ಲಾಮಿನ ಮಾರ್ಗದರ್ಶನದಂತೆ ಅರಬರು ಓದು-ಬರಹವನ್ನು ಕಲಿಯ ತೊಡಗಿದರು. ಸಾಮರ್ಥ್ಯಕ್ಕನುಸಾರವಾಗಿ ವಂಶವೃಕ್ಷ, ಪ್ರಾಣಿಗಳ ವಂಶಾವಳಿ, ಕಥೆ, ಕವನ ಮುಂತಾದುವುಗಳನ್ನು ಲೇಖನಿಯ ಮೂಲಕ ಸಂಗ್ರಹಿಸತೊಡಗಿದರು. ಪ್ರವಾದಿಯುವರಿಗೆ(ಸ) ಅವತೀರ್ಣಗೊಂಡ ದಿವ್ಯವಾಣಿಯನ್ನು ಅಕ್ಷರಸ್ಥ ಸಹಾಬಿಗಳು(ರ) ದಾಖಲಿಸಿಕೊಂಡರು. ಪ್ರವಾದಿ ವಚನಗಳನ್ನು ಸಹ ದಾಖಲಿಸಿದರು.

## ಪರಮಜ್ಞಾನದ ಅರ್ಥ:

ಜಗತ್ತಿನಾದ್ಯಂತ ವ್ಯಾಪಿಸಿರುವ ವೃತ್ತಿಗಳನ್ನು ಕಲಿಯಲು ಜ್ಞಾನದ ಅಗತ್ಯವಿದೆ. ವೈದ್ಯಕೀಯ, ಕಟ್ಟಡ ನಿರ್ಮಾಣ, ಕಲೆ-ಸಾಹಿತ್ಯ, ವ್ಯವಹಾರದ ಜ್ಞಾನ, ಉಡುಗೆ-ತೊಡುಗೆ, ನಗರದ ಬದುಕು, ಬಟ್ಟೆ ಸಿದ್ಧಪಡಿಸುವುದು, ಅಡುಗೆ ತಯಾರಿ ಇತ್ಯಾದಿ. ಈ ವಿದ್ಯೆಗಳ ಬಗ್ಗೆ ಬೃಹತ್ ಗ್ರಂಥಗಳೇ ರಚನೆಗೊಂಡಿವೆ.

ಅಲ್ಲಾಹನು ಪ್ರವಾದಿಯವರ(ಸ) ಮೂಲಕ ಶಿಕ್ಷಣವನ್ನು ಜಗತ್ತಿಗೆ ಸಾರಿದನು. ಈ ಶಿಕ್ಷಣದ ಅರ್ಥ ಅಲ್ಲಾಹನ ಧರ್ಮದ ಜ್ಞಾನವಾಗಿದೆ. ಅಲ್ಲಾಹ್ ಮತ್ತು ದಾಸರ ನಡುವಿನ ಸಂಬಂಧವೇನು? ಹಕ್ಕು-ಕರ್ತವ್ಯಗಳೇನು? ಯಾವುದರ ಪಾಲನೆ ಮಾಡಬೇಕು? ಈ ಜಗತ್ತು ಶಾಶ್ವತವೋ, ನಶ್ವರವೋ? ಮರಣದ ಬಳಿಕ ಪುನಃ ಜೀವಂತಗೊಳಿಸಲಾಗುವುದೇ, ಇಲ್ಲವೇ? ಒಳಿತು-ಕೆಡುಕುಗಳ ಪ್ರತಿಫಲ ದೊರಕುವುದೇ? ಧರ್ಮಬದ್ಧ ವಿಷಯಗಳೇನು? ಧರ್ಮನಿಷಿದ್ಧ ವಿಷಯಗಳೇನು? ಒಳಿತು-ಕೆಡುಕುಗಳಾವುವು? ನೈತಿಕತೆ-ಅನೈತಿಕತೆಗಿರುವ ವ್ಯತ್ಯಾಸವೇನು? ಈ ಎಲ್ಲಾ ವಿಷಯಗಳನ್ನು ಅರಿಯುವುದು ಪ್ರತಿಯೊಬ್ಬ ಮುಸ್ಲಿಮನಿಗೆ ಕಡ್ಡಾಯವಾಗಿದೆ. ಜನಸಾಮಾನ್ಯರಿಗೆ ಈ ಬಗ್ಗೆ ಅರ್ಥೈಸಿಕೊಡುವುದು ವಿದ್ವಾಂಸರ ಕರ್ತವ್ಯವಾಗಿದೆ.

## ಬಾಲ್ಯದಲ್ಲಿ ಜ್ಞಾನದ ಗಳಿಕೆ:

ಶಿಕ್ಷಣದ ಮೂಲಭೂತ ವಿಷಯಗಳನ್ನು ಕಲಿಯಲು ಬಾಲ್ಯ ಜೀವನವು ಅಮೂಲ್ಯವಾದುದು. ಬಾಲ್ಯದಲ್ಲಿ ನೆನಪಿನ ಶಕ್ತಿಯು ತೀಕ್ಷ್ಣವಾಗಿರುತ್ತದೆ. ಬಾಲ್ಯದಲ್ಲಿ ಕಂಠಸ್ಥ ಮಾಡಿದ ವಿಷಯಗಳನ್ನು ಮುಂದಿನ ಬದುಕಿಗೆ

ಪೂರಕವಾಗಿರುತ್ತದೆ. ಆದ್ದರಿಂದ ಪ್ರತಿಯೊಂದು ಜನಾಂಗವು ತಮ್ಮ ಮಕ್ಕಳಿಗೆ ಬಾಲ್ಯದಿಂದ ಕಲಿಕೆ ಆರಂಭಿಸುತ್ತದೆ. ಅದು ಲೌಕಿಕ ಅಥವಾ ಆಧ್ಯಾತ್ಮಿಕವಾಗಿರಬಹುದು.

## ಆಯಿಶಾ(ರ)ರ ಸೌಭಾಗ್ಯ

ಸತ್ಯವಿಶ್ವಾಸಿಗಳ ಮಾತೆಯವರಲ್ಲಿ ಅತೀ ಸಣ್ಣ ಪ್ರಾಯದವರೆಂದರೆ ಹ.ಆಯಿಶಾ(ರ). ಉಳಿದವರು ವಿಧವೆಯರಾಗಿದ್ದು ಪ್ರವಾದಿವರ್ಯರೊಂದಿಗೆ ವಿವಾಹವಾದವರು. ಪ್ರಥಮ ವಿವಾಹವಾದಾಗ ಖತೀಜಾ(ರ)ರಿಗೆ 40 ವರ್ಷ ಹಾಗೂ ಪ್ರವಾದಿವರ್ಯರಿಗೆ(ಸ) 25 ವರ್ಷ ವಯಸ್ಸಾಗಿತ್ತು. ಈ ವಿವಾಹದ 15 ವರ್ಷಗಳ ಬಳಿಕ ಅವರಿಗೆ(ಸ) ಪ್ರವಾದಿತ್ವ ಲಭಿಸಿತ್ತು. ಆಗ ಖತೀಜಾ(ರ)ರಿಗೆ 55 ವರ್ಷ ವಯಸ್ಸಾಗಿತ್ತು. ಪ್ರವಾದಿತ್ವ ಲಭಿಸಿದ 10 ವರ್ಷಗಳೊಳಗೆ ಖತೀಜಾ(ರ)ರು ನಿಧನರಾದರು. ಹೀಗೆ ಸುಮಾರು 25 ವರ್ಷಗಳ ಕಾಲ ಖದೀಜಾ(ರ)ರೊಬ್ಬರೇ ಪ್ರವಾದಿವರ್ಯರ(ಸ) ಬಾಳಸಂಗಾತಿಯಾಗಿದ್ದರು. ಅವರ 15 ವರ್ಷಗಳ ಅನುಭವದಂತೆ, "ಪ್ರವಾದಿವರ್ಯರು(ಸ) ಓರ್ವ ಅತ್ಯುತ್ತಮ ಚಾರಿತ್ರ್ಯವಂತ ಹಾಗೂ ಪರಿಪೂರ್ಣ ವ್ಯಕ್ತಿಯಾಗಿದ್ದಾರೆ." ಇಸ್ಲಾಮ್ ಸ್ವೀಕರಿಸಿದ ಪ್ರಥಮ ಮಹಿಳೆ ಖತೀಜಾ(ರ) ಆಗಿದ್ದಾರೆ. ಪ್ರವಾದಿವರ್ಯರ(ಸ) ಗುಣಗಳನ್ನಾಧರಿಸಿ ಅವರು 'ಅಲ್ಲಾಹನ ಪ್ರವಾದಿಯಾಗಿದ್ದಾರೆ' ಎಂದು ಅಚಲ ನಂಬಿಕೆಯೊಂದಿಗೆ ಹೇಳಿದ್ದರು. ಖದೀಜಾ(ರ)ರು ಇಸ್ಲಾಮಿನಲ್ಲಿ ಅಚಲರಾಗಿದ್ದರು. ತನ್ನ ಸರ್ವ ಸಂಪತ್ತನ್ನು ಧರ್ಮದ ಉತ್ಥಾನಕ್ಕಾಗಿ ಸಮರ್ಪಿಸಿದರು. ಪ್ರವಾದಿವರ್ಯರ(ಸ) ರಕ್ಷಣೆಗಾಗಿ ಜೀವದ ಹಂಗು ತೊರೆದು ಹೋರಾಟಕ್ಕಿಳಿದರು. ದೇವ ಮಾರ್ಗದಲ್ಲಿ ತ್ಯಾಗ ಬಲಿದಾನಗಳು ನೀಡುವಂತೆ ಮಕ್ಕಳನ್ನು ತರಬೇತುಗೊಳಿಸಿದರು. ಸಂಕಷ್ಟದ ದಿನಗಳಲ್ಲಿ ಪ್ರವಾದಿವರ್ಯರಿಗೆ(ಸ) ಬೆನ್ನೆಲುಬಾಗಿ ನಿಂತರು. ಪ್ರವಾದಿವರ್ಯರ(ಸ) ಯಾವ ಪತ್ನಿಯೂ ಖದೀಜಾ(ರ)ರ ತ್ಯಾಗ ಬಲಿದಾನಗಳಿಗೆ ಸಾಟಿಯಲ್ಲ ಎಂಬುದು ಸತ್ಯ. ಅವರ(ರ) ಸೇವೆಯನ್ನು ಪ್ರವಾದಿವರ್ಯರು(ಸ) ಜೀವನವಿಡೀ ನೆನಪಿಟ್ಟಿದ್ದರು. "ಪ್ರವಾದಿವರ್ಯರು(ಸ) ಖದೀಜಾ(ರ)ರ ಕುರಿತು ಹೇಳುವಾಗ, ನಮಗೆ ಈರ್ಷ್ಯೆಯಾಗುತ್ತಿತ್ತು. ಅಕಟಾ! ಆ ಸೇವೆ ನಮ್ಮ ಪಾಲಿಗಿರುತ್ತಿದ್ದರೆ" ಎಂದು ಆಯಿಶಾ(ರ)ರು ಹೇಳುತ್ತಾರೆ.

ಖದೀಜಾ(ರ)ರ ಬದುಕು, ದೇವ ಮಾರ್ಗದಲ್ಲಿ ತ್ಯಾಗ, ನಿಸ್ವಾರ್ಥ, ಪ್ರೇಮ ಹಾಗೂ ಪತಿಯ ಮೇಲಿನ ಪ್ರೀತಿ ಮಾದರಿಯೋಗ್ಯವಾಗಿದೆ. ಇದರ ಹೊರತಾಗಿ ಓರ್ವ ಮುಸ್ಲಿಮ್ ಮಹಿಳೆಗೆ ಯಾವೆಲ್ಲಾ ವಿಚಾರಗಳನ್ನು ಅರಿತುಕೊಳ್ಳುವ ಅಗತ್ಯವಿದೆಯೋ, ಆಕೆಗೆ ಸಂಬಂಧಿಸಿದ ಸ್ವಸಮಸ್ಯೆಗಳಿಗೆ,

ಧರ್ಮದಲ್ಲಿ ಸ್ತ್ರೀಯ ಸ್ಥಾನಮಾನ ಹಾಗೂ ಸ್ತ್ರೀಯ ಹಕ್ಕು ಬಾಧ್ಯತೆಗಳು, ಜೀವನದ ಇನ್ನೋರ್ವ ಮಹಿಳೆ ಆಕೆಯ ಜೀವನದಲ್ಲಿ ಬಂದರೆ ಅದನ್ನು ನಿಭಾಯಿಸುವುದು ಹೇಗೆ, ಮಲಮಕ್ಕಳೊಂದಿಗೆ ಸದ್ವರ್ತನೆ, ಆರೋಪಗಳನ್ನು ಎದುರಿಸುವುದು, ಪತಿಯ ಹಕ್ಕುಗಳ ಪೂರೈಕೆ, ಸಮಾಜಕ್ಕೆ ತನ್ನ ಸೇವೆ, ಪತಿಯನ್ನು ಸಂತುಷ್ಟಗೊಳಿಸುವುದು, ವಿಧವಾ ಜೀವನ ಸಾಗಿಸುವುದು ಹಕ್ಕುಗಳನ್ನು ಪಡೆಯುವುದು, ನ್ಯಾಯ ದೊರಕಿಸಿಕೊಳ್ಳುವುದು, ತಪ್ಪನ್ನು ಸರಿಪಡಿಸಿಕೊಳ್ಳುವುದು ಹೀಗೆ ಬದುಕಿನ ಸಕಲ ಆದರ್ಶಗಳು ಖದೀಜಾ(ರ)ರ ಬದುಕಿನಿಂದ ಮಾತ್ರ ಲಭ್ಯವಾಗುವುದಿಲ್ಲ, ಪ್ರವಾದಿಯವರ ಇತರೆ ಪತ್ನಿಯರ ಬದುಕಿನಿಂದಲೂ ಪಡೆದುಕೊಳ್ಳಬೇಕು.

ಹೆಚ್ಚಿನ ಆದರ್ಶಗಳು ಆಯಿಶಾ(ರ)ರ ಬದುಕಿನಿಂದ ಲಭ್ಯವಾಗುತ್ತದೆ. ಇದಕ್ಕೆ ಕಾರಣ ಆಯಿಶಾ(ರ)ರು ಚಿಕ್ಕಂದಿನಿಂದಲೇ ಪ್ರವಾದಿವರ್ಯರ(ಸ) ಒಡನಾಟದಲ್ಲಿದ್ದುಕೊಂಡು ಅವರ ಸಂಗಡ ಬದುಕಿದ್ದರು. ಜ್ಞಾನ ಪಡೆಯಲು, ಪಾಲನೆ ಮಾಡಲು ಚಾಣಾಕ್ಷತನ, ಚತುರ ಬುದ್ಧಿ ಹಾಗೂ ಕಿರಿವಯಸ್ಸು ಪೂರಕವಾಗಿತ್ತು. ಆಯಿಶಾ(ರ)ರು ಆಸಕ್ತಿ ವಹಿಸಿ ಪ್ರವಾದಿವರ್ಯರಿಂದ(ಸ) ಧರ್ಮದ ಜ್ಞಾನ ಗಳಿಸಿದರು. ಒಂದು ವೇಳೆ ತಪ್ಪು ಸಂಭವಿಸಿದರೆ ಪ್ರವಾದಿವರ್ಯರು(ಸ) ಕೂಡಲೇ ಸರಿಪಡಿಸುತ್ತಿದ್ದರು. ಕೆಲವೊಮ್ಮೆ ಕಾಠಿಣ್ಯ ತೋರಿ ಸರಿಪಡಿಸಿದ ನಿದರ್ಶನಗಳೂ ಇವೆ. ಹೀಗೆಯೇ ಆಯಿಶಾ(ರ)ರ ಬದುಕು ಅತ್ಯುತ್ತಮ ಉಪದೇಶಗಳಿಂದ ಕೂಡಿದ ಬದುಕಾಗಿದೆ.

## ತವರಿನಲ್ಲಿ:

ಮಕ್ಕಾದ ಸರದಾರರು ಪ್ರವಾದಿವರ್ಯರನ್ನು(ಸ) ವಿರೋಧಿಸಲು ತಮ್ಮ ಶಕ್ತಿ–ಸಾಮರ್ಥ್ಯವನ್ನೆಲ್ಲಾ ವ್ಯಯಿಸುವ ಕಾಲವಾಗಿತ್ತು. ಆಯಿಶಾ(ರ) ಮತ್ತವರ ಹೆತ್ತವರು ಆರಂಭದಿಂದಲೇ ಅಲ್ಲಾಹನ ಧರ್ಮಕ್ಕೆ ಸರ್ವಸ್ವವನ್ನು ಮುಡಿಪಾಗಿಟ್ಟಿದ್ದರು. ಇಂತಹ ಕುಟುಂಬದಲ್ಲಿ ಬೆಳೆದ ಆಯಿಶಾ(ರ)ರಿಗೆ ಇಸ್ಲಾಮಿನ ಬಗ್ಗೆ ಒಲವು ಪ್ರೀತಿ ಬೆಳೆಯಿತು.

ಇಂದು ನಮ್ಮ ಮಕ್ಕಳನ್ನು ತರಬೇತುಗೊಳಿಸಲು ವಿಫಲರಾಗಿರುವುದೇಕೆ? ಸತ್ಯ ಹೇಳಲು, ಅಶ್ಲೀಲತೆಯಿಂದ ದೂರ ಉಳಿಯಲು, ಕುರ್‌ಆನ್ ಪಠಿಸಲು, ನಮಾಝ್ ನಿರ್ವಹಿಸಲು ಒತ್ತಾಯ ಮಾಡುತ್ತೇವೆ. ಆದರೆ ಸ್ವತಃ ಹೆತ್ತವರು ಇವುಗಳನ್ನು ಪಾಲಿಸುವುದಿಲ್ಲ. ಭೌತಿಕತೆಯಲ್ಲಿ ತಲ್ಲೀನರಾಗಿ ಧಾರ್ಮಿಕತೆಯಿಂದ ದೂರ ಉಳಿಯುತ್ತೇವೆ. ಇತರರನ್ನು ಅಪಮಾನಿಸುತ್ತಾ ಸ್ವತಃ ತಾವೇ ಅಪಮಾನಕ್ಕೊಳಗೊಂಡರೂ ನಮ್ಮ ಉಪದೇಶ ತರಬೇತು ಫಲಕಾರಿಯಾಗದು.

## ವಂಶವೃಕ್ಷದ ಜ್ಞಾನ:

ಆಯಿಶಾ(ರ)ರ ತಂದೆ ಅಬೂಬಕರ್(ರ)ರು ಕವಿತೆ ಹಾಗೂ ವಂಶ ವೃಕ್ಷದ ಜ್ಞಾನವುಳ್ಳವರಾಗಿದ್ದರು. ಅಬೂಬಕರ್(ರ)ರು ಆಯಿಶಾ(ರ)ರಿಗೆ ಕುರೈಶ್ ಗೋತ್ರದ ವಂಶ ವೃಕ್ಷದ ಬಗ್ಗೆ ಮಾಹಿತಿ ನೀಡಿದರು. ಅರಬಿ ಭಾಷೆಯ ಶ್ರೇಷ್ಠ ಕವಿತೆಗಳನ್ನು ಕಂಠಪಾಠ ಮಾಡಿಸಿದರು ಹಾಗೂ ಅದರಲ್ಲಿನ ಸೂಕ್ಷ್ಮತೆಗಳನ್ನು ಪರಿಚಯಿಸಿದರು. ಆ ಕಾಲದಲ್ಲಿ ಇಂತಹ ಜ್ಞಾನವು ಅಭಿಮಾನ ಹಾಗೂ ಶ್ರೇಷ್ಠತೆಯ ಪ್ರತೀಕವಾಗಿತ್ತು. ಸ್ವತಃ ಪ್ರವಾದಿವರ್ಯರು(ಸ) ಇದರ ಪ್ರಯೋಜನ ಪಡೆದುಕೊಂಡರು.

ಆ ಕಾಲದಲ್ಲಿ ಇಸ್ಲಾಮಿನ ಶತ್ರುಗಳಾದ ಕುರೈಶರು ಪ್ರವಾದಿವರ್ಯರನ್ನು(ಸ) ಅಣಕಿಸುತ್ತಾ ಕವಿತೆಗಳನ್ನು ಹಾಡುತ್ತಿದ್ದರು. ಇದು ಪ್ರವಾದಿವರ್ಯರು(ಸ) ಹಾಗೂ ಅವರ ಸಂಗಾತಿಗಳನ್ನು ದುಃಖಕ್ಕೀಡು ಮಾಡುತ್ತಿತ್ತು. ಮುಸ್ಲಿಮ್ ಕವಿಗಳು ಪ್ರತ್ಯುತ್ತರವಾಗಿ ಕುರೈಶ್ ಸರದಾರರ ವಿರುದ್ಧ ಸರಳ ಕವಿತೆಗಳನ್ನು ರಚಿಸಿ ಪ್ರವಾದಿವರ್ಯರ(ಸ) ಮುಂದಿಟ್ಟರು. ಆದರೆ ಈ ಆಹ್ವಾನವನ್ನು ನಿಭಾಯಿಸಲು ಪ್ರಸಿದ್ಧ ಕವಿಯ ಅಗತ್ಯವಿದೆ ಎಂದು ಪ್ರವಾದಿವರ್ಯರು(ಸ) ಹಸ್ಸಾನ್ ಬಿನ್ ಸಾಬಿತ್(ರ)ರ ಕಡೆ ದೃಷ್ಟಿ ಹಾಯಿಸಿದರು. ಹಸ್ಸಾನ್(ರ) ಪ್ರವಾದಿವರ್ಯರ(ಸ) ಭಾವನೆಯನ್ನು ಅರ್ಥಮಾಡಿಕೊಂಡು, "ಪ್ರವಾದಿಗಳೇ ಓರ್ವ ಸ್ತ್ರೀಯು ಕಲಸಿಟ್ಟ ಹಿಟ್ಟಿನಿಂದ ಕೂದಲನ್ನು ಎಳೆದಂತೆ ನಾನು ನಿಮ್ಮನ್ನು ಅದರಿಂದ ಹೊರ ತರುವೆ" ಎಂದರು.

ಈ ಮಾತುಗಳನ್ನಾಲಿಸಿದ ಪ್ರವಾದಿವರ್ಯರು(ಸ) "ನಮ್ಮಲ್ಲಿ ಅಬೂಬಕರ್(ರ)ರು ಕವಿತೆ ಹಾಗೂ ವಂಶ ವೃಕ್ಷದ ಜ್ಞಾನವನ್ನು ಹೊಂದಿರುತ್ತಾರೆ. ನೀವು ಅವರೊಂದಿಗೆ ಸಮಾಲೋಚನೆ ನಡೆಸಿ ಕವಿತೆಗಳನ್ನು ಹೇಳಿರಿ" ಎಂದರು. ಹಸ್ಸಾನ್(ರ)ರು ಅಬೂಬಕರ್(ರ)ರೊಂದಿಗೆ ಸಮಾಲೋಚನೆ ನಡೆಸಿ ಕವಿತೆಗಳನ್ನು ಹಾಡಲು ಆರಂಭಿಸಿದರು. ಇದರಿಂದ ಭಯಭೀತರಾದ ಕುರೈಶ್ ಸರದಾರರು ಈ ಕವಿತೆಗಳ ಹಿಂದೆ ಅಬೂಬಕರ್(ರ) ಕೈವಾಡವಿದೆ ಎಂದರು. ಹಸ್ಸಾನ್(ರ)ರು ತಮ್ಮ ಕವಿತೆಗಳ ಮೂಲಕ ಉತ್ತರಿಸಿದ್ದು ಮಾತ್ರವಲ್ಲ, ಕುರೈಶ್ ಕವಿಗಳ ಮೊಗ್ಗಲು ಮುರಿದರು. ಆಯಿಶಾ(ರ)ರು ಈ ಕವಿತೆಗಳನ್ನು ನೆನಪಿಟ್ಟಿದ್ದು ಹೇಗೆ? ಹಾಗೂ ಹಸ್ಸಾನ್(ರ)ರನ್ನು ಹುರಿದುಂಬಿಸಿದ್ದು ಹೇಗೆ? ಎಂದು ಮುಂದೆ ನೋಡೋಣ.

ತರಬೇತಿಯ ವಿಷಯದಲ್ಲಿ ಅಬೂಬಕರ್(ರ)ರು ಬಹಳ ಕಠೋರರಾಗಿದ್ದರು. ಅವರು ತಮ್ಮ ಮಕ್ಕಳಿಗೆ ಉಪದೇಶಿಸುತ್ತಿದ್ದರು. ಅದರಂತೆ ಮುನ್ನಡೆಸುತ್ತಿದ್ದರು. ಮಕ್ಕಳಿಂದ ತಪ್ಪು ಸಂಭವಿಸಿದರೆ ದಂಡಿಸುತ್ತಿದ್ದರು. ಒಂದು

ನ ಅಬೂಬಕರ್(ರ)ರ ನಿವಾಸಕ್ಕೆ ಅತಿಥಿಗಳು ಆಗಮಿಸಿದ್ದರು. ಬೂಬಕರ್(ರ)ರು ತಮ್ಮ ಪುತ್ರ ಅಬ್ದುರ್ರಹ್ಮಾನ್‌ರವರಲ್ಲಿ ಅತಿಥಿಗಳಿಗೆ ಕ್ಲಪ್ತ ಮಯಕ್ಕೆ ಊಟದ ವ್ಯವಸ್ಥೆ ಮಾಡುವಂತೆ ತಿಳಿಸಿದ್ದರು. ಆದರೆ ಈ ವಸ್ಥೆಯಲ್ಲಿ ಸ್ವಲ್ಪ ತಡವಾಯಿತು. ಈ ಸಂಗತಿ ಕೇಳಿದ ಅಬೂಬಕರ್(ರ)ರು ಬ್ದುರ್ರಹ್ಮಾನ್‌ರವರಿಗೆ ದಂಡಿಸಲು ಮುಂದಾದರು.

ಆಯಿಶಾ(ರ)ರು ಬಾಲ್ಯದಿಂದಲೇ ಸದ್ಗುಣ ಸಂಪನ್ನೆ ಹಾಗೂ ಚುರಳಾಗಿದ್ದರಿಂದ ತಂದೆಯ ಪ್ರಿಯ ಪುತ್ರಿಯಾಗಿದ್ದರು. ಆದರೂ ತಂದೆಯ ೀಪಕ್ಕೆ ಅವರೂ ಗುರಿಯಾಗಿದ್ದರು. ಮನೆಯಲ್ಲಿ ಮಾತ್ರವಲ್ಲ, ವಿವಾಹದ ಿಕವೂ ಆಯಿಶಾ(ರ)ರನ್ನು ಕ್ಷಮಿಸಲಿಲ್ಲ, ಒಮ್ಮೆ ಆಯಿಶಾ(ರ)ರಿಂದ ತಪ್ಪು ಭವಿಸಿದಾಗ ಅಬೂಬಕರ್(ರ)ರು ಅವರನ್ನು ಶಿಕ್ಷಿಸಲು ಮುಂದಾಗಿದ್ದರು. ವರೆ ಪ್ರವಾದಿವರ್ಯರು(ಸ) ಅವರನ್ನು ರಕ್ಷಿಸಿದರು.

ಒಂದು ದಿನ ಯಾವುದೋ ಒಂದು ವಿಚಾರದಲ್ಲಿ ಕೋಪದಿಂದಲೇ ಯಿಶಾ(ರ)ರ ಮನೆಗೆ ಬಂದರು. ಆ ವೇಳೆ ಪ್ರವಾದಿವರ್ಯರು(ಸ) ಯಿಶಾ(ರ)ರ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದರು. ಆ ಸಂದರ್ಭದಲ್ಲಿ ದೆಯ ಶಿಕ್ಷೆಗೆ ಆಯಿಶಾ(ರ) ಗುರಿಯಾಗಿದ್ದರು.

ಸ್ವತಃ ಇಂತಹ ತಂದೆಯಿಂದ ಪ್ರವಾದಿವರ್ಯರ(ಸ) ಶಿಕ್ಷಣ ತರಬೇತಿ ಡೆದ ಆಯಿಶಾ(ರ)ರು ಬೆಳೆದು ಓರ್ವ ಆದರ್ಶ ಮಹಿಳೆಯಾಗಿ ಬೆಳೆದರು.

### ಕ್ಷಣ ತರಬೇತಿ:

ಆಯಿಶಾ(ರ)ರು ಮಕ್ಕಾದಲ್ಲಿ ತಮ್ಮ ತಂದೆಯವರಿಂದ ಕವಿತೆ ಮತ್ತು ಶವೃಕ್ಷದ ವಿದ್ಯೆಯನ್ನು ಪಡೆದರು. ಧಾರ್ಮಿಕ ಜ್ಞಾನಕ್ಕೆ ಹೆತ್ತವರ ಬದುಕು ಾದರಿಯೋಗ್ಯವಾಗಿತ್ತು. ಹೆತ್ತವರನ್ನು ಮಕ್ಕಳು ಅನುಕರಿಸುತ್ತಾರೆ. ಈ ಭಾಗ್ಯವು ಆಯಿಶಾ(ರ)ರಿಗೆ ದಕ್ಕಿತ್ತು. ಅವರ ಹೆತ್ತವರು ಇಸ್ಲಾಮಿನ ಚಾರಕರಾಗಿದ್ದರು ಹಾಗೂ ಬಾಲ್ಯದಲ್ಲೇ ಪ್ರವಾದಿವರ್ಯರನ್ನು(ಸ) ವಾಹವಾಗಿದ್ದು ಅವರ ಸೌಭಾಗ್ಯವಾಗಿತ್ತು. ಪ್ರವಾದಿವರ್ಯರು(ಸ) ಯಿಶಾ(ರ)ರ ಸಾಮರ್ಥ್ಯವನ್ನು ಅರಿತು, ಅವರಿಗೆ ಶಿಕ್ಷಣ ಹಾಗೂ ತರಬೇತಿ ಡಿದರು. ಚತುರೆ ಹಾಗು ಜ್ಞಾನಗಳಿಸುವ ಆಸಕ್ತಿಯುಳ್ಳವರಾಗಿದ್ದ ಆಯಿಶಾ(ರ)ರು ಮಗೆ ತಿಳಿದಿರದ ವಿಚಾರಗಳನ್ನು ಪ್ರವಾದಿವರ್ಯರಿಂದ(ಸ) ಕೇಳಿ ದುಕೊಳ್ಳುತ್ತಿದ್ದರು. ಯಾವುದೇ ಒಂದು ವಿಷಯ ಸಂಪೂರ್ಣವಾಗಿ ರ್ಣವಾಗುವ ವರೆಗೆ ಪ್ರಶ್ನೆಗಳನ್ನು ಕೇಳುತ್ತಿದ್ದರು. ಪ್ರವಾದಿವರ್ಯರು(ಸ) ಡ ಸಮಾಧಾನದಿಂದ ಅವರಿಗೆ ಅರ್ಥವಾಗುವವರೆಗೂ ಹೇಳುತ್ತಿದ್ದರು.

ಆಯಿಶಾ(ರ)ರು ಧಾರ್ಮಿಕ ಜ್ಞಾನ ಪಡೆದು ಇತರರಿಗೆ ಆ ಜ್ಞಾನವನ
ಧಾರೆ ಎರೆಯುವ ಬಗ್ಗೆ ಆಸಕ್ತಿ ಹೊಂದಿದ್ದರು. ಒಂದು (ಮದ್ರಸ) ಇರು
ಕಾರಣ. ಆಯಿಶಾ(ರ)ರ ಮನೆಯೇ ಪಾಠಶಾಲೆಯಾಗಿತ್ತು. ಅದ
ಮಸ್ಜಿದುನ್ನಬವಿಗೆ ತಾಗಿಕೊಂಡಿರುವ ಎರಡೂವರೆ ಹಾಗೂ ಮೂರು ಮೀಟ
ಉದ್ದಗಲದ ಸಣ್ಣ ಕೋಣೆಯಾಗಿತ್ತು. ಆ ಕೋಣೆಯ ಬಾಗಿಲು ಮಸೀದಿ
ದಿಕ್ಕಿಗಿತ್ತು. ಶಿಕ್ಷಣ ಕಲಿಯಲು ಸಂಪೂರ್ಣ ಸಮಯವನ್ನು ವ್ಯಯಿಸಲಾಗುತ್ತಿತ್ತು
ಪ್ರವಾದಿವರ್ಯರು(ಸ) ಮನೆಯಲ್ಲಿ ತಮ್ಮ ನಡೆ-ನುಡಿಗಳಿಂದ ಧರ್ಮ
ವಿಷಯಗಳನ್ನು ಹೇಳುತ್ತಿದ್ದರು. ನುಡಿದಂತೆ ನಡೆಯುತ್ತಿದ್ದರು. ಆಯಿಶಾ(ರ)
ಪ್ರತಿಯೊಂದು ಮಾತು-ಕೃತಿಯನ್ನು ಪ್ರವಾದಿವರ್ಯರು(ಸ) ಗಮನಿಸುತ್ತಿದ್ದರು
ತಪ್ಪು ಸಂಭವಿಸಿದರೆ ತಿದ್ದುತ್ತಿದ್ದರು. ವಿದ್ಯಾರ್ಥಿಗಳು ಎಲ್ಲವನ್ನೂ ಆಲಿಸುತ್ತಿದ್ದರು
ವೀಕ್ಷಿಸುತ್ತಿದ್ದರು ಹಾಗೂ ಅದನ್ನು ಅರಿತುಕೊಂಡು ಮನನ ಮಾಡುತ್ತಿದ್ದರು.

ಪ್ರವಾದಿವರ್ಯರು(ಸ) ಮಸೀದಿಯಲ್ಲಿ ತಮ್ಮ ಸಂಗಾತಿಗಳಿಗೆ ಪ್ರವಚ
ನೀಡುತ್ತಿದ್ದರು, ಉಪದೇಶಿಸುತ್ತಿದ್ದರು. ಇತರರೊಡನೆ ಸಂಭಾಷಣೆ ನಡೆಸುತ್ತಿದ್ದರು
ಇದನ್ನೆಲ್ಲಾ ಆಯಿಶಾ(ರ)ರು ತಮ್ಮ ಮನೆಯೊಳಗಿದ್ದುಕೊಂಡೇ ಆಲಿಸಿ ಜ್ಞಾನಗಳಿಸುತ್ತಿದ್ದರು
ಹೀಗೆ ಆಯಿಶಾ(ರ)ರು ಪ್ರವಾದಿವರ್ಯರ(ಸ) ಸಂರಕ್ಷಣೆಯಲ್ಲಿ ಒಂಭತ್ತು ವರ್ಷ
ಕಳೆದರು. ಅಲ್ಲಿಗೆ ಆಯಿಶಾ(ರ)ರಿಗೆ ಹದಿನೆಂಟು ವರ್ಷ ತುಂಬಿತು. ಆ ಸಮಯದಲ್ಲಿ
"ಇಂದು ನಾನು ನಿಮ್ಮ ಧರ್ಮವನ್ನು ನಿಮಗಾಗಿ ಪರಿಪೂರ್ಣಗೊಳಿಸಿದ್ದೇನೆ, ನ
ಕೊಡುಗೆಯನ್ನು ನಿಮ್ಮ ಮೇಲೆ ಪರಿಪೂರ್ಣಗೊಳಿಸಿದ್ದೇನೆ ಮತ್ತು ಇಸ್ಲಾಮನ್ನು ನಿವ
ಧರ್ಮವೆಂಬ ನೆಲೆಯಲ್ಲಿ ಅಂಗೀಕರಿಸಿದ್ದೇನೆ..." (ಪವಿತ್ರ ಕುರ್‌ಆನ್: 5:3

ಇತ್ತ ಆಯಿಶಾ(ರ)ರು ಧರ್ಮದ ಪರಿಪೂರ್ಣ ಜ್ಞಾನ ಗಳಿಸಿದ್ದರು. ಈ
ಸೂಕ್ತ ಅವತೀರ್ಣಗೊಂಡಾಗ ಎಲ್ಲಾ ಸಹಾಬಿಗಳು ಹರ್ಷಗೊಂಡರು. ಆದ
ಪ್ರವಾದಿವರ್ಯರು(ಸ) ಕಂಬನಿ ಮಿಡಿದರು. ಜನರು ಆಶ್ಚರ್ಯದಿಂ
"ಪ್ರವಾದಿವರ್ಯರೇ(ಸ) ನಿಮ್ಮ ಕಣ್ಣುಗಳು ತೇವಗೊಂಡಿರುವುದೇಕೆ?" ಎಂದ
ಕೇಳಿದರು. "ಇದು ಅಲ್ಲಾಹನ ಸೂಚನೆಯಾಗಿದೆ. ಅಲ್ಲಾಹನ ಪ್ರವಾ
ಮುಹಮ್ಮದ್‌ರು(ಸ) ತಮ್ಮ ಕಾರ್ಯವನ್ನು ಪೂರ್ಣಗೊಳಿಸಿದ್ದಾರೆ. ಶೀಘ್ರದಲ್ಲೇ
ಅಲ್ಲಾಹನು ಅವರನ್ನು ತನ್ನ ಬಳಿ ಕರೆದುಕೊಳ್ಳಲಿದ್ದಾನೆ" ಎಂದರು. ಕೆಲವೆ
ದಿನಗಳಲ್ಲಿ ಪ್ರವಾದಿವರ್ಯರ(ಸ) ಆರೋಗ್ಯ ಹದಗೆಟ್ಟಿತು. ಅವರು(ಸ
ನಿಧನರಾದರು (ಇನ್ನಾಲಿಲ್ಲಾಹ್...) ಆಯಿಶಾ(ರ) ವಿಧವೆಯಾದರು.

ಪ್ರವಾದಿವರ್ಯರ(ಸ) ಕಾರ್ಯಭಾರವನ್ನು ಮುಂದುವರಿಸುವ
ಆಯಿಶಾ(ರ)ರು ಪ್ರಮುಖ ಪಾತ್ರ ವಹಿಸಿದ್ದರು. ಪ್ರವಾದಿವರ್ಯರು(ಸ) ಹಾಗು

ಯಿಶಾ(ರ)ರು ಕಲಿಸಿದ ಶಿಕ್ಷಣ ಹಾಗೂ ತರಬೇತಿ ನಮಗೆ ಮಾದರಿಯಾಗಿದೆ. ಲ್ಲಾಹನು ನಮ್ಮನ್ನು ಅನುಗ್ರಹಿಸಲಿ. ಅವರ ಸಹಸ್ರಾರು ಆದರ್ಶಗಳಲ್ಲಿ ಲವನ್ನು ನಿಮ್ಮ ಮುಂದಿಡುತ್ತಿದ್ದೇವೆ.

"ಪರಲೋಕ ವಿಶ್ವಾಸವು ಮಾನವನ ಕರ್ಮಗಳ ಮೇಲೆ ಪ್ರಭಾವ ೀರುತ್ತದೆ. ಪುನರುತ್ಥಾನ ದಿನದ ನೆನಪು ಆತನನ್ನು ಭಯಭೀತಗೊಳಿಸುತ್ತದೆ. ನಾದರೂ ಪ್ರಮಾದ ಸಂಭವಿಸಿದರೆ ಕೂಡಲೇ ಪಶ್ಚಾತ್ತಾಪ ಪಟ್ಟು ಆತ ಮೆ ಯಾಚಿಸುತ್ತಾನೆ."

ಪ್ರವಾದಿವರ್ಯರು(ಸ) ಹೇಳಿದರು, "ಪುನರುತ್ಥಾನ ದಿನದಂದು ಯಾರೊಂದಿಗೆ ವಿಚಾರಣೆಯಾಗುತ್ತದೋ ಅವರು ಶಿಕ್ಷೆಗೆ ಗುರಿಯಾದರು. ವಾದಿವರ್ಯರ(ಸ) ಪವಿತ್ರ ವಚನಗಳ ಮೇಲೆ ಆಳವಾದ ದೃಷ್ಟಿ ಇಲ್ಲದವರು ೀಗೆ ಹೇಳಬಹುದು, "ವಿಚಾರಣೆಯು ಪ್ರತಿಯೊಬ್ಬ ವ್ಯಕ್ತಿಯದ್ದೂ ಆಗಲಿದೆ. ಾಲಗಾರನಾಗಿ ಹುತಾತ್ಮನಾದ ವ್ಯಕ್ತಿಯನ್ನು ಅಂದು ಚಾರಣೆಗೊಳಪಡಿಸಲಾಗುವುದು".

ಪ್ರವಾದಿವರ್ಯರು(ಸ) ಮಸ್ಜಿದುನ್ನಬವಿಯಿಂದ ಆಯಿಶಾ(ರ)ರ ಮನೆಗೆ ಂದರು. ಆಗ ಆಯಿಶಾ(ರ)ರು "ಪ್ರವಾದಿವರ್ಯರೇ(ಸ)! ಕುರ್‌ಆನಿನಲ್ಲಿ ಲ್ಲಾಹನು ಹೇಳುತ್ತಾನೆ, ಆತನಿಂದ ಸುಲಭ ವಿಚಾರಣೆ ನಡೆಸಲಾಗುವುದು. ಾಗಾದರೆ ತಮ್ಮ ಮಾತಿನ ಅರ್ಥವೇನು? ಎಂದು ಪ್ರಶ್ನಿಸಿದರು. ಆಗ ವಾದಿವರ್ಯರು(ಸ) ಹೇಳಿದರು, "ಯಾರ ಕರ್ಮಗಳ ಬಗ್ಗೆ ಕುಲಂಕುಷವಾಗಿ ಚಾರಣೆ ನಡೆಸಲು ಆರಂಭವಾಯಿತೋ ಆತನು ನಾಶವಾದನು" ಎಂದರು.

ಯಾರ ಕರ್ಮಗಳಲ್ಲಿ ದೋಷವಿದೆಯೋ ಆತನ ಮನಸ್ಸಿನಲ್ಲೇ ಪ್ರಶ್ನೆಗಳು ದ್ಭವಿಸುತ್ತವೆಂಬುದು ಇದರಿಂದ ವ್ಯಕ್ತವಾಗುತ್ತದೆ. ಒಂದು ವೇಳೆ ಯಿಶಾ(ರ)ರು ಈ ಪ್ರಶ್ನೆ ಕೇಳದಿರುತ್ತಿದ್ದರೆ ಸಮುದಾಯವು ಎಂತಹ ಕಷ್ಟದಲ್ಲಿ ಸಿಲುಕಿಕೊಳ್ಳುತ್ತಿತ್ತೋ ಎಂದೊಮ್ಮೆ ಯೋಚಿಸಿ.

**ಪುನರುತ್ಥಾನ ದಿನದ ಕುರಿತು ಕುರ್‌ಆನಿನಲ್ಲಿ ಹಲವು ಕಡೆಗಳಲ್ಲಿ ಪ್ರಸ್ತಾಪಿಸಲಾಗಿದೆ. ಪುನರುತ್ಥಾನ ದಿನ ಸಂಪೂರ್ಣ ಭೂಮಿಯು ಅಲ್ಲಾಹನ ಮುಷ್ಠಿಯೊಳಗಿರುವುದು ತ್ತು ಆಕಾಶಗಳು ಅವನ ಬಲಗೈಯಲ್ಲಿ ಸುತ್ತಿಕೊಂಡಿರುವುವು." (ಕುರ್‌ಆನ್ 39:67)**

ಹ. ಆಯಿಶಾ(ರ)ರು ಕೇಳಿದರು, "ಪ್ರಿಯ ಪ್ರವಾದಿಗಳೇ(ಸ)! ಆಕಾಶ ಾಗೂ ಭೂಮಿ ಅಲ್ಲಾಹನ ಅಧೀನದಲ್ಲಿದ್ದರೆ ಮಾನವರೆಲ್ಲಾ ಎಲ್ಲಿರುವರು?" ವಾದಿವರ್ಯರು(ಸ) "ಸಿರಾತ್ ಸೇತುವೆಯ ಮೇಲೆ" ಎಂದು ಉತ್ತರಿಸಿದರು.

ಆಯಿಶಾ(ರ)ರು ಈ ಪ್ರಶ್ನೆ ಕೇಳಿದ್ದರಿಂದ ಈ ಉತ್ತರ ದೊರಕಿತು.

ಪುನರುತ್ಥಾನ ದಿನದಂದು ಮಾನವನು ಕಂಗೆಟ್ಟ ಸ್ಥಿತಿಯಲ್ಲಿ ಇರುವುದ ಕುರ್‌ಆನಿನಲ್ಲಿ ಹಲವು ಕಡೆಗಳಲ್ಲಿ ಪ್ರಸ್ತಾಪಿಸಲಾಗಿದೆ. ಒಂದು ವೇ ಆಯಿಶಾ(ರ)ರು ಪುನರುತ್ಥಾನದ ಕುರಿತು ಪ್ರಶ್ನಿಸದಿರುತ್ತಿದ್ದರೆ ಪುನರುತ್ಥಾನ ಭಯಾನಕ ಚಿತ್ರ ನಮ್ಮ ಮುಂದೆ ಬರುತ್ತಿರಲಿಲ್ಲ.

ಪ್ರವಾದಿವರ್ಯರು(ಸ) ತಮ್ಮ ಉಪನ್ಯಾಸದಲ್ಲಿ ಈ ರೀತಿ ಹೇಳಿದ್ದಾ "ಪುನರುತ್ಥಾನ ದಿನದಂದು ಜನರು ನಗ್ನರಾಗಿರುವರು." ಈ ಮಾತ ಸ್ಮರಿಸುತ್ತಾ ಆಯಿಶಾ(ರ)ರು ಪ್ರಶ್ನಿಸಿದರು, "ಪ್ರವಾದಿಗಳೇ(ಸ) ಸ್ತ್ರೀ–ಪುರುಷ ಜತೆಯಾಗಿದ್ದರೆ ಅವರ ದೃಷ್ಟಿಗಳು ಪರಸ್ಪರರ ಮೇಲೆ ಬೀಳುವುದಿಲ್ಲವೇ ಅದಕ್ಕುತ್ತರವಾಗಿ ಪ್ರವಾದಿಯವರು(ಸ), "ಆಯಿಶಾ! ಅದು ಅತ್ಯಂತ ಸೂ ಘಳಿಗೆಯಾಗಿರುವುದು. ಎಲ್ಲರೂ ತಮ್ಮದೇ ಚಿಂತೆಯಲ್ಲಿರುವರು. ಯಾರಿಗ ಯಾರ ಬಗ್ಗೆಯೂ ಅರಿವಿರಲಾರದು" ಎಂದರು.

ಪ್ರವಾದಿ ವಚನದಲ್ಲಿ ಒಂದೆಡೆ ಈ ರೀತಿ ಹೇಳಲಾಗಿದೆ, "ನರಕವ ನೋಡಿದ ಬಳಿಕ ಎಲ್ಲರನ್ನೂ ಆ ಅಗ್ನಿ ಕುಂಡದಲ್ಲಿ ಹಾಕಲ್ಪಟ್ಟರೂ, ನಾನೊ ಸುರಕ್ಷಿತನಾಗಿದ್ದರೆ ಸಾಕು ಎಂದು ಪ್ರತಿಯೊಬ್ಬ ವ್ಯಕ್ತಿಯೂ ಬಯಸುತ್ತಾನ ಆಯಿಶಾ(ರ)ರು ಪುನಃ ಪ್ರಶ್ನಿಸಿದರು, "ಪ್ರಿಯ ಪ್ರವಾದಿಗಳೇ(ಸ)! ಪುನರುತ್ಥಾ ದಿನದಂದು ಒಬ್ಬರು ಮತ್ತೊಬ್ಬರನ್ನು ನೆನಪಿಸುತ್ತಾರೆಯೇ?" ಎಂದು ಕೇಳಿದ ಆಗ ಪ್ರವಾದಿಯವರು(ಸ) ಹೇಳಿದರು, "ಮೂರು ಸಂದರ್ಭಗಳಲ್ಲಿ ಯಾರ ಯಾರನ್ನೂ ನೆನಪಿಸಲಾರರು. ಒಂದನೆಯದು ಕರ್ಮಗಳು ತೂಗಲ್ಪಡುವಾ ಎರಡನೆಯದು ಕರ್ಮಪತ್ರಗಳನ್ನು ವಿತರಿಸುವಾಗ, ಮೂರನೆಯದು ನರಕ ಘರ್ಜಿಸುತ್ತಾ 'ಮೂರು ರೀತಿಯ ಜನರಿಗೆ ನಾನು ನಿಶ್ಚಯಿಸಲ್ಪಟ್ಟಿದ್ದೇ ಎನ್ನುವಾಗ" ಎಂದರು.

ಇಲ್ಲಿ ಆಯಿಶಾ(ರ)ರ ಇನ್ನೊಂದು ಸೂಕ್ಷ್ಮವಾದ ಪ್ರಶ್ನೆಯಿದೆ, ಮಹಿಳೆಯ ಬಹಳ ಲಜ್ಜಿತರಾಗಿರುತ್ತಾರೆ. ಮದುವೆಗೆ ಒಪ್ಪಿಗೆ ಕೇಳಿದಾಗ ನಾಚಿಕೊಳ್ಳುತ್ತಾ ಈ ಬಗ್ಗೆ ಆಯಿಶಾ(ರ)ರು ಪ್ರವಾದಿಯವರ(ಸ) ಬಳಿ ವಿಚಾರಿಸಿದಾ ಪ್ರವಾದಿಯವರು(ಸ) "ಆಕೆಯ ಮೌನವೇ ಒಪ್ಪಿಗೆಯಾಗಿದೆ" ಎಂದರು.

ನೆರೆಕರೆಯವರ ಹಕ್ಕುಬಾಧ್ಯತೆಗಳ ಕುರಿತು, "ಮೊದಲು ಯಾ ನೆರೆಕರೆಯವರ ಹಕ್ಕುಗಳನ್ನು ಪೂರೈಸಬೇಕು" ಎಂದು ವಿಚಾರಿಸಿದರು. ಪ್ರವಾದಿವರ್ಯರು(ಸ), "ಯಾರ ಮನೆಯ ಬಾಗಿಲು ನಿಮ್ಮ ಮನೆ ಬಾಗಿ ಹತ್ತಿರವಿದೆಯೋ ಆ ಮನೆ" ಎಂದರು.

ಕುರ್‌ಆನಿನಲ್ಲಿ 'ಮುಹ್ರಿಮ್' (ವಿವಾಹ ನಿಷಿದ್ಧ) ಹಾಗೂ ಮುಹ್ರಿಮ್ ಅಲ್ಲದವರ (ವಿವಾಹ ಯೋಗ್ಯ) ಕುರಿತು ಹಲವೆಡೆ ಪ್ರಸ್ತಾಪವಾಗಿದೆ. ಈ ವಿಚಾರವನ್ನು ಆಯಿಶಾ(ರ)ರು ಆಗಾಗ್ಗೆ ಪ್ರವಾದಿವರ್ಯರ(ಸ) ಬಳಿ ಪ್ರಶ್ನಿಸದಿರುತ್ತಿದ್ದರೆ, ಇಂದು ಸಮುದಾಯವು ಈ ಜ್ಞಾನದಿಂದ ವಂಚಿತವಾಗುತ್ತಿತ್ತು. ಉದಾ: ಹ. ಆಯಿಶಾ(ರ)ರ ಚಿಕ್ಕಪ್ಪ (ಆಯಿಶಾ(ರ)ರಿಗೆ ಹಾಲುಣಿಸಿದ ಮಹಿಳೆಯ ಮೈದುನ) ಅವರನ್ನು(ರ) ಭೇಟಿಯಾಗಲು ಮನೆಗೆ ಬಂದರು. ಆಯಿಶಾ(ರ)ರು ಅವರಿಂದ ಪರ್ದಾ ಮಾಡಿದರು. ಅದಕ್ಕವರು, "ನಾನು ನಿನ್ನ ಚಿಕ್ಕಪ್ಪ ಅಲ್ಲವೇ?" ಎಂದು ಕೇಳಿದರು.

"ನಾನು ನಿಮ್ಮ ಅತ್ತಿಗೆಯ ಹಾಲು ಕುಡಿದಿದ್ದೇನೆ. ಆಕೆಯ ಮೈದುನನೊಂದಿಗೆ ನನಗೇನು ಸಂಬಂಧ" ಎಂದರು.

ಮನೆಗೆ ಬಂದ ಪ್ರವಾದಿವರ್ಯರು(ಸ), "ಇವರು ನಿಮ್ಮ(ರ) ಮುಹ್ರಿಮ್, ಇವರು ನಿಮ್ಮ(ರ) ಚಿಕ್ಕಪ್ಪ. ಒಳಗೆ ಬರಮಾಡಿಕೊಳ್ಳು" ಎಂದರು.

ಹೀಗೆ ಹಲವು ವಿಷಯಗಳು ಪ್ರವಾದಿ ವಚನಗಳಲ್ಲಿ ದಾಖಲಾಗಿವೆ. ಈ ಮೂಲಕ ಪ್ರವಾದಿವರ್ಯರ(ಸ) ತರಬೇತಿಯ ಶೈಲಿ ಹಾಗೂ ಆಯಿಶಾ(ರ)ರ ಜ್ಞಾನಾರ್ಜನೆಯ ವಿದ್ವತ್ತು ಗೋಚರಿಸುತ್ತದೆ.

ಒಮ್ಮೆ ಆಯಿಶಾ(ರ)ರು ಪ್ರವಾದಿವರ್ಯರ(ಸ) ಬಳಿ ಕೆಲವು ಸವಲತ್ತುಗಳಿಗಾಗಿ ಬೇಡಿಕೆಯಿಟ್ಟರು. ಪ್ರವಾದಿವರ್ಯರು(ಸ) ಆಯಿಶಾ(ರ)ರನ್ನು ಸಮುದಾಯದ ಮಾದರಿ ಮಹಿಳೆಯಾಗಿ ಪರಿವರ್ತಿಸ ಬಯಸಿದ್ದರು. ಆಯಿಶಾ(ರ)ರ ಬೇಡಿಕೆಯನ್ನು ತಿಳಿದೊಡನೆ ಪ್ರವಾದಿವರ್ಯರು(ಸ) ಒಂದುತಿಂಗಳವರೆಗೆ 'ಈಲಾ'ದೊಂದಿಗೆ (ನಿನ್ನನ್ನು ಸಮೀಪಿಸಲಾರೆ ಎಂದು ಶಪಥ ಹಾಕುವುದು. ಅದರ ಕಾಲಾವಧಿ ನಾಲ್ಕು ತಿಂಗಳ ವರೆಗಿದೆ) ಬೇರೆಯಾಗಿರಲು ನಿರ್ಧರಿಸಿದರು. ಪ್ರವಾದಿವರ್ಯರಿಂದ(ಸ) ಬೇರ್ಪಡುವುದು ಪ್ರವಾದಿ ಪತ್ನಿಯರಿಗೆ ಅತ್ಯಂತ ಕಳವಳಕಾರಿ ವಿಷಯವಾಗಿತ್ತು. ಪ್ರವಾದಿವರ್ಯರಿಂದ(ಸ) ಬೇರ್ಪಡುವ ವಿಷಯವನ್ನು ಅವರು(ರ) ಇಹ-ಪರದ ವಿನಾಶ ಎಂದೇ ಭಾವಿಸುತ್ತಿದ್ದರು. ಇದರಿಂದ ಮುಸ್ಲಿಮ್ ಸಮುದಾಯವು ಚಿಂತಾಕ್ರಾಂತವಾಯಿತು. ಒಂದು ತಿಂಗಳು ಮುಗಿದ ಕೂಡಲೇ ಪ್ರವಾದಿವರ್ಯರು(ಸ) ಆಯಿಶಾ(ರ)ರ ಮನೆಗೆ ಬಂದರು. ಆಗ ಆಯಿಶಾ(ರ)ರು ಹರ್ಷೋಲ್ಲಾಸದಿಂದ ಸಂಭ್ರಮಿಸಬಹುದಿತ್ತು. ಆದರೆ ಪ್ರವಾದಿವರ್ಯರಿಗೆ(ಸ) ಆಯಿಶಾ(ರ)ರು ಕೇಳಿದ ಪ್ರಶ್ನೆ ಅವರ(ರ) ಬುದ್ಧಿಶಕ್ತಿಯನ್ನು ವ್ಯಕ್ತಪಡಿಸುತ್ತಿದೆ. "ಪ್ರವಾದಿಗಳೇ(ಸ)! ಇಂದಿಗೆ ತಿಂಗಳ 29ನೇ ದಿನ ಮುಗಿದಿದೆ!"

ಪ್ರವಾದಿವರ್ಯರು(ಸ) ಉತ್ತರಿಸುತ್ತಾ, "29 ದಿನಗಳ ತಿಂಗಳು ಇರುವುದಿಲ್ಲವೇ" ಎಂದರು. ವಾಸ್ತವದಲ್ಲಿ ಆ ದಿನ 29ನೇ ತಾರೀಕಿನ ಅಮವಾಸ್ಯೆಯ ರಾತ್ರಿಯಾಗಿತ್ತು.

**ಜ್ಞಾನಸಿದ್ಧಿ:**

ಬುದ್ಧಿವಂತಿಕೆಗೆ ಪ್ರಸಿದ್ಧರಾಗಿದ್ದ ಆಯಿಶಾ(ರ)ರು ಪ್ರವಾದಿವರ್ಯರಿಂದ(ಸ) ಒಂಭತ್ತು ವರ್ಷಗಳ ಕಾಲ ತರಬೇತಿ ಪಡೆದರು. ಸಹಾಬಿಗಳು(ರ) ಕೆಲವೊಂದು ಸಮಸ್ಯೆಗಳಿಗೆ ಪರಿಹಾರ ಸಿಗದಿದ್ದಾಗ ಆಯಿಶಾ(ರ)ರ ಬಳಿ ಹೋಗುತ್ತಿದ್ದರು. ಆಯಿಶಾ(ರ)ರ ತಂದೆ ಅಬೂಬಕ್ಕರ್(ರ)ರೂ ಕೂಡ ಮಗಳಿಂದ(ರ) ಪ್ರಯೋಜನ ಪಡೆಯುತ್ತಿದ್ದರು.

ಹ. ಅಬೂ ಮೂಸಾ ಅಶ್‌ಅರಿ(ರ)ರು ಹೇಳುತ್ತಾರೆ, "ಆಯಿಶಾ(ರ)ರೊಡನೆ ಯಾವುದೇ ವಿಷಯದ ಬಗ್ಗೆ ಕೇಳಿದಾಗ, ಅವರಿಂದ(ರ) ಉತ್ತರ ಸಿಗದ ಯಾವ ಸಂದರ್ಭವೂ ಸಹಾಬಿಗಳಿಗೆ(ರ) ಎದುರಾಗಲಿಲ್ಲ" ಎಂದರು.

ಅತಾಅ್ ಬಿನ್ ಅಬೀ ರಬಾ(ರ) ಹೇಳುತ್ತಾರೆ, "ಆಯಿಶಾ(ರ)ರು ಅತ್ಯಧಿಕ ಜ್ಞಾನವುಳ್ಳ ಕರ್ಮಶಾಸ್ತ್ರಜ್ಞೆ, ಜ್ಞಾನಿ ಹಾಗೂ ಜನಸಾಮಾನ್ಯರಲ್ಲಿ ಅತ್ಯುತ್ತಮ ಸಲಹೆಗಾರ್ತಿಯಾಗಿದ್ದರು."

ಹ. ಅಬ್ದುರ್ರಹ್ಮಾನ್ ಬಿನ್ ಔಫ್(ರ)ರ ಪುತ್ರ ಅಬೂ ಸಲ್ಮಾ(ರ)ರವರು ದೊಡ್ಡ ವಿದ್ವಾಂಸರಾಗಿದ್ದರು. ಅಬೂ ಸಲ್ಮಾ(ರ) ಹೇಳುತ್ತಾರೆ, "ಪ್ರವಾದಿ ಚರ್ಯೆಯನ್ನು ತಿಳಿದವರು ಉತ್ತಮ ಸಲಹೆಗಾರ್ತಿ, ಉತ್ತಮ ಕರ್ಮಶಾಸ್ತ್ರಜ್ಞೆ, ಕುರ್‌ಆನಿನ ಸೂಕ್ತಗಳು ಅವತೀರ್ಣದ ಹಿನ್ನೆಲೆ ಹಾಗೂ ಕಡ್ಡಾಯ ಕರ್ಮಗಳ ವಿಷಯಗಳಲ್ಲಿ ಆಯಿಶಾ(ರ)ರಿಗೆ ಸರಿಸಾಟಿಯಾಗಿ ಯಾರನ್ನೂ ನಾನು ಕಂಡಿಲ್ಲ" ಎಂದರು.

✦ ಒಮ್ಮೆ ಹ. ಅಮೀರ್ ಮುಆವಿಯಾ(ರ)ರು ತಮ್ಮ ಆಡಳಿತ ಕಾಲದಲ್ಲಿ, "ಜನರಲ್ಲಿ ಅತಿದೊಡ್ಡ ವಿದ್ವಾಂಸ ಯಾರು?" ಎಂದು ಆಸ್ಥಾನಿಕರೊಡನೆ ಪ್ರಶ್ನಿಸಿದರು. ಆಗ ಜನರು, "ಅಮೀರುಲ್ ಮೂಮಿನೀನ್ ನೀವು" ಎಂದರು. ಮುಆವಿಯಾ(ರ)ರು ಆಣೆ ಹಾಕಿ ಕೇಳಿದರು. ಆಗ ಆಸ್ಥಾನಿಕರು, "ಹಾಗೆ ಕೇಳಿದರೆ ಅದು ಆಯಿಶಾ(ರ)" ಎಂದರು.

✦ ಪ್ರವಾದಿವರ್ಯರ(ಸ) ಆಪ್ತರಾದ ಹ. ಝುಬೈರ್(ರ)ರ ಪುತ್ರ ವಿದ್ವಾಂಸ, ಕರ್ಮಶಾಸ್ತ್ರಜ್ಞರಾಗಿದ್ದ ಹ. ಅರ್‌ವಾ(ರ) ಹೇಳುತ್ತಾರೆ, "ನಾನು ಹಲಾಲ್(ಧರ್ಮಬದ್ಧ) ಹಾಗೂ ಹರಾಮ್(ನಿಷಿದ್ಧ)ಗಳ ಬಗ್ಗೆ ಕವನಗಳ ರಚನೆ ಹಾಗೂ ವೈದ್ಯಶಾಸ್ತ್ರದಲ್ಲಿ ಉಮ್ಮುಲ್ ಮೂಮಿನೀನ್ ಹ. ಆಯಿಶಾ(ರ)ರಿಗಿಂತ ಶ್ರೇಷ್ಠರನ್ನು ಕಂಡಿಲ್ಲ" ಎಂದಿದ್ದಾರೆ.

✦ ಹ. ಆಯಿಶಾ(ರ)ರ ಓರ್ವ ಶಿಷ್ಯರಾಗಿದ್ದ ಮಸ್ರೂಕ್ ತಾಬಿಈಯವರ ಎಳಿಗೆ ಓರ್ವ ವ್ಯಕ್ತಿ ಬಂದು, "ಹ. ಆಯಿಶಾ(ರ)ರಿಗೆ ಧರ್ಮಶಾಸ್ತ್ರದ ಕಡ್ಡಾಯ ಕರ್ಮಗಳ ಜ್ಞಾನವಿತ್ತೇ?" ಎಂದು ಪ್ರಶ್ನಿಸಿದರು. ಆಗ ಅವರೆಂದರು, ಅಲ್ಲಾಹನಾಣೆ, ಪ್ರಸಿದ್ಧ ಸಹಾಬಿಗಳೂ ಸಹ ಅವರ(ರ) ಬಳಿ ಕಡ್ಡಾಯ ಕರ್ಮಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಕೇಳುವುದನ್ನು ನಾನು ಕಣ್ಣಾರೆ ಕಂಡಿದ್ದೇನೆ" ಎಂದರು.

✦ ಇಮಾಮ್ ಝುಹ್ರಿರವರು ಹೇಳುತ್ತಾರೆ, "ಒಂದು ವೇಳೆ ಎಲ್ಲಾ ಪುರುಷರ ಹಾಗೂ ಸತ್ಯವಿಶ್ವಾಸಿಗಳ ಮಾತೆಯರ ಜ್ಞಾನವನ್ನು ಒಟ್ಟಾಗಿಸಿದರೆ ಆಯಿಶಾ(ರ)ರ ಜ್ಞಾನವು ಅವರೆಲ್ಲರಿಗಿಂತ ಅಧಿಕವಾಗಿರುತ್ತಿತ್ತು" ಎಂದರು.

## ಒಂದು ಪ್ರವಾದಿ ವಚನ:

ಪ್ರವಾದಿವರ್ಯರು(ಸ) ಹೇಳಿದರು, "ತಮ್ಮ ಧರ್ಮದ ಒಂದು ಭಾಗವನ್ನು ಆ ಶ್ವೇತವರ್ಣದ ಸ್ತ್ರೀಯಿಂದ ಕಲಿತುಕೊಳ್ಳಿರಿ. ಪ್ರಾಯಶಃ 'ಒಂದು ಭಾಗ'ದ ಅರ್ಥ ವಿಶೇಷವಾಗಿ ಸ್ತ್ರೀಯರಿಗೆ ಸಂಬಂಧಿಸಿದ್ದಾಗಿರಬಹುದು. ಒಂದು ವೇಳೆ, ಆಯಿಶಾ(ರ)ರು ಪ್ರವಾದಿವರ್ಯರ(ಸ) ಬಳಿ ವಿಷಯಗಳನ್ನು ತಿಳಿದು ಅದನ್ನು ಸಾರ್ವತ್ರಿಕಗೊಳಿಸದಿರುತ್ತಿದ್ದರೆ ನಮಗೆ ಧರ್ಮದ ಜ್ಞಾನದ ಅರ್ಧ ಭಾಗವೇ ದೊರಕುತ್ತಿತ್ತು. ಇದಕ್ಕೆ ಎಲ್ಲಾ ವಿದ್ವಾಂಸರು ಒಮ್ಮತಾಭಿಪ್ರಾಯ ವ್ಯಕ್ತಪಡಿಸುತ್ತಾರೆ.

## ಎರಡನೇ ಪ್ರವಾದಿ ವಚನ:

ಪ್ರವಾದಿವರ್ಯರು(ಸ) ಹೇಳಿರುವರು, "ಯಾವ ರೀತಿ ಎಲ್ಲಾ ಭೋಜನಗಳ ಸಾರಿನಲ್ಲಿ ಅದ್ದಿದ ರೊಟ್ಟಿ ತುಂಡುಗಳಿಗೆ ಅತ್ಯುನ್ನತ ಸ್ಥಾನವಿದೆಯೋ, ಅದೇ ರೀತಿ ಹ. ಆಯಿಶಾ(ರ)ರಿಗೆ ಎಲ್ಲಾ ಸ್ತ್ರೀಯರಲ್ಲಿ ಅತ್ಯುತ್ತಮ ಸ್ಥಾನವಿದೆ." ಆಯಿಶಾ(ರ)ರಿಗೆ ದೊರೆತ ಜ್ಞಾನವನ್ನು ಪ್ರವಾದಿಯವರು(ಸ) ಯಾವ ರೀತಿ ಹರಡಿದರು ಎನ್ನುವುದನ್ನು ಮುಂದೆ ವಿವರವಾಗಿ ನೋಡೋಣ.

## ಕೌಟುಂಬಿಕ ಜೀವನ:

ಆಯಿಶಾ(ರ)ರವರ ಕುಟುಂಬ ಜೀವನವು ತುಂಬ ಸರಳವಾಗಿತ್ತು, ಕಾರಣ ಪ್ರವಾದಿವರ್ಯರು(ಸ) ಬೂಟಾಟಿಕೆ ಹಾಗೂ ತೋರಿಕೆಯನ್ನು ಇಷ್ಟಪಡುತ್ತಿರಲಿಲ್ಲ. ಅವರು(ಸ) ಸರಳ ಬದುಕನ್ನು ಇಷ್ಟಪಡುತ್ತಿದ್ದರು. ತನ್ನ ಕುಟುಂಬವು ಸರಳತೆಗೆ ಮಾದರಿಯಾಗಬೇಕೆಂದು ಪ್ರವಾದಿವರ್ಯರು(ಸ) ಬಯಸುತ್ತಿದ್ದರು. ಅದಕ್ಕಾಗಿ ತಮ್ಮ(ಸ) ಪತ್ನಿಯರಿಗೆ ಉಪದೇಶ ನೀಡುತ್ತಿದ್ದರು.

ಪ್ರವಾದಿವರ್ಯರು(ಸ) ಆಯಿಶಾ(ರ)ರ ಕಡೆ ವಿಶೇಷ ಗಮನಹರಿಸಲ
ಕಾರಣವೇನೆಂದರೆ ತಮ್ಮ(ಸ) ಪತ್ನಿಯರಲ್ಲಿ ಆಯಿಶಾ(ರ)ರು ವಯಸ್ಸಿನ
ಕಿರಿಯರು ಹಾಗೂ ಅನುಭವದ ಕೊರತೆ ಅವರಲ್ಲಿ ಇತ್ತು. ಎರಡನೆ
ಕಾರಣ, ಆಯಿಶಾ(ರ)ರು ಅತೀ ಬುದ್ಧಿವಂತರು ಹಾಗ
ಸ್ಮರಣಶಕ್ತಿಯುಳ್ಳವರಾಗಿದ್ದರು. ಅವರನ್ನು(ರ) ಶುಭ್ರ ಹಾಳೆಗೆ ಹೋಲಿಸಲಾಗಿದ

ಆಯಿಶಾ(ರ)ರು ಪ್ರವಾದಿವರ್ಯರ(ಸ) ಮನೆಗೆ ಆಗಮಿಸಿದಾಗ ಅವರ(ಸ
ಮನೆ ದೊಡ್ಡ ಬಂಗಲೆಯಾಗಿರದೆ, ಮಸ್ಜಿದುನ್ನಬವಿಗೆ ತಾಗಿಕೊಂಡಿದ್ದ ಕೆಲ
ಕೋಣೆಗಳಲ್ಲಿ ಆಯಿಶಾ(ರ)ರ ಕೋಣೆ ಒಂದಾಗಿತ್ತು. ಅದರ ಬಾಗಿಲು ಮಸೀದಿಯ
ಕಡೆಗಿತ್ತು. ಎರಡುವರೆ–ಮೂರು ಮೀಟರ್ ಉದ್ದಗಲದ ಸಣ್ಣ ಕೋಣೆ. ಮಣ್ಣಿ
ಗೋಡೆಗಳು, ಖರ್ಜೂರ ಮರದ ಎಲೆಗಳ ಛಾವಣಿ, ಮರಳು ಹಾಗೂ ಮ
ನೀರಿನಿಂದ ರಕ್ಷಣೆ ಹೊಂದಲು ಛಾವಣಿಯ ಮೇಲೆ ಒಂದು ಕಂಬಳಿಯನು
ಹಾಕಲಾಗಿತ್ತು. ಓರ್ವ ವ್ಯಕ್ತಿ ನಿಂತರೆ ಕೈಗೆಟಕುವಷ್ಟು ಎತ್ತರದಲ್ಲಿ ಛಾವಣಿಯಿತ್ತು
ಬಾಗಿಲಿಗೆ ಚಿಲಕವಿರಲಿಲ್ಲ, ಅಡ್ಡ ಪಟ್ಟಿಯನ್ನು ಹಾಕಲಾಗಿತ್ತು. ಬಾಗಿಲಿ
ಕಂಬಳಿಯನ್ನು ಪರದೆಯಂತೆ ಬಳಸಲಾಗುತ್ತಿತ್ತು. ಪ್ರವಾದಿವರ್ಯರು(ಸ) ಅದೇ
ಬಾಗಿಲಿನಿಂದ ಮಸೀದಿಗೆ ತೆರಳುತ್ತಿದ್ದರು. ಅವರು(ಸ) ಹೆಚ್ಚಾಗಿ ಬಾಗಿಲ ಬಳಿಯಲ್ಲಿಯೇ
ಕುಳಿತುಕೊಳ್ಳುತ್ತಿದ್ದರು. ಅವರಿಗೆ(ಸ) ಯಾವುದೇ ವಸ್ತುವಿನ ಅಗತ್ಯ ಬಿದ್ದ
ಪರದೆಯೊಳಗೆ ಕೈಚಾಚಿ ಆಯಿಶಾ(ರ)ರಿಂದ ಪಡೆದುಕೊಳ್ಳುತ್ತಿದ್ದರು. ಇಅ್ತಿಕಾಫ
ಕುಳಿತುಕೊಳ್ಳುತ್ತಿದ್ದ ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ತಮ್ಮ ತಲೆಯನು
ಪರದೆಯೊಳಗೆ ಚಾಚುತ್ತಿದ್ದರು. ಆಯಿಶಾ(ರ)ರು ತಲೆಯನ್ನು ತೊಳೆದು ಬಾಚುತ್ತಿದ್ದರು

## ಮನೆಯ ಸಾಮಗ್ರಿಗಳು:

ಆಯಿಶಾ(ರ)ರ ಮನೆಯಲ್ಲಿ ಮಂಚ, ಹಾಸಿಗೆ, ದಿಂಬು, (ಖರ್ಜೂರದ
ತೊಗಟೆ ತುಂಬಲಾಗಿತ್ತು) ಖರ್ಜೂರವಿಡಲು ಒಂದು ಸಣ್ಣ ಮಡಕೆ, ಹಿಟ್ಟ
ಇಡಲು ಒಂದು ಮಡಕೆ (ಈ ಎರಡೂ ಮಡಕೆಗಳು ಎಂದಿಗೂ
ತುಂಬಿರುತ್ತಿರಲಿಲ್ಲ. ಒಂದು ವೇಳೆ ತುಂಬಿದ್ದರೂ ಸಂಜೆ ವೇಳೆಗ
ಖಾಲಿಯಾಗುತ್ತಿತ್ತು.) ಬಟ್ಟಲು, ಲೋಟ ಇತ್ಯಾದಿ ಸಾಮಗ್ರಿಗಳು ಒಂದೊಂದು
ಮಾತ್ರವಿತ್ತು.

ಆಯಿಶಾ(ರ)ರು ಹೇಳುತ್ತಾರೆ, "ನಲ್ವತ್ತು ರಾತ್ರಿಗಳು ಕಳೆದು ಹೋಗುತ್ತಿದ್ದವು.
ಆದರೆ ಮನೆಯಲ್ಲಿ ದೀಪ ಉರಿಯುತ್ತಿರಲಿಲ್ಲ."

## ಆಹಾರ ಪಾನೀಯ:

ಆಯಿಶಾ(ರ)ರು ಹೇಳುತ್ತಾರೆ, "ತಿಂಗಳುಗಟ್ಟಲೆ ಮನೆಯಲ್ಲಿ ಒಲೆ

ಉರಿಯುತ್ತಿರಲಿಲ್ಲ. ಒಣ ಖರ್ಜೂರ ಹಾಗೂ ನೀರಿನಿಂದಲೇ ದಿನದೂಡುತ್ತಿದ್ದೆವು. ಪ್ರಾಯಶಃ ಪ್ರಿಯ ಪ್ರವಾದಿವರ್ಯರು(ಸ) ಇದನ್ನು ಕೂಡಾ ಹೊಟ್ಟೆ ತುಂಬಾ ಉಂಡಿರುವುದಿಲ್ಲ."

ಖೈಬರ್ ವಿಜಯದ ಬಳಿಕ ಪ್ರವಾದಿವರ್ಯರು(ಸ) ತಮ್ಮ ಪತ್ನಿಯರಿಗೆ(ರ) ವಾರ್ಷಿಕ ಖರ್ಚು ವೆಚ್ಚಕ್ಕಾಗಿ ಸ್ವಲ್ಪ ಒಣ ಖರ್ಜೂರ, ಬಾರ್ಲಿ ಹಾಗೂ ಹಣವನ್ನು ನಿಶ್ಚಯಿಸಿದ್ದರು. ಅದರಲ್ಲಿ ಆಯಿಶಾ(ರ)ರಿಗೂ ಪಾಲು ದೊರಕುತ್ತಿತ್ತು. ಆದರೆ ಆಯಿಶಾ(ರ)ರು ಅದನ್ನು ದಾನ ಮಾಡಿ ಕೆಲವೇ ದಿನಗಳಲ್ಲಿ ದಾಸ್ತಾನು ಖಾಲಿ ಮಾಡಿ ಬಿಡುತ್ತಿದ್ದರು.

ಪ್ರವಾದಿವರ್ಯರ(ಸ) ಸರಳತೆ ಹಾಗೂ ಔದಾರ್ಯದ ಬಗ್ಗೆ ಸಹಾಬಿಗಳೆಲ್ಲರೂ(ರ) ತಿಳಿದಿದ್ದಾರೆ. ಆಯಿಶಾ(ರ)ರು ಪ್ರಾಯದಲ್ಲಿ ಚಿಕ್ಕವರಾಗಿದ್ದರಿಂದ ಪ್ರವಾದಿವರ್ಯರು(ಸ) ಆಯಿಶಾ(ರ)ರ ಮನೆಗೆ ಉಡುಗೊರೆಗಳನ್ನು ಕಳುಹಿಸುತ್ತಿದ್ದರು. ಆದರೆ ಆಯಿಶಾ(ರ)ರು ಅವೆಲ್ಲವನ್ನೂ ಬಡವರಿಗೆ ವಿತರಿಸಿ ಬಿಡುತ್ತಿದ್ದರು. ಹೆಚ್ಚಾಗಿ ಪ್ರವಾದಿವರ್ಯರು(ಸ) ಆಯಿಶಾ(ರ)ರ ಮನೆಗೆ ಹೋಗಿ, "ಇಂದು ಊಟಕ್ಕೇನಾದರೂ ಇದೆಯೇ?" ಎಂದು ಪ್ರಶ್ನಿಸುತ್ತಿದ್ದರು. ಅದಕ್ಕುತ್ತರವಾಗಿ ಆಯಿಶಾ(ರ)ರು, "ಪ್ರಿಯ ಪ್ರವಾದಿಗಳೇ(ಸ) ಅಲ್ಲಾಹನ ನಾಮದ ಹೊರತು ಏನೂ ಇಲ್ಲ" ಎನ್ನುತ್ತಿದ್ದರು. ಆಗ ಪ್ರವಾದಿವರ್ಯರು(ಸ), "ಓಹೋ ಹಾಗಾದರೆ ನನಗಿಂದು ಉಪವಾಸ" ಎನ್ನುತ್ತಿದ್ದರು. ಆಯಿಶಾ(ರ)ರು ಕೂಡ ಉಪವಾಸದಿಂದ ಇದ್ದು ಬಿಡುತ್ತಿದ್ದರು.

## ಗುಣ ಸ್ವಭಾವ:

ಹ. ಆಯಿಶಾ(ರ)ರು ಮುಗ್ಧ ಸ್ವಭಾವದವರಾಗಿದ್ದರು. ಪ್ರವಾದಿವರ್ಯರ(ಸ) ಪ್ರೀತಿ ಹಾಗೂ ತರಬೇತಿಯು ಅವರಿಗೆ(ರ) ಸರಳತೆಯ ಪಾಠ ಕಲಿಸಿತ್ತು. ಮುಗ್ಧ ಸ್ವಭಾವದ ಆಯಿಶಾ(ರ)ರು ಸಕಲ ಸಂಗತಿಗಳನ್ನು ಪ್ರವಾದಿವರ್ಯರ(ಸ) ಮುಂದಿಡುತ್ತಿದ್ದರು. ಅವರು(ಸ) ಅಗತ್ಯಾನುಸಾರ ಉಪದೇಶ ಮಾಡುತ್ತಿದ್ದರು.

ಪ್ರವಾದಿವರ್ಯರ(ಸ) ಪ್ರಥಮ ಪತ್ನಿ ಹ. ಖದೀಜಾ(ರ)ರು ಅವರ(ಸ) ನಿಸ್ವಾರ್ಥ ಸೇವೆಗೈದಿದ್ದರು. ಮಕ್ಕಾದ ಕುರೈಶ್ ಸರದಾರರು ಪ್ರವಾದಿವರ್ಯರನ್ನು(ಸ) ಹತ್ಯೆಗೈಯಲು, ಪೀಡಿಸಲು ಸಂಚು ಹೂಡುತ್ತಿದ್ದ ಸಂದಿಗ್ಧ ಪರಿಸ್ಥಿತಿಯಲ್ಲಿ ಹ. ಖದೀಜಾ(ರ)ರು ತನು-ಮನ-ಧನದಿಂದ ಪ್ರವಾದಿವರ್ಯರಿಗೆ(ಸ) ಸಹಕಾರ ನೀಡಿದ್ದರು. ಹ. ಖದೀಜಾ(ರ)ರ ನಿಧನದ ಬಳಿಕವೂ ಪ್ರವಾದಿವರ್ಯರು(ಸ) ಅವರನ್ನು ಸದಾ ನೆನಪಿಸುತ್ತಿದ್ದರು. ಈ

ಸಂಗತಿಯು ಪ್ರವಾದಿ ಪತ್ನಿಯರಿಗೆ ಇರಿಸು ಮುರಿಸುಗೊಳಿಸುತ್ತಿತ್ತು. ಆಯಿಶಾ(ರ)ರ ಹೊರತು ಉಳಿದ ಪತ್ನಿಯರೆಲ್ಲರೂ ವಯಸ್ಸಿನಲ್ಲಿ ಹಿರಿಯರಾಗಿದ್ದರು. ಅವರೆಲ್ಲರೂ(ರ) ಪ್ರವಾದಿವರ್ಯರ(ಸ) ದುಃಖ ದುಮ್ಮಾನಗಳನ್ನು ನಿವಾರಿಸುವುದರಲ್ಲಿ ತಲ್ಲೀನರಾಗಿರುತ್ತಿದ್ದರು. ಕಿರಿಯ ವಯಸ್ಸಿನ ಆಯಿಶಾ(ರ)ರು ಮುಗ್ಧರು ಆಗಿದ್ದರಿಂದ ತನ್ನೊಳಗಿನ ವಿಚಾರಗಳನ್ನು ಹೇಳಿ ಬಿಡುತ್ತಿದ್ದರು.

ಒಮ್ಮೆ ಆಯಿಶಾ(ರ)ರು, "ಪ್ರವಾದಿಗಳೇ(ಸ)! ತಾವು(ಸ) ಒಂದು ವೃದ್ಧ ಮಹಿಳೆಯನ್ನೇಕೆ ಇಷ್ಟೊಂದು ನೆನಪಿಸುತ್ತೀರಿ. ಅಲ್ಲಾಹನು ಅವರಿಗಿಂತ ಉತ್ತಮ ಪತ್ನಿಯರನ್ನು ನಿಮಗೆ ನೀಡಿದ್ದಾನಲ್ಲವೇ?" ಎಂದು ಬಿಟ್ಟರು.

ಇದನ್ನು ಕೇಳಿದಾಕ್ಷಣ ಪ್ರವಾದಿವರ್ಯರ(ಸ) ಮುಖ ಕೆಂಪೇರಿತು. ಬಳಿಕ, "ಅಲ್ಲಾಹನಾಣೆ! ಜನರೆಲ್ಲರೂ ನನ್ನ ಪ್ರವಾದಿತ್ವವನ್ನು ತಿರಸ್ಕರಿಸಿದ ಸಂದರ್ಭದಲ್ಲಿ ವಿಶ್ವಾಸ ತಂದ ಪ್ರಥಮ ಮಹಿಳೆ ಖದೀಜಾ ಆಗಿದ್ದಾರೆ. ಇಸ್ಲಾಮಿನ ಕಾರ್ಯವನ್ನು ಮುನ್ನಡೆಸಲು ಸಂಪೂರ್ಣ ಆರ್ಥಿಕ ಸಹಾಯ ಅವರು(ರ) ನೀಡಿದವರು. ಅಲ್ಲಾಹನು ಅವರಿಂದ(ರ) ನನಗೆ ಸಂತಾನವನ್ನು ಕರುಣಿಸಿದನು" ಎಂದರು.

ನಾನು ಹದೀಸ್‌ಗಳನ್ನು ಸರಳ ಹಾಗೂ ಸಂಕ್ಷಿಪ್ತವಾಗಿ ವಿವರಿಸಿದ್ದೇನೆ. ಈ ಹದೀಸ್‌ಗಳು ಹಲವಾರು ರೂಪದಲ್ಲಿ ಗ್ರಂಥಗಳಲ್ಲಿ ದಾಖಲಾಗಿವೆ. ಕೆಲವೆಡೆ ಸಂಕ್ಷಿಪ್ತವಾಗಿ ಮತ್ತು ಕೆಲವೆಡೆ ವಿವರವಾಗಿ ಉಲ್ಲೇಖವಾಗಿವೆ. ವಿಪರ್ಯಾಸವೇನೆಂದರೆ, ಈ ಎಲ್ಲಾ ಹದೀಸ್‌ಗಳನ್ನು ಆಯಿಶಾ(ರ)ರವರೇ ಉಲ್ಲೇಖಿಸಿದ್ದಾರೆ. ಅವರು(ರ) ಬಯಸುತ್ತಿದ್ದರೆ ಹದೀಸ್‌ಗಳಲ್ಲಿ ವ್ಯಕ್ತವಾದರೂ ತಮ್ಮ ದೌರ್ಬಲ್ಯಗಳನ್ನು ಮರೆಮಾಚಬಹುದಿತ್ತು. ಆದರೆ ಆಯಿಶಾ(ರ)ರವರು ಮನಬಿಚ್ಚಿ ಹದೀಸ್‌ಗಳನ್ನು ಉಲ್ಲೇಖಿಸಿದ್ದಾರೆ. ಆಯಿಶಾ(ರ)ರು ಖದೀಜಾ(ರ)ರವರ ಶ್ರೇಷ್ಠತೆಯನ್ನು ಪ್ರಕಟಪಡಿಸುತ್ತಾ, "ಪ್ರವಾದಿವರ್ಯರು(ಸ) ಈ ಉತ್ತರ ನೀಡಿದಾಗ ನನಗೆ ಖದೀಜಾ(ರ)ರ ಮೇಲೆ ಅಸೂಯೆ ಹುಟ್ಟಿತು. ಒಂದು ವೇಳೆ ಅವರ ಸ್ಥಾನದಲ್ಲಿ ನಾನಿರುತ್ತಿದ್ದರೆ!" ಎಂದು ಮನದಲ್ಲೇ ಅಂದುಕೊಂಡೆ ಎಂದರು.

ಒಂದು ಕಡೆಯಿಂದ ಓರ್ವ ಕೈದಿಯುನ್ನು ಕರೆತರಲಾಯಿತು. ಪ್ರವಾದಿವರ್ಯರು(ಸ) ಆತನನ್ನು ಆಯಿಶಾ(ರ)ರ ಮನೆಯಲ್ಲಿ ಗೃಹಬಂಧನದಲ್ಲಿರಿಸಿದರು. ಆಯಿಶಾ(ರ)ರು ಅನ್ಯ ಸ್ತ್ರೀಯರೊಂದಿಗೆ ಮಾತಿನಲ್ಲಿ ತಲ್ಲೀನರಾಗಿದ್ದರು. ಕೈದಿಯು ಸಂದರ್ಭ ನೋಡಿ ಪರಾರಿಯಾದನು.

ಪ್ರವಾದಿವರ್ಯರು(ಸ) ಆಯಿಶಾ(ರ)ರವರ ಮನೆಗೆ ಪ್ರವೇಶಿಸಿ ಕೈದಿಯ ಬಗ್ಗೆ ವಿಚಾರಿಸಿದರು. ಆಯಿಶಾ(ರ)ರು ಮೌನ ವಹಿಸಿದರು. ಕೋಪದಲ್ಲಿ ಪ್ರವಾದಿವರ್ಯರು(ಸ) "ನಿನ್ನ ಕೈ ಮುರಿದು ಹೋಗಲಿ" ಎಂದು ಮನೆಯಿಂದ ಹೊರ ನಡೆದರು. ಸಹಾಬಿಗಳೊಂದಿಗೆ ನಡೆದ ವಿಚಾರವನ್ನು ತಿಳಿಸಿದರು, ಕೊನೆಗೆ ಆ ಕೈದಿಯು ಪುನಃ ಬಂಧಿಸಲ್ಪಟ್ಟನು. ತದನಂತರ ಪ್ರವಾದಿವರ್ಯರು(ಸ) ಆಯಿಶಾ(ರ)ರ ಮನೆಗೆ ಹೋದರು. ಆ ವೇಳೆಗೆ ಆಯಿಶಾ(ರ)ರು ಒಮ್ಮೆ ಒಂದು ಕೈ ಮತ್ತೊಮ್ಮೆ ಇನ್ನೊಂದು ಕೈ ನೋಡುತ್ತಿದ್ದರು. ಆಶ್ಚರ್ಯಚಕಿತರಾದ ಪ್ರವಾದಿವರ್ಯರು(ಸ) "ಆಯಿಶಾ ಇದೇನು ಮಾಡುತ್ತಿರುವೆ?" ಎಂದು ಪ್ರಶ್ನಿಸಿದರು. "ಪ್ರವಾದಿಗಳೇ(ಸ) ಯಾವ ಕೈ ಮುರಿಯಲ್ಪಡುತ್ತದೆ ಎಂದು ನೋಡುತ್ತಿದ್ದೇನೆ" ಎಂದರು ಆಯಿಶಾ(ರ). ಹ. ಆಯಿಶಾರ(ರ) ಮುಗ್ಧ ಉತ್ತರದಿಂದ ಪ್ರಭಾವಿತರಾದ ಪ್ರವಾದಿವರ್ಯರು(ಸ) ಆಯಿಶಾ(ರ)ರಿಗಾಗಿ ಪ್ರಾರ್ಥಿಸಿದರು.

✦ ಒಮ್ಮೆ ಕೆಲವು ಯಹೂದಿಗಳು ಪ್ರವಾದಿವರ್ಯರ(ಸ) ಬಳಿಗೆ ಬಂದರು. ಅವರೆಲ್ಲರೂ ಕಡು ವೈರಿಗಳಾಗಿದ್ದರು. ಪ್ರವಾದಿವರ್ಯರ(ಸ) ಮೇಲೆ ತುಂಬಾ ಅಸೂಯೆ ಪಡುತ್ತಿದ್ದರು. ಪ್ರವಾದಿವರ್ಯರ(ಸ) ಬಳಿಗೆ ಬಂದಾಗ "ಅಸ್ಸಲಾಮು ಅಲೈಕುಮ್" (ನಿಮ್ಮ ಮೇಲೆ ಶಾಂತಿ ಇರಲಿ) ಎಂದು ಹೇಳುವ ಬದಲು, ನಾಲಗೆಯನ್ನು ಒತ್ತಿ ಹಿಡಿದು "ಅಸ್ಸಾಮ್ ಅಲೈಕುಮ್" (ನಿಮಗೆ ಮರಣ ಬರಲಿ) ಎಂದರು. ಇದನ್ನು ಕೇಳಿದ ಆಯಿಶಾ(ರ)ರು, "ಅಲೈಕುಮ್ ಅಸ್ಸಾಮ್ ವ ಲಅ್‌ನತ್" (ನಿಮಗೂ ಮರಣ ಬರಲಿ ಹಾಗೂ ನಿಮ್ಮ ಮೇಲೆ ಶಾಪವಿರಲಿ) ಎಂದರು. ಪ್ರವಾದಿವರ್ಯರು(ಸ) ಆಯಿಶಾ(ರ)ರನ್ನು ತಡೆದು, "ಆಯಿಶಾ! ಮೃದುವಾಗು, ಮೃದುವಾಗು, ಅಲ್ಲಾಹನು ಮೃದುತ್ವವನ್ನು ಮೆಚ್ಚುತ್ತಾನೆ" ಎಂದರು.

✦ ಒಮ್ಮೆ ಒಬ್ಬರು ಹ. ಆಯಿಶಾ(ರ)ರ ಒಂದು ವಸ್ತುವನ್ನು ಕದ್ದರು. ಆಯಿಶಾ(ರ)ರು ಆ ವ್ಯಕ್ತಿಯನ್ನು ಶಪಿಸಿದರು. ಇದನ್ನು ಕೇಳಿದ ಪ್ರವಾದಿವರ್ಯರು(ಸ), "ಆತನಿಗೆ ಶಾಪ ಹಾಕಿ ನಿನ್ನ ಪುಣ್ಯ ಹಾಗೂ ಆತನ ಶಿಕ್ಷೆಯನ್ನು ಕಡಿತಗೊಳಿಸಿದಿರು" ಎಂದರು.

✦ ಒಮ್ಮೆ ಪ್ರಯಾಣದಲ್ಲಿ ಒಂಟೆಯು ಆತುರ ಪಡುತ್ತಿತ್ತು. ಆಯಿಶಾ(ರ)ರು ಆ ಒಂಟೆಗೆ ಶಾಪ ಹಾಕಿದರು. ಜೊತೆಗಿದ್ದ ಪ್ರವಾದಿವರ್ಯರು(ಸ) ಒಂಟೆಯನ್ನು ನಿಲ್ಲಿಸಿ ಹಿಂದಿರುಗಿಸಲು ಆದೇಶಿಸಿದರು. "ಶಪಿಸಲ್ಪಟ್ಟ ವಸ್ತು ನಮ್ಮ ಬಳಿ ಇರಕೂಡದು" ಎಂದರು. ಹೀಗೆ ಪ್ರಾಣಿಗಳಿಗೂ ಶಾಪ ಹಾಕಬಾರದೆಂದು ಕಲಿಸಿದರು.

✦ ಒಮ್ಮೆ ಆಯಿಶಾ(ರ)ರು "ಆಕೆ ಕುಳ್ಳಿ" ಎಂದರು. ಅವರನ್ನು ತಡೆದ ಪ್ರವಾದಿವರ್ಯರು(ಸ), "ನೀವು ಪರದೂಷಣೆ ಮಾಡಿದಿರಿ" ಎಂದರು.

✦ ಒಮ್ಮೆ ಆಯಿಶಾ(ರ)ರು, "ಸಫಿಯಾ(ರ)ರಿಗೆ ಕುಳ್ಳಿ" ಎಂದರು. ಅದನ್ನು ಕೇಳಿದ ಪ್ರವಾದಿವರ್ಯರು(ಸ), "ಆಯಿಶಾ(ರ) ನೀನು ಹೇಳಿದ ಈ ಮಾತು ಸಮುದ್ರದಲ್ಲಿ ಹಾಕಿದರೆ ಸಮುದ್ರದ ನೀರೆಲ್ಲಾ ಕಹಿಯಾಗಿ ಬಿಡುತ್ತಿತ್ತು" ಎಂದರು.

ಇಂತಹ ಅನೇಕ ಸ್ವಾರಸ್ಯಕರ ಘಟನೆಗಳಿವೆ. ಪ್ರತಿಯೊಂದು ಘಟನೆಯೊಂದಿಗೆ ಪ್ರವಾದಿವರ್ಯರು(ಸ) ಆಯಿಶಾ(ರ)ರನ್ನು ತಿದ್ದಿದರು. ಉತ್ತಮ ಮಾರ್ಗದರ್ಶನ ನೀಡಿದರು. ಆಯಿಶಾ(ರ)ರು ಈ ಮೂಲಕ ಉತ್ತಮ ಗುಣನಡತೆ ಹಾಗೂ ಜ್ಞಾನವನ್ನು ವೃದ್ಧಿಸಿಕೊಂಡರು.

ಪ್ರವಾದಿಯವರ(ಸ) ಶಿಕ್ಷಣದಿಂದ ಅತೀ ಹೆಚ್ಚು ಲಾಭಗಳಿಸುತ್ತಿದ್ದ ಆಯಿಶಾ(ರ)ರು ಪ್ರವಾದಿಯವರ(ಸ) ಮೇಲೆ ಎಲ್ಲ ಪತ್ನಿಯರಿಗಿಂತ ಹೆಚ್ಚು ಪ್ರಭಾವ ಬೀರಿದರು. ಪ್ರವಾದಿವರ್ಯರು(ಸ) ತಮ್ಮ ಪತ್ನಿಯರಲ್ಲಿ ಆಯಿಶಾ(ರ)ರನ್ನು ಹೆಚ್ಚು ಪ್ರೀತಿಸುತ್ತಿದ್ದರು. ಈ ವಿಚಾರದಲ್ಲಿ ಪ್ರವಾದಿವರ್ಯರು(ಸ) ಅಲ್ಲಾಹನಲ್ಲಿ ಕ್ಷಮೆ ಯಾಚಿಸುತ್ತಾ, "ಓ... ಅಲ್ಲಾಹನೇ! ನನಗೆ ಸಾಧ್ಯವಾದ ರೀತಿಯಲ್ಲಿ ಪತ್ನಿಯರೊಂದಿಗೆ ನ್ಯಾಯ ಪಾಲಿಸುತ್ತಿದ್ದೇನೆ. ಆದರೆ ನನ್ನ ವಶದಲ್ಲಿರದ ವಿಚಾರಗಳಿಗೆ ನನ್ನನ್ನು ಕ್ಷಮಿಸು." (ಪ್ರೀತಿಯಲ್ಲಿ ಹೆಚ್ಚು-ಕಡಿಮೆ ಆಗಿದ್ದರೆ)

ಪ್ರವಾದಿವರ್ಯರು(ಸ) ಆಯಿಶಾ(ರ)ರನ್ನು ಅತ್ಯಧಿಕ ಪ್ರೀತಿಸಲು ಕಾರಣ, ಅವರ ಜ್ಞಾನ ಹಾಗೂ ಪ್ರಾವೀಣ್ಯತೆಯಾಗಿತ್ತೇ ಹೊರತು ಅವರ ಸೌಂದರ್ಯವಲ್ಲ. ಪ್ರವಾದಿವರ್ಯರ(ಸ) ಇತರೆ ಪತ್ನಿಯರು(ರ) ಇವರಿಗಿಂತಲೂ ಸೌಂದರ್ಯವತಿಯಾಗಿದ್ದರು. ಝೈನಬ್(ರ), ಸಫಿಯ್ಯಾ(ರ), ಜುವೈರಿಯಾ(ರ), ಮಾರಿಯತುಲ್ ಕಿಬ್ತಿಯಾ(ರ) ಇವರೆಲ್ಲರೂ ಆಯಿಶಾ(ರ)ರಿಗಿಂತ ಸುಂದರಿಯರಾಗಿದ್ದರು.

**ಮನೆಗೆಲಸ:**

ಕೆಲವೇ ಸಾಮಗ್ರಿಗಳಿರುವ ಒಂದು ಸಣ್ಣ ಕೋಣೆಯಲ್ಲಿ ಸರಳ ಬದುಕು ಸಾಗುತ್ತಿದೆ ಎಂದಾದರೆ ಸಾಮಾನ್ಯವಾಗಿ ಮನೆಯೊಡತಿ ಅತ್ತು ಜಗಳ ಮಾಡಿಕೊಂಡು ಕೆಲಸ ಕಾರ್ಯಗಳನ್ನು ನಿರ್ವಹಿಸಿದರೆ ಆ ಮನೆಯು ಒಂದು ಮಾದರಿ ಮನೆಯಾಗಲು ಸಾಧ್ಯವಿಲ್ಲ. ಮನೆ ಸಣ್ಣದಿರಲಿ-ದೊಡ್ಡದಿರಲಿ

ಮನೆಯೊಡತಿ ಹರ್ಷೋಲ್ಲಾಸದಿಂದ ಸಕಲ ಕೆಲಸ ಕಾರ್ಯಗಳನ್ನು ಸ್ವತಃ ಮಾಡಿದರೆ ಮಾತ್ರ ಅದು ಮಾದರಿ ಮನೆಯಾಗಲು ಸಾಧ್ಯ. ಹ. ಆಯಿಶಾ(ರ)ರು ಕೆಲಸ ಕಾರ್ಯಗಳಲ್ಲಿ ಇತರೆ ಸ್ತ್ರೀಯರಿಗೆ ಮಾದರಿಯಾಗಿದ್ದರು.

ಮನೆಯ ಅಗತ್ಯದ ಸಾಮಗ್ರಿಗಳನ್ನು ತಮ್ಮ ಪತ್ನಿಯರ ಮನೆಗೆ ತಲುಪಿಸುವ ಜವಾಬ್ದಾರಿಯನ್ನು ಪ್ರವಾದಿವರ್ಯರು(ಸ) ಬಿಲಾಲ್‌ರಿಗೆ(ರ) ವಹಿಸಿಕೊಟ್ಟಿದ್ದರು. ಅದರ ಪ್ರಕಾರ ಬಿಲಾಲ್(ರ)ರು ತಮ್ಮ ಹೊಣೆಗಾರಿಕೆಯನ್ನು ನಿರ್ವಹಿಸುತ್ತಿದ್ದರು. ಆದರೆ, ಆ ಸಾಮಗ್ರಿಗಳನ್ನು ಉಪಯೋಗ ಮಡುವ ವಿಷಯದಲ್ಲಿ ಅವರಿಗೆ(ರ) ಸ್ವತಂತ್ರ್ಯವಿತ್ತು.

ಲೇಖಕರು ಆಯಿಶಾ(ರ)ರ ಕುರಿತು ಈ ರೀತಿ ಬರೆದಿದ್ದಾರೆ. ಆಯಿಶಾ(ರ)ರು ಮನಃಪೂರ್ವಕವಾಗಿ ಮನೆಯ ಎಲ್ಲಾ ಕೆಲಸ ಕಾರ್ಯಗಳನ್ನು ಸ್ವತಃ ನಿರ್ವಹಿಸುತ್ತಿದ್ದರು. ಮನೆ ಸ್ವಚ್ಛತೆ, ಹಿಟ್ಟು ಕಲಸಿ ರೊಟ್ಟಿ ತಯಾರಿಸುವುದು, ಪ್ರವಾದಿವರ್ಯರಿಗೆ(ಸ) ಹಾಸಿಗೆ ಹಾಸುವುದು, ವುಝೂವಿಗೆ ನೀರು ತಂದುಕೊಡುವುದು, ಕುರ್ಬಾನಿ ಒಂಟೆಗೆ ಕೊರಳ ಪಟ್ಟಿಯನ್ನು ತಯಾರಿಸುವುದು, ಬಟ್ಟೆ ಒಗೆಯುವುದು, ಪ್ರವಾದಿವರ್ಯರ(ಸ) ತಲೆಯನ್ನು ತೊಳೆದು ಬಾಚುವುದು, ಪ್ರವಾದಿಯವರಿಗೆ(ಸ) ಸುಗಂಧ ಲೇಪಿಸುವುದು, ಪ್ರವಾದಿವರ್ಯರು(ಸ) ಮಲಗುವ ಸ್ಥಳದಲ್ಲಿ ಮಿಸ್ವಾಕ್ (ಹಲ್ಲುಜ್ಜುವ ಬ್ರಶ್) ಇಡುವುದು, ಪ್ರವಾದಿವರ್ಯರು(ಸ) ಹಲ್ಲುಜ್ಜಿದ ಬಳಿಕ ಮಿಸ್ವಾಕ್ ಅನ್ನು ಶುಚಿಗೊಳಿಸುವುದು, ಅತಿಥಿ ಸತ್ಕಾರ, ಪ್ರವಾದಿವರ್ಯರು(ಸ) ಮಸೀದಿಗೆ ತಿಂಡಿ–ತಿನಿಸುಗಳನ್ನು ಕಳುಹಿಸಲು ಸೂಚಿಸಿದಾಗ ಅದನ್ನು ಕೊಟ್ಟು ಕಳಿಸುವುದು (ಮನೆಯಲ್ಲಿ ಏನೂ ಇಲ್ಲದಿದ್ದಲ್ಲಿ ನೆರೆಯಾಚಿಸುತ್ತಿದ್ದರು) ಇದೇ ಮುಂತಾದ ಕೆಲಸಗಳನ್ನು ಆತ್ಮಪೂರ್ವಕವಾಗಿ ನಿರ್ವಹಿಸುತ್ತಿದ್ದರು.

ಅತಿಥಿ ಸತ್ಕಾರದಲ್ಲಿ ಯಾವುದೇ ಕುಂದುಕೊರತೆ ಮಾಡುತ್ತಿರಲಿಲ್ಲ. ಹ. ಖೈಸ್ ಗಫಾರಿ(ರ)ರು ಹೇಳುತ್ತಾರೆ, "ಒಮ್ಮೆ ಪ್ರವಾದಿವರ್ಯರು(ಸ) ಬನ್ನಿ, ಆಯಿಶಾ(ರ)ರ ಮನೆಗೆ ಹೋಗೋಣ" ಎಂದು ನಮ್ಮನ್ನೆಲ್ಲಾ ಕರೆದುಕೊಂಡು ಹೋದರು. ಪ್ರವಾದಿವರ್ಯರು(ಸ) ಆಯಿಶಾ(ರ)ರಲ್ಲಿ "ಊಟ ಬಡಿಸುವಂತೆ" ಹೇಳಿದರು. ಬೇಳೆ ಹೊಟ್ಟಿನಿಂದ ತಯಾರಿಸಿದ ಅನ್ನ ಬಡಿಸಿದರು. ತಿನ್ನಲು ಇನ್ನೇನಾದರೂ ಇದೆಯೇ ಎಂದು ಕೇಳಿದಾಗ, ಹರೀರ (ಒಂದು ಬಗೆಯ ಖಾನಕ) ತಂದು ಕೊಟ್ಟರು. ಪ್ರವಾದಿವರ್ಯರು(ಸ) ಪುನಃ ಕೇಳಿದಾಗ ಹಾಲು ಅದರ ಬಳಿಕ ನೀರು ತಂದುಕೊಟ್ಟರು.

ಇದು ಪ್ರವಾದಿವರ್ಯರ(ಸ) ಪ್ರಿಯ ಪತ್ನಿ ಆಯಿಶಾ(ರ)ರ ಮನೆಯ

ರೂಪವಾಗಿದೆ. ಆದರೆ ಇಂದು ನಮ್ಮ ಮನೆಗಳಲ್ಲಿ ತೋರಿಕೆ, ಸಂಕುಚಿ
ಭಾವನೆ, ಉದಾರತೆಯ ಕೊರತೆ ಗೋಚರಿಸುತ್ತದೆ. ಪ್ರವಾದಿವರ್ಯರ(ಸ
ಹಾಗೂ ಅವರ ಅನುಯಾಯಿಗಳ ಮಾದರಿ ಜೀವನವನ್ನು ಅನುಸರಿಸ
ಕಾರಣ ಮನೆಗಳ ಸಮೃದ್ಧಿ ಇಲ್ಲವಾಗಿದೆ.

**ಸೌದಾರ ತ್ಯಾಗ:**

ಓರ್ವ ಸಹಾಬಿಗೆ(ರ) ವಿವಾಹದ ನಂತರ ವಲೀಮ (ಮದುಮಗ
ಮನೆಯಲ್ಲಿ ಏರ್ಪಡಿಸುವ ಔತಣಕೂಟ) ಏರ್ಪಡಿಸಬೇಕಾಗಿತ್ತು. ಅವರು(ರ
ವಲೀಮ ಏರ್ಪಾಟು ಮಾಡುವ ಸ್ಥಿತಿಯಲ್ಲಿರಲಿಲ್ಲ. ಈ ವಿಷಯವನ
ಪ್ರವಾದಿವರ್ಯರ(ಸ) ಗಮನಕ್ಕೆ ತರಲಾಯಿತು. ಪ್ರವಾದಿವರ್ಯರು(ಸ) ಓರ್ವ
ವ್ಯಕ್ತಿಯನ್ನು ಕಳುಹಿಸಿ ಆಯಿಶಾ(ರ)ರ ಬಳಿಯಿಂದ ಧಾನ್ಯ ತುಂಬಿ
ಬುಟ್ಟಿಯನ್ನು ತರಿಸಿದರು. ಅಂದು ರಾತ್ರಿ ಆಹಾರ ಬೇಯಿಸಲು ಆಯಿಶಾ(ರ)
ಮನೆಯಲ್ಲಿ ಏನೂ ಉಳಿಯಲಿಲ್ಲ. ಹ. ಆಯಿಶಾ(ರ) ಹೇಳುತ್ತಾರೆ
"ಪ್ರವಾದಿವರ್ಯರು(ಸ) ಮನೆಯನ್ನು ಪ್ರವೇಶಿಸುವಾಗ ಉಚ್ಚಸ್ವರದ
ಹೀಗೆನ್ನುತ್ತಿದ್ದರು, "ಒಂದು ವೇಳೆ ಓರ್ವ ವ್ಯಕ್ತಿಯ ಬಳಿ ಸಂಪತ್ತು ರಾ
ಹಾಕಿದ ಎರಡು ಕಣಿವೆಗಳಿದ್ದರೂ ಮೂರನೆಯ ಕಣಿವೆಗಾಗಿ ಆಸೆ ಪಡುವನು
ಆತನ ಅತಿಯಾಸೆಯ ಬಾಯಿಯನ್ನು (ಗೋರಿಯ) ಮಣ್ಣೇ ತುಂಬಬಹುದು
ಅಲ್ಲಾಹನು ಹೇಳುತ್ತಾನೆ, ನಾವು ನಮಾಝನ್ನು ಸಂಸ್ಥಾಪಿಸಲು ಹಾಗ
ದಾನ-ಧರ್ಮ ಮಾಡಲು ಸಂಪತ್ತನ್ನು ಉಂಟುಮಾಡಿದ್ದೇವೆ. ಯಾರ
ಅಲ್ಲಾಹನೆಡೆಗೆ ಮರಳುತ್ತಾರೋ, ಅವರೆಡೆಗೆ ಅಲ್ಲಾಹನು ಮರಳುತ್ತಾನೆ.
ಆಯಿಶಾ(ರ)ರು ತಪ್ಪದೇ ಈ ಮಾತುಗಳನ್ನು ತಮ್ಮ ಬದುಕಿನ
ಅಳವಡಿಸಿಕೊಂಡಿದ್ದರು.

ಪ್ರವಾದಿವರ್ಯರ(ಸ) ಮನೆಗಳ ನಿರ್ವಹಣೆಯನ್ನು ಬಿಲಾಲ್(ರ)ರಿ
ವಹಿಸಿಕೊಡಲಾಗಿತ್ತು. ಅವರು(ರ) ಇಡೀ ವರ್ಷದ ಆಹಾರ ಸಾಮಗ್ರಿಗಳನ
ಪ್ರವಾದಿ ಪತ್ನಿಯರ(ರ) ಮನೆಗೆ ತಲುಪಿಸುತ್ತಿದ್ದರು. ಕೊರತೆ ಉಂಟಾದಾ
ಹೊರಗಿನಿಂದ ಸಾಲ ಪಡೆದು ತಂದು ಕೊಡುತ್ತಿದ್ದರು. ಪ್ರವಾದಿವರ್ಯರ(ಸ
ನಿಧನಕ್ಕೆ ಮೊದಲು ಇಡೀ ಅರಬ್ ಸಾಮ್ರಾಜ್ಯವು ಪ್ರವಾದಿವರ್ಯರ(ಸ
ವಶದಲ್ಲಿತ್ತು. ಎಲ್ಲಾ ಪ್ರಾಂತ್ಯಗಳ ಸಂಪತ್ತು ಬೈತುಲ್ ಮಾಲ್ (ಇಸ್ಲಾಮಿ
ಖಜಾನೆ/ಬೊಕ್ಕಸ)ಗೆ ಬರುತ್ತಿತ್ತು. ಆದರೆ ಪ್ರವಾದಿವರ್ಯರು(ಸ) ವಿಧಿವಶರಾದಾ
ಹ. ಆಯಿಶಾ(ರ)ರ ಮನೆಯಲ್ಲಿ ಒಂದು ದಿನಕ್ಕೆ ಬೇಕಾದ ಅಗತ್ಯ
ಸಾಮಗ್ರಿಗಳೂ ಇರಲಿಲ್ಲ.

ಪ್ರವಾದಿವರ್ಯರ(ಸ) ನಿಧನದ ಬಳಿಕ ಇದು ಹೀಗೆಯೇ ಮುಂದುವರಿಯಿತು. ಅಬೂಬಕರ್(ರ)ರು ಖಲೀಫರಾದ ಕಾಲದಲ್ಲಿ ಖೈಬರ್‌ನಲ್ಲಿ ಬೆಳೆದ ಬೆಳೆಯಿಂದ ಸ್ವಲ್ಪಂಶ ಆಯಿಶಾ(ರ)ರಿಗೆ ಸಿಗುತ್ತಿತ್ತು. ಹ. ಉಮರ್(ರ)ರು ಖಲೀಫರಾದ ಕಾಲದಲ್ಲಿ ಪ್ರವಾದಿ ಪತ್ನಿಯರಿಗೆ(ಸ) ಪಿಂಚಣಿ ಹಣ ಸಿಗುತ್ತಿತ್ತು. ಹ. ಉಮರ್(ರ)ರು ಪ್ರವಾದಿಯವರ(ಸ) ಇತರೆ ಪತ್ನಿಯರಿಗೆ ವಾರ್ಷಿಕ ಹತ್ತು ಸಾವಿರ ದಿರ್ಹಮ್ ನೀಡುತ್ತಿದ್ದರು. ಆದರೆ ಆಯಿಶಾ(ರ)ರಿಗೆ ಹನ್ನೆರಡು ಸಾವಿರ ದಿರ್ಹಮ್ ನೀಡುತ್ತಿದ್ದರು. ಉಸ್ಮಾನ್(ರ) ಮತ್ತು ಅಲೀ(ರ)ರವರ ಆಡಳಿತದ ಕಾಲದಲ್ಲೂ ಇದು ಮುಂದುವರಿಯಿತು.

ಹ. ಅಬ್ದುಲ್ಲಾ ಇಬ್ನು ಝುಬೈರ್(ರ) ಆಯಿಶಾ(ರ)ರ ಸೋದರಿ ಪುತ್ರ, ಅವರು ಅಧಿಕಾರ ವಹಿಸಿಕೊಂಡಾಗ ದೊಡ್ಡ ಮೊತ್ತವನ್ನು ಅವರ ಮನೆಗಳೀಗೆ ಕಳುಹಿಸುತ್ತಿದ್ದರು. ಆ ಮೊತ್ತ ಬಂದ ದಿನವೇ ಅವರಿಗೆ ಅದರ ಅಗತ್ಯವಿರುತ್ತಿತ್ತು.

✦ ಒಂದು ದಿನ ಆಯಿಶಾ(ರ)ರು ಉಪವಾಸದಿಂದಿದ್ದರು. ಬಂದ ಹಣವನ್ನು ದಾನ ಮಾಡಿದರು. ಅದರಲ್ಲಿ 2 ದಿರ್ಹಮ್ ಉಳಿದು ಬಿಟ್ಟಿತು. ಓರ್ವ ನಿರ್ಗತಿಕ ಅವರ(ರ) ಎದುರಿಗೆ ನಿಂತಿದ್ದನು. ಆಯಿಶಾ(ರ)ರ ಸೇವಕಿಯು ಇಂದು ಪ್ರವಾದಿವರ್ಯರು(ಸ) ಉಪವಾಸದಿಂದಿದ್ದಾರೆ ಎಂದಳು. ಆದರೆ ಆಯಿಶಾ(ರ)ರು ಆಕೆಯ ಮಾತಿಗೆ ಗಮನಕೊಡದೆ 2 ದಿರ್ಹಮ್ ಅನ್ನು ಆ ವ್ಯಕ್ತಿಗೆ ನೀಡಿದರು.

ಪ್ರವಾದಿವರ್ಯರು(ಸ) ಆಯಿಶಾ(ರ)ರಲ್ಲಿ ಓರ್ವ ಮಾದರಿ ಸ್ತ್ರೀಯ ಗುಣಗಳನ್ನು ಕಂಡಿದ್ದರು. ಆದುದರಿಂದ ಪ್ರವಾದಿವರ್ಯರು(ಸ) ಹ. ಆಯಿಶಾ(ರ)ರನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಆಯಿಶಾ(ರ)ರಿಗೆ ಇನ್ನೂ ಹೆಚ್ಚಿನ ಧರ್ಮದ ಜ್ಞಾನ ನೀಡಲು ಸಮಯಾವಕಾಶ ಸಿಗಲೆಂದು ಬಯಸುತ್ತಿದ್ದರು. ಪ್ರವಾದಿವರ್ಯರ(ಸ) ಈ ಬಯಕೆಯನ್ನು ಅರಿತ ಹ. ಸೌದ(ರ)ರು ಪ್ರವಾದಿವರ್ಯರು(ಸ) ತಮ್ಮ ಮನೆಯಲ್ಲಿ ಉಳಿದುಕೊಳ್ಳುವ ದಿನವನ್ನು ಹ. ಆಯಿಶಾ(ರ)ರಿಗಾಗಿ ತ್ಯಾಗ ಮಾಡಿದರು.

## ಪ್ರವಾದಿವರ್ಯರಿಗೆ(ಸ) ಆಯಿಶಾ(ರ)ರ ಮೇಲಿನ ಅಪಾರವಾದ ಪ್ರೀತಿ:

✦ ಸಹಾಬಿಗಳಿಗೆ(ರ) ಪ್ರವಾದಿವರ್ಯರ(ಸ) ಪ್ರೀತಿ ವಾತ್ಸಲ್ಯದ ಬಗ್ಗೆ ಅರಿವಿತ್ತು. ಪ್ರವಾದಿವರ್ಯರು(ಸ) ಆಯಿಶಾ(ರ)ರ ಮನೆಯಲ್ಲಿ ವಾಸ್ತವ್ಯದ ಸರದಿ ಬಂದಾಗ ಸಹಾಬಿಗಳು(ರ) ಆಯಿಶಾ(ರ)ರ ಮನೆಗೆ ಉಡುಗೊರೆಗಳನ್ನು ಕಳುಹಿಸುತ್ತಿದ್ದರು. ಪ್ರವಾದಿ ಪತ್ನಿಯರಿಗೆ(ರ) ಪ್ರವಾದಿವರ್ಯರ(ಸ) ಬಳಿ ಒಂದು ವಿಚಾರವನ್ನು ಹೇಳಬೇಕಿತ್ತು. ಆದರೆ ಹೇಳಲು ಹಿಂಜರಿಯುತ್ತಿದ್ದರು.

ಎಲ್ಲರೂ ಒಟ್ಟಾಗಿ, ಈ ವಿಷಯವನ್ನು ತಿಳಿಸುವಂತೆ ಫಾತಿಮಾ(ರ)ರನ್ನು ಕಳುಹಿಸಿದರು. ತನ್ನ ಮಾತೆಯರ ವಿಷಯವನ್ನು ಫಾತಿಮಾ(ರ)ರು ತಮ್ಮ ತಂದೆಯ(ಸ) ಮುಂದಿಟ್ಟರು. ಮಗಳ ಮಾತನ್ನು ಆಲಿಸಿದ ಪ್ರವಾದಿವರ್ಯರು(ಸ), "ನನ್ನ ಮುದ್ದು ಮಗಳೇ, ನಾನು ಪ್ರೀತಿಸುವುದನ್ನು ನೀನು ಪ್ರೀತಿಸುವುದಿಲ್ಲವೇ?" ಎಂದರು. ಮರು ಮಾತನಾಡದೆ ಫಾತಿಮಾ(ರ)ರು ಹಿಂದಿರುಗಿದರು. ಮಾತೆಯರು ಪುನಃ ಫಾತಿಮಾ(ರ)ರನ್ನು ಕಳುಹಿಸಲು ನಿರ್ಧರಿಸಿದರು. ಆದರೆ ಫಾತಿಮಾ(ರ)ರು ನಿರಾಕರಿಸಿದರು. ಬಳಿಕ ಬುದ್ಧಿವಂತಿಕೆ ಹಾಗೂ ಗಾಂಭೀರ್ಯತೆ ಹೊಂದಿದ್ದ ಪ್ರವಾದಿ ಪತ್ನಿ ಉಮ್ಮು ಸಲಮ(ರ)ರನ್ನು ಕಳುಹಿಸಿದರು. ಉಮ್ಮು ಸಲಮ(ರ)ರು ಗೌರವದೊಂದಿಗೆ ಪ್ರವಾದಿವರ್ಯರಲ್ಲಿ(ಸ) ವಿಚಾರವನ್ನು ಮಂಡಿಸಿದಾಗ ಪ್ರವಾದಿವರ್ಯರು(ಸ) ಹೇಳಿದರು, "ಉಮ್ಮು ಸಲಮಾ(ರ) ಆಯಿಶಾ(ರ)ರ ವಿಚಾರದಲ್ಲಿ ನನ್ನನ್ನು ಛೇಡಿಸಬೇಡಿ. ಆಯಿಶಾ(ರ)ರ ಹೊರತು ಬೇರಾವ ಪತ್ನಿಯು ನನಗೆ ದೇವವಾಣಿಯ ಮೂಲಕ ದೊರಕಲಿಲ್ಲ" ಎಂದರು.

ದೇವವಾಣಿಯು ಎಷ್ಟು ಶ್ರೇಷ್ಠವಾಗಿತ್ತೆಂದರೆ ಉಮ್ಮು ಸಲಮ(ರ)ರು ಮರು ಮಾತನಾಡದೆ ಹಿಂದಿರುಗಿದರು. ಅಲ್ಲಾಹನ ಆಜ್ಞೆಯಂತೆ ದೇವಚರ ಜಿಬ್ರೀಲ್(ಅ) ಪ್ರವಾದಿ(ಸ)ಯವರು ಆಯಿಶಾ(ರ)ರನ್ನು ವಿವಾಹವಾಗುವ ಕುರಿತು ದೇವವಾಣಿ ತಂದರು. ಆಯಿಶಾ(ರ)ರ ಸ್ಥಾನವನ್ನು ಉನ್ನತಗೊಳಿಸಲು ಅಲ್ಲಾಹನೇ ಬಯಸಿದ್ದನು ಎಂಬುದು ಇದರರ್ಥ.

ಪ್ರವಾದಿವರ್ಯರು(ಸ) ತಮ್ಮ ಪತ್ನಿಯರನ್ನು ವಿಶೇಷವಾಗಿ ಆಯಿಶಾ(ರ)ರನ್ನು ಸರಳತೆಯೆಡೆಗೆ ತರಲು ಏಕೆ ಬಯಸುತ್ತಿದ್ದರು? ಈ ಘಟನೆಯನ್ನು ನೋಡಿರಿ,

ಒಮ್ಮೆ ಪ್ರವಾದಿವರ್ಯರಿಗೆ(ಸ) ಚಿನ್ನದ ಸರ ಉಡುಗೊರೆಯಾಗಿ ಸಿಕ್ಕಿತ್ತು. ಪ್ರವಾದಿವರ್ಯರು(ಸ) ಹೇಳಿದರು, "ಭೂಮಿಯ ಮೇಲೆ ನನಗೆ ಯಾರು ಹೆಚ್ಚು ಪ್ರಿಯರಾಗಿದ್ದಾರೋ, ನಾನವರಿಗೆ ಈ ಸರ ನೀಡುತ್ತೇನೆ" ಆಯಿಶಾ(ರ)ರಿಗೆ ನೀಡುತ್ತಾರೆಂದು ಎಲ್ಲರೂ ಅಂದುಕೊಂಡಿದ್ದರು. ಆದರೆ ಪ್ರವಾದಿವರ್ಯರು(ಸ) ಆ ಸರವನ್ನು ತಮ್ಮ ಎಳೆ ಪ್ರಾಯದ ಮೊಮ್ಮಗಳಿಗೆ (ಝೈನಬ್(ರ)ರ ಪುತ್ರಿ) ನೀಡಿದರು. ಅತೀವ ಪ್ರೀತಿಯಿದ್ದರೂ ಪ್ರವಾದಿವರ್ಯರು(ಸ) ಆ ಸರವನ್ನು ಆಯಿಶಾ(ರ)ರಿಗೇಕೆ ನೀಡಲಿಲ್ಲವೆಂದು ಎಲ್ಲರಿಗೂ ತಿಳಿಯಿತು.

## ಹ. ಆಯಿಶಾ(ರ)ರ ಸಂತೋಷಕ್ಕಾಗಿ:

ಪ್ರವಾದಿವರ್ಯರು(ಸ) ಓರ್ವ ಪತಿಯಾಗಿ ಆಯಿಶಾ(ರ)ರ

ಂತೋಷಕ್ಕಾಗಿ ಏನೆಲ್ಲಾ ಮಾಡುತ್ತಿದ್ದರು, ಅವರೀರ್ವರ ಜೀವನ ಹಾಗೂ ಿರಸ್ಪರ ಪ್ರೀತಿಯು ಲೋಕದ ಸ್ತ್ರೀ-ಪುರುಷರಿಗೆ ಮಾದರಿಯಾಗಿದೆ.

✦ ಪ್ರವಾದಿವರ್ಯರು(ಸ) ಎರಡು ಬಾರಿ ಹ. ಆಯಿಶಾ(ರ)ರೊಂದಿಗೆ ಟದ ಸ್ಪರ್ಧೆ ನಡೆಸಿದ್ದರು. ಮೊದಲ ಬಾರಿಗೆ ತೆಳ್ಳಗಿದ್ದಾಗ ಆಯಿಶಾ(ರ)ರು ಲುವು ಸಾಧಿಸಿದ್ದರು. ಎರಡನೆ ಬಾರಿ ಸೋತರು. ಆಗ ಅವರು(ರ) ಷ್ಟಪುಷ್ಟರಾಗಿದ್ದರು. ಆಗ ಪ್ರವಾದಿವರ್ಯರು(ಸ), "ಆಯಿಶಾ! ಇಂದು ಆ ನದ ಸೇಡು ತೀರಿತು" ಎಂದರು.

✦ ಒಮ್ಮೆ ಹಬ್ಬದ ದಿನ ಕೆಲವು ಹಬಶಿಗಳು (ಇಥಿಯೋಪಿಯಾದ ಪ್ಪು ಜನ) ಬಂದರು. ಅವರು ಭರ್ಚಿ ಮತ್ತಿತರ ಆಯುಧಗಳಿಂದ ಸಾಹಸ ೀತೆಗಳನ್ನು ಹಾಡಿ ತಮ್ಮ ಬಲ ಪ್ರದರ್ಶಿಸುತ್ತಿದ್ದರು. 'ದಫ್' ಕೂಡಾ ಾರಿಸುತ್ತಿದ್ದರು. ಪ್ರವಾದಿವರ್ಯರು(ಸ) ಆಯಿಶಾ(ರ)ರಿಗೆ "ನೋಡುತ್ತೀಯಾ?" ಂದು ಕೇಳಿದರು. "ಹೌದು" ಎಂದಾಗ ಪ್ರವಾದಿವರ್ಯರು(ಸ) ಮನೆ ಾಗಿಲಿಗೆ ಅಡ್ಡವಾಗಿ ನಿಂತುಕೊಂಡರು. ಅವರ(ಸ) ಹಿಂದೆ ನಿಂತು ಯಿಶಾ(ರ)ರು ಪ್ರದರ್ಶನವನ್ನು ವೀಕ್ಷಿಸಿ ಆನಂದಿಸಿದರು.

✦ ಆಯಿಶಾ(ರ)ರು ಓರ್ವ ಹೆಣ್ಣು ಮಗಳನ್ನು ಸಾಕಿದ್ದರು. ಸರಳವಾಗಿಯೇ ಕೆಯ ವಿವಾಹ ನಡೆಸಿದರು. ವಿವಾಹದ ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ಳಗೆ ಪ್ರವೇಶಿಸಿ, "ಆಯಿಶಾ! ಗೀತೆಗಳನ್ನೂ ಹಾಡು" ಎಂದರು.

✦ ಒಮ್ಮೆ ಓರ್ವ ದಾಸಿ ಆಯಿಶಾ(ರ)ರ ಮನೆಗೆ ಬಂದಳು. ್ರವಾದಿವರ್ಯರು(ಸ) ಆಕೆಯ ಹಾಡನ್ನು ಆಲಿಸುವಂತೆ ಆಯಿಶಾ(ರ)ರಲ್ಲಿ ೇಳಿದರು, ಆಕೆಯ ಕಂಠದಲ್ಲಿ ವಿಶೇಷ ಆಕರ್ಷಣೆಯಿತ್ತು. ಇದನ್ನು ಆಲಿಸಿದ ್ರವಾದಿವರ್ಯರು(ಸ) "ಆಕೆಯ ಮೂಗಿನ ಹೊಳ್ಳೆಗಳಲ್ಲಿ ಶೈತಾನನು ವಾದ್ಯ ಾರಿಸುತ್ತಿದ್ದಾನೆ" ಎಂದರು. ಓರ್ವ ವ್ಯಕ್ತಿಯು ಸಂಪೂರ್ಣವಾಗಿ ತಲ್ಲೀನವಾಗಿ ಡುವಂತಹ ಹಾಡನ್ನು ಕೇಳಬಾರದು. ಅದು ಒಳ್ಳೆಯದಾಗಿದ್ದರೂ ಸರಿ ಂದು ಉಪದೇಶಿಸಿದರು.

✦ ಒಮ್ಮೆ ಅಬೂಬಕರ್(ರ)ರು ಮಗಳ ಮನೆಗೆ ಬಂದರು. ಆಯಿಶಾ(ರ)ರು ್ರವಾದಿವರ್ಯರೊಂದಿಗೆ(ಸ) ಬಡಬಡಿಸುತ್ತಾ ಮಾತನಾಡುತ್ತಿದ್ದರು. ೋಪಗೊಂಡ ಅಬೂಬಕರ್(ರ)ರು ಮಗಳಿಗೆ ಏಟುಕೊಡಲು ಮುಂದಾದಾಗ ್ರವಾದಿವರ್ಯರು(ಸ) ತಡೆದರು. ಕೋಪದಿಂದಲೇ ಅಬೂಬಕರ್(ರ)ರು ೊರ ನಡೆದರು. "ಆಯಿಶಾ! ನೋಡು ನಾನು ನಿನ್ನನ್ನು ಹೇಗೆ ರಕ್ಷಿಸಿದೆ" ಂದರು ಪ್ರವಾದಿ(ಸ).

✦ ಪ್ರವಾದಿವರ್ಯರು(ಸ) ಹಾಗೂ ಆಯಿಶಾ(ರ)ರು ಹೆಚ್ಚಾಗಿ ಒಂದ
ಬಟ್ಟಲಿನಲ್ಲಿ ಉಣ್ಣುತ್ತಿದ್ದರು. ಕೆಲವೊಮ್ಮೆ ದೀಪದ ಬೆಳಕು ಇಲ್ಲದಿದ್ದಾ
ಇಬ್ಬರ ಹಸ್ತವು ಒಂದೇ ವಸ್ತುವಿನ ಮೇಲೆ ಬೀಳುತ್ತಿತ್ತು. ಪ್ರವಾದಿವರ್ಯರು(ಸ
ಪ್ರೀತಿಯಿಂದ ಆಯಿಶಾ(ರ)ರು ನೀರನ್ನು ಕುಡಿದ ಬದಿಯಿಂದಲೇ ಬಾಯಿಯಿ
ಕುಡಿಯುತ್ತಿದ್ದರು.

✦ ಪ್ರವಾದಿ(ಸ)ರು ಆಯಿಶಾ(ರ)ರ ಮನೋಲ್ಲಾಸಕ್ಕೆ ಕಥೆ ಹೇಳುತ್ತಿದ್ದರು
ಆಯಿಶಾ(ರ)ರಿಂದಲೂ ಕಥೆ ಹೇಳಿಸಿ ಸ್ವತಃ ಆಲಿಸುತ್ತಿದ್ದರು. ಅವುಗಳ
ಒಂದು ಕಥೆಯನ್ನು ಮಾತ್ರ ಉಲ್ಲೇಖಿಸುತ್ತೇವೆ.

"ಹನ್ನೊಂದು ಜನ ಸ್ನೇಹಿತೆಯರಿದ್ದರು. ಒಂದು ದಿನ ಅವರೆಲ್ಲರು
ಒಟ್ಟಿಗೆ ಕುಳಿತು ತಮ್ಮ ತಮ್ಮ ಪತಿಯಂದಿರ ಬಗ್ಗೆ ಹೇಳಬೇಕೆಂದು ನಿರ್ಧರಿಸಿದರು
ಓರ್ವ ಗೆಳತಿ ಹೇಳಿದಳು, "ನನ್ನ ಪತಿ ಒಂಟೆಯ ಮಾಂಸ
ಮುದ್ದೆಯಾಗಿದ್ದಾನೆ. ಅದು ಪರ್ವತದ ಮೇಲಿರಲಿ ಅಥವಾ ಮೈದಾನದಲ್ಲಿರಲಿ
ಅದರ ಬಳಿಗೆ ಯಾರಿಗೂ ತಲುಪಲು ಸಾಧ್ಯವಿಲ್ಲ. ಕಾರಣ ಆ ಮಾಂಸವು
ಅಷ್ಟು ಯೋಗ್ಯವಲ್ಲ" ಎಂದಳು. (ಅಂದರೆ ನನ್ನ ಪತಿಯು ಯಾರೊಂದಿಗು
ಬೆರೆಯುವ ಜಾಯಮಾನದವನಲ್ಲ ಎಂಬುದು ಇದರ ಅರ್ಥ.)

ಎರಡನೆಯವಳು ಹೇಳಿದಳು, "ನಾನು ನನ್ನ ಪತಿಯ ಬಗ್ಗೆ ಏನು
ಹೇಳಲಾರೆ. ಆತನ ಕಥೆ ತುಂಬಾ ದೀರ್ಘವಾಗಿದೆ. ಅದರಿಂದ ಯಾವುದೆ
ಒಂದು ವಿಷಯ ಬಿಟ್ಟು ಹೋದರೆ ಎಂಬ ಭಯ ಹಾಗೂ ಕೆಲವು
ವಿಷಯಗಳನ್ನು ಮರೆಮಾಚಿ ಹೇಳಲು ನನಗಿಷ್ಟವಿಲ್ಲ" ಎಂದಳು.

ಮೂರನೆಯವಳು ಹೇಳಿದಳು, "ನನ್ನ ಪತಿ ಕಠೋರ ಸ್ವಭಾವದವನು
ನಾನೇನು ಮಾತನಾಡಿದರೂ ತಲಾಕ್‌ನ ಭಯವಿದೆ ಮತ್ತು ಅದಕ್ಕಾ
ಮೌನ ವಹಿಸುತ್ತಾನೆ. ನಾನು ವಿವಾಹಿತಳೇ/ಅವಿವಾಹಿತಳೇ ನೀವೇ ಹೇಳಿ.
(ಅಂದರೆ ಆತ ನನ್ನೊಂದಿಗೆ ಮಾತನಾಡುವುದೇ ಇಲ್ಲ.)

ನಾಲ್ಕನೆಯವಳು, "ತನ್ನ ಪತಿಯು ಹಿಜಾಝ್ ಅಂದರೆ ಮಕ್ಕಾ
ಮದೀನ ಹಾಗೂ ತಾಯಿಫ್‌ನ ರಾತ್ರಿಯ ಹಾಗೆ. ಬಿಸಿಯೂ ಇಲ್ಲ, ತಂಪೂ
ಇಲ್ಲ, ಭಯವೂ ಇಲ್ಲ, ನಿರ್ಭಯವೂ ಇಲ್ಲ." (ಅಂದರೆ ತೀವ್ರ ಗಾಂಭೀರ್ಯ
ಬೋರ್ ಹೊಡೆಸುವ ವ್ಯಕ್ತಿ)

ಐದನೆಯವಳು ಹೇಳಿದಳು, "ನನ್ನ ಪತಿಯು ಮನೆಗೆ ಬಂದರೆ
ಚಿರತೆಯಂತಾಗುತ್ತಾನೆ, ಹೊರಗೆ ಹೋದರೆ ಸಿಂಹದಂತಾಗಿ ಬಿಡುತ್ತಾನೆ. ಆತನ
ವಾಗ್ದಾನ ಮಾಡಿದ ವಿಚಾರದಲ್ಲಿ ಪುನಃ ಆತನಿಗೆ ಕೇಳುವ ಅವಶ್ಯಕತೆಯೇ ಇಲ್ಲ."

ಆರನೆಯವಳು ಹೇಳಿದಳು, "ನನ್ನ ಪತಿ ಹೊಟ್ಟೆ ಬಾಕ. ಒಟ್ಟಿಗೆ ಉಣ್ಣುವಾಗ ಎಲ್ಲವನ್ನೂ ಒಬ್ಬನೇ ತಿಂದು ಮುಗಿಸುತ್ತಾನೆ. ಕುಡಿಯುವಾಗ ಎಲ್ಲವನ್ನೂ ಒಬ್ಬನೇ ಹೀರಿ ಬಿಡುತ್ತಾನೆ. ಮಲಗುವಾಗ ಒಬ್ಬನೇ ಕಂಬಳಿ ಹೊದ್ದುಕೊಂಡು ಮಲಗುತ್ತಾನೆ. ನನ್ನ ಅವಸ್ಥೆಯ ಬಗ್ಗೆ ಅವನಿಗೆ ಕಾಳಜಿಯೇ ಇಲ್ಲ."

ಏಳನೆಯವಳು ಹೇಳಿದಳು, "ನನ್ನ ಪತಿಯು ಮುಟ್ಟಿದರೆ ಮೊಲದಂತೆ ಮೃದು, ಮೂಸಿ ನೋಡಿದರೆ ಕುಸುಂಬೆ ಹೂವಿನಂತೆ ದುರ್ಗಂಧ ಎಂದಳು." (ಅಂದರೆ ಬಾಹ್ಯವಾಗಿ ಒಳ್ಳೆಯವನಾಗಿದ್ದರೂ ಅಂತರಂಗ ಕೆಟ್ಟದಾಗಿದೆ.)

ಎಂಟನೆಯವಳು ಹೇಳಿದಳು, "ನನ್ನ ಪತಿ ತಿಳಿಗೇಡಿ ಹಾಗೂ ನಪುಂಸಕನಾಗಿದ್ದಾನೆ. ಕೆಲವೊಮ್ಮೆ ತಲೆಯನ್ನೇ ಒಡೆದು ಬಿಡುತ್ತಾನೆ, ಕೆಲವೊಮ್ಮೆ ಸಿಕ್ಕಿದ್ದನ್ನು ಮುರಿದು ಹಾಕುತ್ತಾನೆ." (ಅಂದರೆ ಆತನಲ್ಲಿ ತಾಳ್ಮೆ ಸಂಯಮವಿಲ್ಲ.)

ಒಂಭತ್ತನೆಯವಳು ಹೇಳಿದಳು, "ನನ್ನ ಪತಿಯ ಮನೆ ದೊಡ್ಡದು. ಈತ ಶ್ರೀಮಂತ ವ್ಯಕ್ತಿ. ಆತನ ಖಡ್ಗ ಕವಚ ತುಂಬಾ ಉದ್ದವಾಗಿದೆ. ಈತನ ಒಲೆಯಲ್ಲಿ ಸದಾ ಬೂದಿಯ ರಾಶಿ ಇರುತ್ತದೆ." (ಅಂದರೆ ಆತನು ಉದಾರಿ ಹಾಗೂ ಇತರರಿಗೆ ತುಂಬಾ ಉಣಿಸುವವನು.)

ಹತ್ತನೆಯವಳು ಹೇಳಿದಳು, "ನನ್ನ ಪತಿಯು ದಣಿಯಾಗಿದ್ದಾನೆ (ಮಾಲಿಕ). ಈತನ ಬಗ್ಗೆ ತಾವೇನು ತಿಳಿದಿದ್ದೀರಿ? ಆತನು ಅವರೆಲ್ಲರಿಗಿಂತ ಉತ್ತಮನು. ಈತನ ಬಳಿ ಒಂಟೆಗಳ ಹಿಂಡಿದೆ. ಅವು ಮನೆಯಲ್ಲೇ ಬಿದ್ದುಕೊಂಡಿರುತ್ತವೆ. ಮೇಯಲೂ ಹೋಗುವುದಿಲ್ಲ. ವಾದ್ಯ ಬಾರಿಸುವ ಶಬ್ಧ ಕೇಳಿದೊಡನೆ ಅವುಗಳು ನಮಗೆ ಮರಣದ ದಿನ ಬಂದೇ ಬಿಟ್ಟಿತು ಎಂದು ಭಾವಿಸುತ್ತವೆ. ಅಂದರೆ ಆತನು ಅತಿಥಿಗಳು ಯಾವಾಗ ಬಂದು ಬಿಡುತ್ತಾರೋ, ಯಾವಾಗ ಈ ಒಂಟೆಗಳನ್ನು ದಿಬ್ಹ ಮಾಡುವ ಅಗತ್ಯ ಬೀಳುತ್ತದೋ ಎಂದು ಅವುಗಳನ್ನು ಮನೆಯಲ್ಲೇ ಇರಿಸಿದ್ದಾನೆ.)

ಹನ್ನೊಂದನೆಯವಳು ಹೇಳಿದಳು, "ನನ್ನ ಪತಿಯ ಹೆಸರು ಅಬೂದರ್ರ್. ಬಂಗಾರದಿಂದ ನನ್ನ ಕಿವಿಗಳನ್ನು ಹಾಗೂ ಕೊಬ್ಬಿನಿಂದ ನನ್ನ ಬಾಹುಗಳನ್ನು ತುಂಬಿದರು. ನನ್ನನ್ನು ಸಂತೃಪ್ತಗೊಳಿಸಿದರು. ಕುರಿ ಮೇಯಿಸುವವರ ಮನೆಗೆ ಸೇರಿದ್ದ (ಬಡಕುಟುಂಬದ) ನನ್ನಂತಹವಳನ್ನು ಅವರು ವಿವಾಹವಾದರು. ಕುದುರೆಗಳು, ಒಂಟೆಗಳು, ಸೇವಕರಿಂದ ತುಂಬಿ ತುಳುಕುವ ಮನೆಗೆ ನನ್ನನ್ನು ಕರೆದಿರಿಸಿದರು. ಮಾತಾಡಿದರೆ ಯಾರೂ ತಡೆಯುವವರಿಲ್ಲ. ಬೆಳಿಗಿನವರೆಗೆ ಮಲಗಿದರೂ ಯಾರೂ ಕೇಳುವವರಿಲ್ಲ, ಕುಡಿದರೆ ಎಲ್ಲವನ್ನೂ ಕುಡಿದು ಬಿಡುತ್ತೇನೆ. ನನ್ನ ಬಳಿ ಲೆಕ್ಕವಿಲ್ಲದಷ್ಟು ಬಟ್ಟೆ-ಬರೆಗಳಿವೆ. ಅವುಗಳನ್ನು

ಜೋಡಿಸಲು ದೊಡ್ಡ ಮನೆಯೇ ಬೇಕು. ಅಬೂದರ್ರ್‌ರ ಪುತ್ರ, ಆತ ಮಲಗಿದ
ನಗ್ನ ಖಡ್ಗದಂತೆ ಕಾಣುತ್ತಾನೆ. ಉಂಡರೆ ಕುರಿಮರಿಗಳನ್ನೇ ತಿಂ
ಮುಗಿಸುತ್ತಾನೆ. ಅಬೂದರ್ರ್‌ರ ಪುತ್ರಿ, ಆಕೆ ತಂದೆ-ತಾಯಿಯ ಮಾ
ಕೇಳುವವಳು. ಅಬೂದರ್ರ್‌ರ ದಾಸಿ ಮನೆಯ ರಹಸ್ಯ ಪಾಲಿಸುವವ
ಅನ್ನ-ಆಹಾರವನ್ನು ವ್ಯರ್ಥಗೊಳಿಸದವಳು, ಮನೆಯನ್ನು ಸ್ವಚ್ಛವಾಗಿಡುವವ
ಆಗಿರುತ್ತಾಳೆ" ಎಂದರು.

ಪ್ರವಾದಿವರ್ಯರು(ಸ) ಸಹನೆಯೊಂದಿಗೆ ಆಯಿಶಾ(ರ)ರ ಕಥೆಯ
ಆಲಿಸಿದರು. ಬಳಿಕ ಹೀಗೆಂದರು, "ಆಯಿಶಾ! ಉಮ್ಮುದರ್ರ್‌ರಿಗೆ ಅಬೂದ
ಇರುವಂತೆಯೇ ನಾನು ನಿನಗೆ ಅಲ್ಲವೇ."

### ಅತೀವ ಪ್ರೀತಿ, ಆದರೆ?

ಪ್ರವಾದಿವರ್ಯರು(ಸ) ಆಯಿಶಾ(ರ)ರನ್ನು ತೃಪ್ತಿಪಡಿಸಲು ಎಲ್ಲವನ
ಮಾಡುತ್ತಿದ್ದರು. ಆಯಿಶಾ(ರ)ರು ಹೇಳುತ್ತಾರೆ, "ನಾವಿಬ್ಬರು ಪರಸ್ಪರ ಸರಸ
ಸಲ್ಲಾಪದ ಮಾತುಗಳನ್ನಾಡುತ್ತಿದ್ದಾಗ ಅದಾನ್ ಕರೆ ಮೊಳಗಿದ
ಪ್ರವಾದಿವರ್ಯರು(ಸ) ಮಾತುಗಳನ್ನು ಅಲ್ಲಿಗೇ ನಿಲ್ಲಿಸಿ ಎದ್ದು ನಿಲ್ಲುತ್ತಿದ್ದ
ಆಗ ಪ್ರವಾದಿಯವರಿಗೆ(ಸ) ನನ್ನ ಪರಿಚಯವೇ ಇಲ್ಲ ಎಂಬಂ
ಭಾಸವಾಗುತ್ತಿತ್ತು."

ಅಂದರೆ ಪತ್ನಿಯ ಹಕ್ಕು ಬಾಧ್ಯತೆಗಳನ್ನು ಪಾಲಿಸುವಾಗ, ಅಲ್ಲಾಹ
ಹಕ್ಕು ಬಾಧ್ಯತೆಗಳಿಗೆ ಚ್ಯುತಿಬಾರದಂತೆ ಎಚ್ಚರ ವಹಿಸುತ್ತಿದ್ದರು. ಈ ಲೋಕ
ಸಕಲ ಪತಿ-ಪತ್ನಿಯರಿಗೆ ಇದರಲ್ಲಿ ಪಾಠವಿದೆ.

ಆಯಿಶಾ(ರ)ರು ಹೇಳುತ್ತಾರೆ, "ಪ್ರವಾದಿವರ್ಯರು(ಸ) ತಬೂ
ಯುದ್ಧದಲ್ಲಿ ವಿಜಯಿಶಾಲಿಯಾಗಿ ಮರಳಿದಾಗ ನಾನು ಸಡಗರ ಸಂಭ್ರಮದಿಂ
ಕಸೂತಿಯ ಚಿತ್ರಗಳಿದ್ದ ಪರದೆಯನ್ನು ಬಾಗಿಲಿಗೆ ನೇತಾಡಿಸಿದ್ದೆ. ಬಾಗಿ
ಬಳಿ ಬಂದು ಆ ಪರದೆಯನ್ನು ಕಂಡ ಕೂಡಲೇ ಅವರ(ಸ) ಮುಖ
ಕೋಪಭರಿತವಾಯಿತು. ಆಗ ನಾನು "ಓ ಪ್ರವಾದಿಗಳೇ(ಸ) ಏನು ತ
ಸಂಭವಿಸಿದೆ" ಎಂದೆ. ಅದಕ್ಕುತ್ತರಿಸಿದ ಪ್ರವಾದಿವರ್ಯರು(ಸ), "ಆಯಿಶ
ನಮಗೆ ಅಲ್ಲಾಹನು ಇಟ್ಟಿಗೆ ಹಾಗೂ ಮಣ್ಣನ್ನು ಶೃಂಗರಿಸಲು ಸಂಪ
ನೀಡಲಿಲ್ಲ. ಯಾರ ಮನೆಗಳಲ್ಲಿ ಚಿತ್ರಗಳಿರುತ್ತವೆಯೋ ಅವರ ಮನೆಗಳಿ
ದೇವಚರರು ಪ್ರವೇಶಿಸುವುದಿಲ್ಲ" ಎಂದರು.

✦ ಶರೀಅತ್‌ನ ಪ್ರಕಾರ ಮಹಿಳೆಯರಿಗೆ ರೇಷ್ಮೆ ಹಾಗೂ ಚಿ

ಧರ್ಮಬದ್ಧವಾಗಿದೆ. ಪ್ರವಾದಿವರ್ಯರು(ಸ) ಸರಳ ಬದುಕನ್ನು ಬಯಸುತ್ತಿದ್ದರು ಹಾಗೂ ತಮ್ಮ ಪತ್ನಿಯರೂ ಅದೇ ರೀತಿ ಬದುಕುವ ಆಶಯ ಹೊಂದಿದ್ದರು. ತೋರಿಕೆಗಾಗಿ, ಮನೆಯನ್ನು ಶೃಂಗರಿಸುವುದನ್ನು ಪ್ರವಾದಿವರ್ಯರು(ಸ) ಇಷ್ಟಪಡುತ್ತಿರಲಿಲ್ಲ.

✦ ಒಮ್ಮೆ ಆಯಿಶಾ(ರ)ರು ಚಿನ್ನದ ಬಳೆಯನ್ನು ಧರಿಸಿದ್ದರು. ಇದನ್ನು ಕಂಡ ಪ್ರವಾದಿವರ್ಯರು(ಸ), "ಆಯಿಶಾ! ನೀನು ಈ ಬಳೆಗಳನ್ನು ತೆಗೆ. ಬೆಳ್ಳಿಯ ಬಳೆಗಳನ್ನು ಮಾಡಿಸಿ, ಅದಕ್ಕೆ ಕೇಸರಿ ಬಣ್ಣವನ್ನು ಲೇಪಿಸಿಕೋ" ಎಂದರು.

✦ ಹ. ಆಯಿಶಾ(ರ)ರು ಹೇಳುತ್ತಾರೆ, "ಪ್ರವಾದಿವರ್ಯರು(ಸ) ತಮ್ಮ ಪತ್ನಿಯರನ್ನು ಐದು ವಿಷಯಗಳಿಂದ ತಡೆದಿದ್ದಾರೆ. 1.ರೇಷ್ಮೆ ಬಟ್ಟೆ, 2.ಚಿನ್ನದ ಆಭರಣಗಳು, 3.ಚಿನ್ನ-ಬೆಳ್ಳಿಯ ಪಾತ್ರೆಗಳು, 4.ಕೆಂಪು-ಮೆತ್ತನೆ ಹಾಸಿಗೆ. 5.ಬೆಲೆಬಾಳುವ ರೇಷ್ಮೆ ಮಿಶ್ರಿತ ತೆಳ್ಳನೆ ಉಡುಪು."

✦ ಹ. ಆಯಿಶಾ(ರ)ರು ಹೇಳುತ್ತಾರೆ, ನಮಗೆ ಅಲ್ಪಸ್ವಲ್ಪ ಚಿನ್ನವನ್ನೂ ಬಳಸುವುದನ್ನು ನಿಷೇಧಿಸಲಾಗಿತ್ತು. ಇದಾಗಿದೆ ಪ್ರವಾದಿವರ್ಯರು(ಸ) ತಮ್ಮ ಪತ್ನಿಯರಿಗೆ ನೀಡಿದ ತರಬೇತಿ. ತಮ್ಮ(ಸ) ಪತ್ನಿಯರಿಗೆ ಪ್ರೀತಿ ತೋರಿಸುವುದರೊಂದಿಗೆ ಲೌಕಿಕ ವ್ಯಾಮೋಹಕ್ಕೆ ಬಲಿಯಾಗದಂತೆ ಜಾಗರೂಕತೆ ವಹಿಸಿದರು.

ಇಂದು ಹೆಚ್ಚಿನ ಮುಸ್ಲಿಮ್ ಕುಟುಂಬಗಳು ಧರ್ಮದಿಂದ ನಿಯಂತ್ರಣ ತಪ್ಪುತ್ತಿವೆ. ಧಾರ್ಮಿಕ ಮಾರ್ಗದರ್ಶನಕ್ಕೆ ಕಿಂಚಿತ್ತೂ ಬೆಲೆ ಇಲ್ಲದ ಪರಿಸ್ಥಿತಿ ನಿರ್ಮಾಣವಾಗಿದೆ. ಲೌಕಿಕ ಪ್ರಯೋಜನ ಸಿಗುವಂತಹ ವಿಚಾರಗಳಲ್ಲಿ ಮಾತ್ರ ಆಸಕ್ತಿ ತೋರುಸಲಾಗುತ್ತದೆ. ಧರ್ಮಬದ್ಧವಾಗಿ ನಡೆಯುವ ವಿಚಾರಗಳ ಹತ್ತಿರವೂ ಸುಳಿಯದ ಪರಸ್ಥಿತಿ ಇದೆ. ಸಂದೇಶ ಪ್ರಚಾರಕರ ಮನೆಗಳೂ ಇದರಿಂದ ಸುರಕ್ಷಿತವಾಗಿಲ್ಲ. ಸ್ವಾರ್ಥ ಬದುಕಿಗೆ ತಿಲಾಂಜಲಿ ನೀಡಿ ಪ್ರವಾದಿವರ್ಯರ(ಸ) ಕೌಟುಂಬಿಕ ಬದುಕು ನಮಗೆ ಮಾದರಿಯಾಗಬೇಕಿದೆ.

## ಹ. ಆಯಿಶಾ(ರ)ರಿಗೆ ಪ್ರವಾದಿಯವರೊಂದಿಗೆ ಪ್ರೇಮ:

ಆಯಿಶಾ(ರ) ಹಾಗೂ ಪ್ರವಾದಿವರ್ಯರ(ಸ) ಪ್ರೀತಿಗೆ ಈ ಘಟನೆಗಳೇ ಸಾಕ್ಷಿ. "ಓ ಪ್ರಿಯಕರ! ನಿನ್ನ ಜೊತೆ ನಿನ್ನ ನೆರಳೂ ಇರುವುದನ್ನು ನಾನು ಬಯುಸುವುದಿಲ್ಲ" ಎಂಬ ನಾಣ್ಣುಡಿಯಂತೆ ಪ್ರೀತಿಯು ವಿಚಾರದಲ್ಲಿ ಆಯಿಶಾ(ರ)ರು ಎಲ್ಲರಿಗಿಂತಲೂ ಮುಂದೆ ಸಾಗಲು ಪ್ರಯತ್ನಿಸುತ್ತಿದ್ದರು.

ರಾತ್ರಿವೇಳೆ ಆಯಿಶಾ(ರ)ರು ಕಣ್ತೆರೆದಾಗ ಪ್ರವಾದಿವರ್ಯರು(ಸ) ಕಾಣದಿದ್ದರೆ ಕಳವಳಗೊಳ್ಳುತ್ತಿದ್ದರು. ಕೆಲವೊಮ್ಮೆ ಮನೆಯಲ್ಲಿ ದೀಪವೂ ಇರುತ್ತಿರಲಿಲ್ಲ. ಅಂತಹ ವೇಳೆ ಸುತ್ತಲೂ ಕತ್ತಲು ಆವರಿಸಿದ್ದರೂ ಕತ್ತಲಲ್ಲೇ ಪ್ರವಾದಿವರ್ಯರನ್ನು(ಸ) ಹುಡುಕಾಡುತ್ತಿದ್ದರು. ಅವರು(ಸ) ನಮಾಝ್‌ನ ಸ್ಥಿತಿಯಲ್ಲಿರುವುದನ್ನು ಕಂಡು ನಿಟ್ಟುಸಿರು ಬಿಡುತ್ತಿದ್ದರು.

ಆಯಿಶಾ(ರ)ರವರು ಹೇಳುತ್ತಾರೆ, "ತಾವು ಬೇರೊಬ್ಬ ಪತ್ನಿಯ ಮನೆಗೆ ಹೋಗಿರಬಹುದೆಂದು ಯೋಚಿಸುತ್ತಿದ್ದೆ. ಆದರೆ ನಮಾಝ್‌ನ ಸ್ಥಿತಿಯಲ್ಲಿರುವುದನ್ನು ಕಂಡು ನನ್ನ ತಂದೆ-ತಾಯಿ ನಿಮಗೆ ಅರ್ಪಿತ. ನಾನೇನೋ ಯೋಚಿಸುತ್ತಿದ್ದೆ" ಎಂದರು.

✦ ಒಂದು ರಾತ್ರಿ ಪ್ರವಾದಿವರ್ಯರು(ಸ) ಎದ್ದು ಜನ್ನತುಲ್ ಬಕೀಅ್(ಕಬರಸ್ತಾನ)ಗೆ ಹೋದರು. ಆಯಿಶಾ(ರ)ರು ಪ್ರವಾದಿವರ್ಯರಿಗೆ(ಸ) ಅರಿವಾಗದಂತೆ ಮೌನದಿಂದಲೇ ಅವರನ್ನು(ಸ) ಹಿಂಬಾಲಿಸಿದರು. ಅದೇ ಪ್ರಕಾರ ಮನೆಗೆ ಮರಳಿದರು. ಬೆಳಿಗ್ಗೆ ನಡೆದ ಈ ಘಟನೆಯನ್ನು ಪ್ರವಾದಿವರ್ಯರಿಗೆ(ಸ) ವಿವರಿಸಿದರು. ಘಟನೆ ಆಲಿಸಿದ ಪ್ರವಾದಿವರ್ಯರು(ಸ) "ಓಹ್... ನಾನು ನಿನ್ನೆ ರಾತ್ರಿ ಯಾವುದೋ ಒಂದು ನೆರಳನ್ನು ಮುಸುಕಿನಲ್ಲಿ ಕಂಡಿದ್ದೆ. ಅದು ನೀನೇ ಆಗಿದ್ದಿಯೇ!" ಎಂದರು.

✦ ಒಮ್ಮೆ ಪ್ರಯಾಣದ ವೇಳೆ ಆಯಿಶಾ(ರ) ಹಾಗೂ ಹಫ್ಸಾ(ರ) ಪ್ರವಾದಿವರ್ಯರ(ಸ) ಸಂಗಡವಿದ್ದರು. ಪ್ರವಾದಿವರ್ಯರು(ಸ) ಆಯಿಶಾ(ರ)ರೊಂದಿಗೆ ಒಂಟೆ ಮೇಲೆ ಕುಳಿತು ಪ್ರಯಾಣಿಸುವಾಗ ಇಡೀ ಪ್ರಯಾಣದಲ್ಲಿ ಇಬ್ಬರೂ ಮಾತುಕತೆಯಲ್ಲಿ ತಲ್ಲೀನರಾಗುತ್ತಿದ್ದರು. ಹೀಗೆ ಒಮ್ಮೆ ಹಫ್ಸಾ(ರ)ರು ಆಯಿಶಾ(ರ)ರಲ್ಲಿ ಬನ್ನಿ ನಾವಿಬ್ಬರು ನಮ್ಮ-ನಮ್ಮ ಒಂಟೆಗಳನ್ನು ಬದಲಿಸೋಣ ಎಂದರು. ಆಯಿಶಾ(ರ)ರಿಗೆ ಹಫ್ಸಾ(ರ)ರ ಈ ಬೇಡಿಕೆಯನ್ನು ನಿರಾಕರಿಸಲಾಗಲಿಲ್ಲ. ಈ ಸಂಗತಿ ಪ್ರವಾದಿವರ್ಯರ(ಸ) ಗಮನಕ್ಕೆ ಬಂದಿರಲಿಲ್ಲ. ಪ್ರವಾದಿವರ್ಯರು(ಸ) ಆಯಿಶಾ(ರ)ರ ಒಂಟೆಯಲ್ಲಿ ಕುಳಿತುಕೊಂಡರು. ಆ ಒಂಟೆಯಲ್ಲಿ ಹಫ್ಸಾ(ರ)ರನ್ನು ಕಂಡ ಪ್ರವಾದಿವರ್ಯರು(ಸ) ಸಲಾಮ್ ಹೇಳಿ ಮಾತಿನಲ್ಲಿ ತಲ್ಲೀನರಾಗಿ ಬಿಟ್ಟರು. ಇತ್ತ ಕಡೆ ಆಯಿಶಾ(ರ)ರು ವ್ಯಾಕುಲತೆಗೊಂಡರು. ಒಂದೆಡೆ ಅವರೆಲ್ಲರೂ ತಂಗಿದಾಗ ಒಂಟೆಯ ಮೇಲಿನಿಂದ ಕೆಳಗಿಳಿದ ಆಯಿಶಾ(ರ)ರು, "ಪ್ರಿಯತಮನ ಅಗಲುವಿಕೆಗಿಂತ ಚೇಳು ಕಡಿದರೆಯೇ ಒಳ್ಳೆಯದು" ಎನ್ನುತ್ತಾ ಹುಲ್ಲಿನ ಮೇಲೆ ಕಾಲನ್ನು ಜೋರಾಗಿ ಕೊಡವಿದರು.

## ಪತ್ನಿಯರೊಂದಿಗೆ ಆಯಿಶಾ(ರ):

ಪ್ರವಾದಿವರ್ಯರು(ಸ) ಕೆಲವು ವರದಿಗಳಂತೆ ಹನ್ನೊಂದು ಇನ್ನು ಕೆಲವು ವರದಿಗಳಂತೆ 13 ವಿವಾಹವಾಗಿದ್ದರು. ಪ್ರವಾದಿವರ್ಯರ(ಸ) ಪ್ರಥಮ ಪತ್ನಿ ಹ. ಖದೀಜಾ(ರ) ಆಗಿದ್ದರು. ಖದೀಜಾ(ರ)ರು ಬದುಕಿರುವವರೆಗೆ ಪ್ರವಾದಿವರ್ಯರು(ಸ) ಬೇರೆ ಮದುವೆ ಮಾಡಿಕೊಂಡಿರಲಿಲ್ಲ.

1. ಖದೀಜಾ(ರ): ಇವರು ಮಕ್ಕಾದ ಶ್ರೀಮಂತ ವ್ಯಾಪಾರಿ ಖುವೈಲಿದ್‌ರ ಮಗಳಾಗಿದ್ದರು. ಖದೀಜಾ(ರ) ಕೂಡಾ ಶ್ರೀಮಂತ ಮಹಿಳೆಯಾಗಿದ್ದರು. ಇವರ ಬಳಿಕ ಪ್ರವಾದಿವರ್ಯರು(ಸ) ಮದುವೆ ಮಾಡಿಕೊಂಡ ಪತ್ನಿಯರ ಹೆಸರು ಈ ರೀತಿ ಇದೆ.

2. ಸೌದ ಬಿಂತಿ ಝಮ್‌ಅ(ರ): ಇವರು ಕುರೈಶರ ಪ್ರಸಿದ್ಧ ಕುಟುಂಬ ಆಮಿರ್ ಬಿನ್ ಲೂಯಿಯವರ ಮನೆತನಕ್ಕೆ ಸೇರಿದವರು. ಹ. ಸೌದ(ರ)ರು ಇದೇ ಕುಟುಂಬದ ಕುಲೀನ ವ್ಯಕ್ತಿಯ ಪುತ್ರಿಯಾಗಿದ್ದರು. ಪ್ರವಾದಿಯವರೊಂದಿಗೆ ವಿವಾಹವಾಗುವಾಗ ಸೌದಾ(ರ)ರು ವೃದ್ಧಾಪ್ಯಕ್ಕೆ ತಲುಪಿದ್ದರು.

3. ಹ. ಆಯಿಶಾ(ರ): ಪ್ರಥಮ ಖಲೀಫರಾದ ಹ. ಅಬೂಬಕರ್(ರ)ರ ಪುತ್ರಿ. ಇಸ್ಲಾಮಿ ಇತಿಹಾಸದಲ್ಲಿ ಹ. ಅಬೂಬಕರ್(ರ)ರ ಸ್ಥಾನಮಾನ ವರ್ಣಿಸಲು ಅಸಾಧ್ಯ.

4. ಹ. ಹಫ್ಸಾ(ರ): ಎರಡನೇ ಖಲೀಫ ಉಮರ್(ರ)ರ ಪುತ್ರಿ. ಹ. ಉಮರ್(ರ)ರ ಹೆಸರೇ ಹಫ್ಸಾ(ರ)ರ ಪರಿಚಯಕ್ಕೆ ಧಾರಾಳ ಸಾಕು.

5. ಹ. ಝೈನಬ್ ಬಿಂತಿ ಖುಝೈಮ(ರ): ಇವರು ಕುರೈಶ್ ಗೋತ್ರಕ್ಕೆ ಸೇರಿದವರು. ಝೈನಬ್(ರ)ರು ಪ್ರವಾದಿವರ್ಯರ(ಸ) ದೂರದ ಸಂಬಂಧಿ. ಇವರನ್ನು 'ಉಮ್ಮುಲ್ ಮಸಾಕೀನ್" (ಬಡವರ ಮಾತೆ)ಎಂದು ಕರೆಯುತ್ತಾರೆ.

6. ಹ. ಉಮ್ಮು ಸಲಮ(ರ): ಇವರು ಖ್ಯಾತ ಮಖ್ಝೂಮ್ ಗೋತ್ರಕ್ಕೆ ಸೇರಿದವರು. ಹ. ಖಾಲಿದ್, ಅಬೂಜಹಲ್ ಕೂಡ ಇದೇ ಗೋತ್ರಕ್ಕೆ ಸೇರಿದವರು. ಉಮ್ಮು ಸಲಮ(ರ)ರ ತಂದೆ ಅಬೂ ಉಮಯ್ಯ ಶ್ರೀಮಂತ, ಉದಾರಿ ಹಾಗೂ ಪ್ರತಿಷ್ಠಿತ ವ್ಯಕ್ತಿಯಾಗಿದ್ದರು. "ಝಾದ್ ಅರ್ರಾಕಿಬ್" (ಪ್ರಯಾಣಿಕರ ಖರ್ಚು ವೆಚ್ಚ ಭರಿಸುವವರು) ಎಂಬ ಬಿರುದು ಹೊಂದಿದ್ದರು. ಉಮ್ಮು ಸಲಮ(ರ)ರೂ ಕೊಡುಗೈ ದಾನಿಯಾಗಿದ್ದರು. ಜ್ಞಾನದಲ್ಲಿ ಆಯಿಶಾ(ರ)ರ ಬಳಿಕ ಇವರ ಹೆಸರನ್ನು ಪ್ರಸ್ತಾಪಿಸಲಾಗುತ್ತದೆ.

7. ಹ. ಝೈನಬ್ ಬಿಂತಿ ಜಹಶ್(ರ): ಇವರು ಪ್ರವಾದಿವರ್ಯರ(ಸ)

ಅತ್ತೆಯ ಮಗಳು. ಪ್ರವಾದಿವರ್ಯರ(ಸ) ಹತ್ತಿರದ ಸಂಬಂಧಿ ಹಾ
ಗೌರವಾದರಗಳಿಗೆ ಹೆಚ್ಚು ಅರ್ಹಳೆಂಬ ಗರ್ವ ಅವರಿಗಿತ್ತು.

8. ಉಮ್ಮು ಹಬೀಬ(ರ): ಶ್ರೀಮಂತ ಮನೆತನದ ಪ್ರಖ್ಯಾತ ಆಡಳಿತಗಾ
ಹಾಗೂ ಮಕ್ಕಾದ ಸರದಾರರಾಗಿದ್ದ ಅಬೂಸುಫಿಯಾನ್‌ರ ಪು
ಪ್ರವಾದಿವರ್ಯರ(ಸ) ಮೇಲೆ ವಿಶ್ವಾಸ ತಾಳಿ ಧರ್ಮದ ಸಂಸ್ಥಾಪನೆ
ಕಾರ್ಯದಲ್ಲಿ ಮಹತ್ತರವಾದ ಪಾತ್ರ ವಹಿಸಿದರು.

9. ಜುವೈರಿಯಾ ಬಿಂತಿ ಹಾರಿಸ್(ರ): ಬನೂ ಮುಸ್ತಲಿಕ್ ಗೋತ್ರ
ಸರದಾರರ ಪುತ್ರಿ. ಈ ಗೋತ್ರವು ಸಾಹಸ-ಶೌರ್ಯಕ್ಕೆ ಹೆಸರುವಾಸಿಯಾಗಿ

10. ಹ. ಮೈಮೂನ(ರ): ಇವರು ಕುರೈಶ್ ಗೋತ್ರಕ್ಕೆ ಸೇರಿದವ
ಅವರ ಸ್ಥಾನಮಾನ ಅತ್ಯುನ್ನತವಾಗಿತ್ತು. ಅವರ ಮೊದಲ ಪತಿಯ ನಿಧನ
ಬಳಿಕ ಜನರು ಪ್ರವಾದಿವರ್ಯರ(ಸ) ಬಳಿ ಬಂದು ಮೈಮೂನಾ(ರ)
ನಿಮಗೆ ಯೋಗ್ಯ ಸಂಗಾತಿಯೆಂದು ಅವರೀರ್ವರ ವಿವಾಹ ಮಾಡಿಸಿದರು.

11. ಹ. ಸಫಿಯ್ಯಾ(ರ): ಇವರು ಹಾರೂನ್(ಅ)ರ ವಂಶಸ್ಥ
ಹಾಗೂ ಖೈಬರ್‌ನ ಸರದಾರರಲ್ಲಿ ಒಂದಾದ ಬನೂ ನಝೀ
ಗೋತ್ರದ ಸರದಾರನ ಪುತ್ರಿ.

ಹೀಗೆ ಹ. ಆಯಿಶಾ(ರ)ರಿಗೆ ಹತ್ತು ಮಂದಿ ಸವತಿಯರಿದ್ದರು. ಅವರೆಲ್ಲರ
ಉನ್ನತ ಸ್ಥಾನಮಾನವುಳ್ಳವರೂ, ಸ್ವಾಭಿಮಾನಿಗಳೂ, ಕೊಡುಗೈ ದಾನಿಗಳು
ಉತ್ತಮ ಚಾರಿತ್ರ್ಯವಂತರೂ ಆಗಿದ್ದರು. ಸೌಂದರ್ಯದಲ್ಲಿ ಕೆಲವ
ಆಯಿಶಾ(ರ)ರಿಗಿಂತ ಕಡಿಮೆ, ಕೆಲವರು ಅವರಿಗೆ ಸಮಾನರು, ಇನ್ನು ಕೆಲವ
ಅವರಿಗಿಂತಲೂ ಹೆಚ್ಚು ರೂಪಮತಿಯಾಗಿದ್ದರು. ಈ ಎಲ್ಲಾ ಪತ್ನಿಯ
ಪ್ರವಾದಿವರ್ಯರನ್ನು(ಸ) ಬಹಳವಾಗಿ ಪ್ರೀತಿಸುತ್ತಿದ್ದರು. ಇವರೆಲ್ಲರೊಂದಿ
ಆಯಿಶಾ(ರ)ರಿಗೆ ಒಂದಿಲ್ಲೊಂದು ವಿಷಯದಲ್ಲಿ ಮೈಮನಸ್ಸು ಇರುತ್ತಿತ
ಆದರೆ, ಪ್ರವಾದಿವರ್ಯರ(ಸ) ಸತ್ಸಂಗದ ಪರಿಣಾಮ ಅವರ ಹೃದಯಗ
ಶುಭ್ರ ಕನ್ನಡಿಯಂತೆ ನಿರ್ಮಲವಾಗಿದ್ದವು. ಒಂದು ವೇಳೆ ಆಯಿಶಾ(ರ)
ತಮ್ಮ ಸವತಿಯರ ಬಗ್ಗೆ ಹೇಳದಿರುತ್ತಿದ್ದರೆ ಇಂದು ಅವರೆಲ್ಲರ ಚರಿತ್ರೆಯ
ಅಂಧಕಾರದಲ್ಲಿರುತ್ತಿತ್ತು. ಆಯಿಶಾ(ರ)ರು ತಮ್ಮ ಸವತಿಯರ ಸ್ಥಾನಮಾನವನ
ಉನ್ನತಗೊಳಿಸಲು ಪ್ರಯತ್ನಿಸಿದಷ್ಟು ಪ್ರಪಂಚದ ಯಾವ ಸವತಿಯೂ
ರೀತಿ ಮಾಡಲು ಸಾಧ್ಯವಿಲ್ಲ.

ಹ. ಆಯಿಶಾ(ರ)ರು ಖದೀಜಾ(ರ)ರ ಕುರಿತು ಉಲ್ಲೇಖಿಸಿದ ಎಲ

ಪ್ರವಾದಿ ವಚನಗಳಲ್ಲಿ ಖದೀಜಾ(ರ)ರ ನೈಪುಣ್ಯತೆ ಹಾಗೂ ವೈಶಾಲ್ಯತೆಯನ್ನು ಹೊಗಳಿದ್ದಾರೆ.

ಪ್ರವಾದಿವರ್ಯರ(ಸ) ಮೇಲೆ ದಿವ್ಯವಾಣಿ ಅವತೀರ್ಣಗೊಂಡದ್ದು, ಖದೀಜಾ(ರ)ರು ಅದರ ಮೇಲೆ ವಿಶ್ವಾಸ ತಂದದ್ದು, ಪ್ರವಾದಿವರ್ಯರ(ಸ) ಪ್ರವಾದಿತ್ವವನ್ನು ದೃಢೀಕರಿಸಿದ್ದು, ತಮ್ಮ ಸೊತ್ತು-ವಿತ್ತಗಳನ್ನು ಸಮರ್ಪಿಸಿದ್ದು, ಮಕ್ಕಳ ತ್ಯಾಗ, ಬಹಿಷ್ಕಾರದ ಸಂದರ್ಭದಲ್ಲಿ ಖದೀಜಾ(ರ)ರ ತ್ಯಾಗ ಬಲಿದಾನಗಳು, ಅವರ(ರ) ನಿಧನದ ಬಳಿಕ ಪ್ರವಾದಿವರ್ಯರು(ಸ) ತಮ್ಮ ಪ್ರಿಯ ಪತ್ನಿ ಖದೀಜಾ(ರ)ರನ್ನು ಸ್ಮರಿಸುತ್ತಿರುವುದು ಇವೆಲ್ಲವನ್ನು ಆಯಿಶಾ(ರ)ರೇ ಉಲ್ಲೇಖ ಮಾಡಿದ್ದಾರೆ. ಈ ಉಲ್ಲೇಖಗಳ ಬಳಿಕ, "ನನಗೆ ಆ ವೃದ್ಧ ಮಹಿಳೆಯ ಮೇಲೆ ಅಸೂಯೆ ಹುಟ್ಟುತ್ತಿತ್ತು. ಏಕೆಂದರೆ, ಪ್ರವಾದಿವರ್ಯರು(ಸ) ಖದೀಜಾ(ರ)ರನ್ನು ಇಂದಿಗೂ ಮರೆಯಲಿಲ್ಲ. ಅಕಟಾ! ನಾನು ಅವರ ಸ್ಥಾನದಲ್ಲಿರುತ್ತಿದ್ದರೆ ಎಂದುಕೊಳ್ಳುತ್ತಿದ್ದೆ" ಎಂದು ಸ್ವತಃ ಆಯಿಶಾ(ರ)ರೇ ಹೇಳಿದ್ದಾರೆ.

ಸವತಿಯರು ಪರಸ್ಪರ ಪ್ರಶಂಸೆ ಮಾಡುವ ಗುಣ ಮಾದರಿಯೋಗ್ಯವಾಗಿದೆ.

✦ ಸೌದಾ(ರ)ರ ಕುರಿತು ಆಯಿಶಾ(ರ)ರು ಹೇಳುತ್ತಾರೆ, "ಸೌದಾ(ರ)ರ ಸ್ಥಾನಮಾನ ಉನ್ನತವಾಗಿತ್ತು. ಪ್ರವಾದಿವರ್ಯರ(ಸ) ಸೇವೆಯಲ್ಲಿ ನಿರತರಾಗಿರುತ್ತಿದ್ದರು. ಅತ್ಯಂತ ಉದಾರಿಯಾಗಿದ್ದರು. ಲಘು ಹಾಸ್ಯದೊಂದಿಗೆ ಪ್ರವಾದಿವರ್ಯರ(ಸ) ದುಃಖವನ್ನು ಮರೆಸುತ್ತಿದ್ದರು."

ಒಂದು ದಿನ ಸೌದಾ(ರ)ರು ಈ ರೀತಿ ಹೇಳಿದರು, "ಓ ಪ್ರವಾದಿಗಳೇ(ಸ)! ನಿನ್ನೆ ತಮ್ಮ ಜೊತೆಗೆ ನಮಾಝ್ ನಿರ್ವಹಿಸುತ್ತಿದ್ದಾಗ ದೀರ್ಘವಾಗಿ ರುಕೂಅ್ ಮಾಡಿದಿರಿ. ನನ್ನ ಮೂಗಿನಲ್ಲಿ ನೀರು ಹರಿಯುತ್ತಿದೆಂದು ನನಗೆ ಭಾಸವಾಯಿತು. ಆದುದರಿಂದ ನಾನು ತುಂಬಾ ಹೊತ್ತು ಮೂಗನ್ನು ಬಿಗಿ ಹಿಡಿದೆ" ಎಂದರು. ಈ ಮಾತನ್ನು ಕೇಳಿ ಪ್ರವಾದಿವರ್ಯರು(ಸ) ಮುಗುಳ್ನಕ್ಕರು.

ಖದೀಜಾ(ರ)ರ ನಿಧನದ ಬಳಿಕ ಪ್ರವಾದಿ(ಸ)ರು ಆಯಿಶಾ(ರ) ಹಾಗೂ ಸೌದಾ(ರ)ರನ್ನು ವಿವಾಹವಾದರು. ಆಯಿಶಾ(ರ)ರು ಸಣ್ಣ ಪ್ರಾಯದವರಾದುದರಿಂದ ಮನೆ-ಮಕ್ಕಳ ನಿರ್ವಹಣೆ ಸೌದ(ರ)ರೇ ನೋಡಿಕೊಳ್ಳುತ್ತಿದ್ದರು. ಜೊತೆಗೆ ತಮ್ಮ ಹಾಸ್ಯದಿಂದ ಪ್ರವಾದಿಯವರನ್ನು(ಸ) ಸಂತಸಪಡಿಸುತ್ತಿದ್ದರು.

ಆಯಿಶಾ(ರ)ರು ಹೇಳುತ್ತಾರೆ, "ಸೌದಾ(ರ)ರ ಹೊರತು ಬೇರಾವ

ಸ್ತ್ರೀಯನ್ನು ನೋಡಿ, ಇವರ ದೇಹದಲ್ಲಿ ನನ್ನ ಆತ್ಮವಿರುತ್ತಿದ್ದರೇ! ಎಂದು ನನಗನಿಸಲಿಲ್ಲ" ಎಂದರು.

✦ ಹಫ್ಸಾ(ರ)ರು ಪ್ರವಾದಿವರ್ಯರೊಂದಿಗೆ(ಸ) ತುಂಬಾ ಬಡಬಡಿಸಿ ಮಾತನಾಡುತ್ತಿದ್ದರು. (ಈ ವಿಚಾರದಲ್ಲಿ ಹ. ಉಮರ್(ರ)ರು ತನ್ನ ಮಗಳು ಹಫ್ಸಾ(ರ)ರನ್ನು ಗದರಿಸಿದ್ದರು.) ಪ್ರವಾದಿವರ್ಯರೊಂದಿಗೆ(ಸ) ಪ್ರೀತಿಯ ಪಾಲುದಾರಿಕೆಯಲ್ಲಿ ಹಫ್ಸಾ(ರ)ರು ಆಯಿಶಾ(ರ)ರೊಂದಿಗೆ ಸಮಾನ ಹಕ್ಕುದಾರರಾಗಿದ್ದರು. ಒಂಟೆ ಬದಲಿಸಿದ ಸ್ವಾರಸ್ಯಕರ ಘಟನೆಯನ್ನು ನೀವು ಈಗಾಗಲೇ ಓದಿದ್ದೀರಿ. ಒಟ್ಟಿನಲ್ಲಿ ಹಫ್ಸಾ(ರ)ರು ಆಯಿಶಾ(ರ)ರಿಗೆ ಅತ್ಯಂತ ಆತ್ಮೀಯರಾಗಿದ್ದರು. ಆಯಿಶಾ(ರ)ರು ಹಫ್ಸಾ(ರ)ರೊಂದಿಗೆ ಸಮಾಲೋಚನೆ ನಡೆಸುವುದು ಸಾಮಾನ್ಯವಾಗಿತ್ತು. ಪ್ರವಾದಿವರ್ಯರಿಂದ(ಸ) ಯಾವುದೇ ಬೇಡಿಕೆಯನ್ನು ಈಡೇರಿಸಿಕೊಳ್ಳಬೇಕಾದರೆ ಅವರಿಬ್ಬರೂ ಒಂದೇ ಬಾಯಿಯಾಗಿರುತ್ತಿದ್ದರು.

✦ ಆಯಿಶಾ(ರ)ರು ಝೈನಬ್ ಬಿಂತಿ ಜಹಶ್(ರ)ರ ಕುರಿತು ಈ ರೀತಿ ಹೇಳುತ್ತಾರೆ, "ಎಲ್ಲಾ ಪ್ರವಾದಿ ಪತ್ನಿಯರಲ್ಲಿ ಝೈನಬ್‌ರೇ(ರ) ನನ್ನ ಬಗ್ಗೆ ಸರಿಯಾಗಿ ವಾದ ಮಾಡುತ್ತಿದ್ದರು." ಝೈನಬ್(ರ)ರು ಪ್ರವಾದಿವರ್ಯರೊಂದಿಗೆ(ಸ) ವಿವಾಹವಾದಾಗ ಆಯಿಶಾ(ರ)ರು ಅವರಿಗೆ ಶುಭಾಶಯ ಕೋರಿದ್ದರು. ಮದೀನಾದ ಕಪಟ ವಿಶ್ವಾಸಿಗಳು ಆಯಿಶಾ(ರ)ರ ಮೇಲೆ ಅಪವಾದ ಹೊರಿಸಿದಾಗ ಝೈನಬ್(ರ)ರು ಪ್ರವಾದಿಯವರ(ಸ) ಮುಂದೆ ಆಯಿಶಾ(ರ)ರ ಪಾವಿತ್ರ್ಯತೆಯ ಬಗ್ಗೆ ಸಾಕ್ಷಿ ನುಡಿಯುತ್ತಾ, "ನಾನು ಆಯಿಶಾ(ರ)ರಲ್ಲಿ ಸನ್ನಡತೆಯ ಹೊರತು ಮತ್ತೇನನ್ನೂ ಕಂಡಿಲ್ಲ" ಎಂದರು.

ಒಮ್ಮೆ ಝೈನಬ್(ರ)ರು ಸಫಿಯ್ಯಾ(ರ)ರಿಗೆ ಓ ಯಹೂದಿಯೇ... ಎಂದು ಬಿಟ್ಟರು. ಇದರಿಂದ ಪ್ರವಾದಿಯವರಿಗೆ(ಸ) ಬಹಳ ದುಃಖವಾಯಿತು. ಇದರಿಂದ ಝೈನಬ್(ರ)ರು ಆತಂಕಕ್ಕೊಳಗಾದರು. ಆಯಿಶಾ(ರ)ರ ಬಳಿ ಹೋಗಿ ತನ್ನ ತಪ್ಪನ್ನು ಕ್ಷಮಿಸುವಂತೆ ಪ್ರವಾದಿಯವರ(ಸ) ಬಳಿ ನಿವೇದಿಸಿಕೊಳ್ಳಿರಿ ಎಂದು ಬಿನ್ನವಿಸಿಕೊಂಡರು. ಆಯಿಶಾ(ರ)ರು ಅವರಿಗೆ ವಾಗ್ದಾನ ಮಾಡಿ ಪ್ರವಾದಿಯವರನ್ನು(ಸ) ಭೇಟಿಯಾಗಲು ತಯಾರಿ ನಡೆಸುತ್ತಿದ್ದರು. ಪ್ರವಾದಿಯವರ(ಸ) ಮುಂದೆ ಹೇಳಬೇಕಾದ ವಿಷಯವನ್ನೆಲ್ಲಾ ಮನನ ಮಾಡಿಕೊಳ್ಳುತ್ತಿದ್ದರು. ಪ್ರವಾದಿಯವರ(ಸ) ಸ್ವಭಾವಕ್ಕೆ ಒಪ್ಪುವಂತೆ ಸರಳವಾಗಿ ಶೃಂಗಾರ ಮಾಡಿಕೊಂಡರು. ಪ್ರವಾದಿಯವರು(ಸ) ಮನೆಗೆ ಪ್ರವೇಶ ಮಾಡಿದ ಕೂಡಲೇ ಆಯಿಶಾ(ರ)ರು ಮಾತನಾಡಿದ ರೀತಿಯಿಂದ ತಕ್ಷಣವೇ ಪ್ರವಾದಿಯವರು(ಸ) ಝೈನಬ್(ರ)ರನ್ನು ಕ್ಷಮಿಸಿದರು.

✦ ಆಯಿಶಾ(ರ)ರು ಹೇಳುತ್ತಾರೆ, "ಪ್ರವಾದಿಯವರು(ಸ) ನಿಧನಕ್ಕೆ ಮುಂಚೆ ಈ ರೀತಿ ಹೇಳಿದ್ದರು, ಯಾರ ಕೈಗಳು ಉದ್ದವಾಗಿದೆಯೋ ಸ್ವರ್ಗದಲ್ಲಿ ಅವರು ಮೊಟ್ಟ ಮೊದಲು ನನ್ನನ್ನು ಬಂದು ಸೇರುವರು." ಇದನ್ನು ಕೇಳಿದ ನಾವೆಲ್ಲರೂ ನಮ್ಮ ಕೈಗಳನ್ನು ಅಳತೆ ಮಾಡತೊಡಗಿದೆವು. ಸೌದ(ರ)ರ ಕೈಗಳು ಉದ್ದವಾಗಿದ್ದರಿಂದ ಅವರೆಂದು ನಾವು ಭಾವಿಸಿದೆವು. ಆದರೆ ಝೈನಬ್(ರ)ರ ನಿಧನದ ಬಳಿಕ ವಾಸ್ತವಿಕತೆಯ ಅರಿವಾಯಿತು. ಉದ್ದ ಕೈಯವಳು" ಎಂಬುದರರ್ಥ ಉದಾರಿ ಹಾಗೂ ಹೆಚ್ಚು ದಾನ ಧರ್ಮ ಮಾಡುವವಳು ಎಂದಾಗಿತ್ತು. ಝೈನಬ್(ರ)ರು ಸ್ವತಃ ತಮ್ಮ ಕೈಗಳಿಂದ ಚರ್ಮವನ್ನು ಹದಗೊಳಿಸುವ ಹಾಗೂ ಶುಚಿಗೊಳಿಸುವ ಕೆಲಸ ಮಾಡುತ್ತಿದ್ದರು. ಅದರಿಂದ ಬಂದ ಸಂಪಾದನೆಯನ್ನು ದಾನ ಮಾಡುತ್ತಿದ್ದರು. "ಝೈನಬ್(ರ)ರಿಗಿಂತ ಅತ್ಯಧಿಕ ಧರ್ಮನಿಷ್ಠೆ, ಸತ್ಯವಂತೆ, ದಾನಿ ಹಾಗೂ ಅಲ್ಲಾಹನ ಸಂಪ್ರೀತಿ ಬಯಸುವ ಸ್ತ್ರೀಯನ್ನು ನಾನು ಕಂಡಿಲ್ಲ" ಎಂದರು.

ಹ. ಉಮ್ಮು ಹಬೀಬ(ರ) ಮಕ್ಕಾದ ಪ್ರಸಿದ್ಧ ಸರದಾರ ಅಬೂ ಸುಫಿಯಾನರ ಪುತ್ರಿ. ಮಖ್ಝೂಮ್ ಗೋತ್ರವು ಘನತೆ–ಗೌರವಾದರಗಳಿಗೆ ಹೆಸರುವಾಸಿಯಾಗಿತ್ತು. ಉಮ್ಮು ಹಬೀಬ(ರ)ರು ನಿಧನರಾಗುವ ಘಳಿಗೆ ಸನ್ನಿಹಿತವಾದಾಗ ಹ. ಆಯಿಶಾ(ರ)ರನ್ನು ಬಳಿಗೆ ಕರೆದು "ಸವತಿಯರಲ್ಲಿ ಏನಾದರೂ ಸಂಭವಿಸುವುದು ಸಹಜ. ನಮ್ಮಿಬ್ಬರ ಮಧ್ಯೆ ಹಾಗೇನಾದರೂ ಸಂಭವಿಸಿದ್ದರೆ ಅಲ್ಲಾಹನು ಕ್ಷಮಿಸಲಿ" ಎಂದರು.

ಹ. ಆಯಿಶಾ(ರ)ರು ಅವರನ್ನು ಸಂತೈಸುತ್ತಾ, "ಅಲ್ಲಾಹನು ಕ್ಷಮಿಸಲಿ" ಎಂದರು. ಆಗ ಉಮ್ಮು ಹಬೀಬ(ರ)ರು "ನೀವು ನನ್ನನ್ನು ಸಂತುಷ್ಟಗೊಳಿಸಿದ್ದೀರಿ. ಅಲ್ಲಾಹನು ನಿಮ್ಮನ್ನು ಸಂತುಷ್ಟಗೊಳಿಸಲಿ" ಎಂದು ಪ್ರಾರ್ಥಿಸಿದರು."

ಹ. ಮೈಮೂನ(ರ)ರ ಬಗ್ಗೆ ಹ. ಆಯಿಶಾ(ರ)ರು ಹೇಳುತ್ತಾರೆ, "ಅವರು(ರ) ನಮ್ಮೆಲ್ಲರಿಗಿಂತಲೂ ಹೆಚ್ಚು ಧರ್ಮನಿಷ್ಠರಾಗಿದ್ದರು."

ಹ. ಸಫಿಯ್ಯಾ(ರ)ರ ಕುರಿತು ಹೇಳುತ್ತಾ, "ಹ. ಸಫಿಯ್ಯಾ(ರ)ರಿಗಿಂತ ಉತ್ತಮ ಅಡುಗೆ ತಯಾರಿಸುವವರನ್ನು ನಾನು ಕಂಡಿಲ್ಲ."

ತಮ್ಮ ದೌರ್ಬಲ್ಯದ ಕುರಿತು ಹ. ಆಯಿಶಾ(ರ)ರು ಒಂದು ಘಟನೆಯನ್ನು ವಿವರಿಸುತ್ತಾರೆ. "ಒಂದು ದಿನ ನಾವಿಬ್ಬರೂ ಅಡುಗೆ ತಯಾರಿಸ ತೊಡಗಿದೆವು. ಸಫಿಯ್ಯಾ(ರ)ರು ತಯಾರಿಸಿದ ಅಡುಗೆ ಮೊದಲು ಪ್ರವಾದಿಯವರ(ಸ) ಬಳಿಗೆ ತಲುಪಿತು. ನನ್ನ ಪ್ರೀತಿ ಹಾಗೂ ಪರಿಶ್ರಮ ವ್ಯರ್ಥವಾದುದು ನನ್ನಿಂದ ಸಹಿಸಲಾಗಲಿಲ್ಲ. ನಾನು ಕೈಯಿಂದ ಹೊಡೆದ ರಭಸಕ್ಕೆ ಸೇವಕಿಯ

ಕೈಯಲ್ಲಿದ್ದ ಲೋಟವು ಕೆಳಗೆ ಬಿದ್ದು ತುಂಡಾಯಿತು. ಪ್ರವಾದಿವರ್ಯರು(ಸ) ಆ ತುಂಡುಗಳನ್ನು ಹೆಕ್ಕ ತೊಡಗಿದರು. "ನಿಮ್ಮ ಅಮ್ಮನಿಗೆ ಕೋಪ ಬಂದಿದೆ" ಎಂದು ಸೇವಕಿಗೆ ಹೇಳಿದರು. ನನಗೆ ನಾಚಿಕೆಯಾಯಿತು. ಪ್ರವಾದಿಗಳೇ ಈಗ ನಾನೇನು ಮಾಡಲಿ ಎಂದೆ. ಅವರು(ಸ) ಮುಗುಳ್ನಕ್ಕು "ಇದೇ ರೀತಿಯ ಲೋಟ ಮತ್ತು ಇದೇ ರೀತಿಯ ಅಡುಗೆ ಎಂದರು."

ಒಮ್ಮೆ ಆಯಿಶಾ(ರ)ರು ಸಫಿಯ್ಯಾ(ರ)ರಿಗೆ 'ಕುಳ್ಳಿ' ಎಂದರು.

ಇದನ್ನು ಕೇಳಿದ ಪ್ರವಾದಿವರ್ಯರು(ಸ) ಅವರನ್ನು ಗದರಿಸಿದರು.

ಹ. ಆಯಿಶಾ(ರ)ರು ಸಫಿಯ್ಯಾ(ರ)ರ ಪ್ರತಿಯೊಂದು ವಿಷಯವನ್ನು ಹೊಗಳುತ್ತಿದ್ದರು. ಅವರ ಸ್ವಚ್ಛತೆ, ಉದಾರತೆ, ಪ್ರವೃತ್ತಿಗಳನ್ನು ಕೊಂಡಾಡುತ್ತಿದ್ದರು. ಎಂತಹ ಪರಿಸ್ಥಿತಿಯಲ್ಲೂ ಇಬ್ಬರೂ ಒಂದಾಗುತ್ತಿದ್ದರು. ಪರಸ್ಪರರ ಲಾಭಕ್ಕಾಗಿ ಪ್ರಯತ್ನಿಸುತ್ತಿದ್ದರು.

ಒಮ್ಮೆ ಸಫಿಯ್ಯಾ(ರ)ರು ಅಳುತ್ತಿದ್ದರು. ಪ್ರವಾದಿ(ಸ) ಅಳುವಿಗೆ ಕಾರಣ ಕೇಳಿದಾಗ, "ನಿಮ್ಮ ದೃಷ್ಟಿಯಲ್ಲಿ ಗೌರವಕ್ಕೆ ಹೆಚ್ಚು ಅರ್ಹರು ನಾವಿಬ್ಬರು ಎಂದು ಆಯಿಶಾ(ರ) ಹಾಗೂ ಹಫ್ಸಾ(ರ)ರು ಹೇಳುತ್ತಾರೆ. ಏಕೆಂದರೆ ಅವರು ನಿಮ್ಮ(ಸ) ಪತ್ನಿಯರೂ ಹಾಗೂ ಚಿಕ್ಕಪ್ಪನ ಪುತ್ರಿಯರು ಆಗಿದ್ದೇವೆ" ಎನ್ನುತ್ತಾರೆ. ಪ್ರವಾದಿ(ಸ) ಸಫಿಯ್ಯಾ(ರ)ರನ್ನು ಸಂತೈಸುತ್ತಾ, "ನನ್ನ ಪತಿ ಪ್ರವಾದಿವರ್ಯರು(ಸ), ನನ್ನ ತಂದೆ ಹಾರೂನ್(ಅ) ಚಿಕ್ಕಪ್ಪ ಮೂಸಾ(ಅ) ಆದ್ದರಿಂದ ಗೌರವಕ್ಕೆ ಹೆಚ್ಚು ಅರ್ಹಳು ನಾನೆಂದು ಹೇಳಬೇಕಿತ್ತು" ಎಂದರು.

ಈ ಎಲ್ಲಾ ಸಂಗತಿಗಳು ಸ್ವತಃ ಆಯಿಶಾ(ರ)ರಿಂದಲೇ ನಮಗೆ ತಿಳಿಯಿತು. ಇದರಲ್ಲಿ ಎಲ್ಲ ಸ್ತ್ರೀಯರಿಗೂ ಮಾದರಿಯಿದೆ. ಅದರಂತೆ ನಡೆಯುವುದು ನಮ್ಮೆಲ್ಲರ ಕರ್ತವ್ಯ..

## ಮಲ ಮಕ್ಕಳೊಂದಿಗೆ ವರ್ತನೆ:

ಹ. ಆಯಿಶಾ(ರ)ರಿಗೆ ನಾಲ್ಕು ಮಂದಿ ಮಲ ಮಕ್ಕಳಿದ್ದರು. ಹ. ಝೈನಬ್(ರ), ಹ. ರುಕಿಯ್ಯಾ(ರ), ಉಮ್ಮು ಕುಲ್ಸೂಮ್(ರ) ಹಾಗೂ ಹ. ಫಾತಿಮಾ(ರ). ಹ. ಆಯಿಶಾ(ರ) ವಿವಾಹವಾಗಿ ಬಂದಾಗ ಕೇವಲ ಫಾತಿಮಾ(ರ) ಮಾತ್ರ ಅವಿವಾಹಿತೆಯಾಗಿದ್ದರು. ಉಳಿದ ಮೂವರಿಗೂ ವಿವಾಹವಾಗಿತ್ತು. ಈ ರೀತಿ ಆಯಿಶಾ(ರ)ರೊಟ್ಟಿಗಿರುವ ಸೌಭಾಗ್ಯ ಹ. ಫಾತಿಮಾರಿಗೆ ದಕ್ಕಿತ್ತು.

ಹ. ಆಯಿಶಾ(ರ)ರು ಫಾತಿಮಾ(ರ)ರನ್ನು ಬಹಳ ಪ್ರೀತಿಸುತ್ತಿದ್ದರು.

ಹ. ಝೈನಬ್(ರ)ರ ಕುರಿತು ಹೇಳುತ್ತಾರೆ, "ಅವಳು ನನ್ನ ಬಹಳ ಳ್ಳೆಯ ಮಗಳಾಗಿದ್ದಳು." ಅವರು ನನ್ನ ಪ್ರೀತಿಯಲ್ಲಿ ಪೀಡನೆಗೊಳಗಾಗುತ್ತಿದ್ದರು. ರ್ವ ಧರ್ಮ ವಿರೋಧಿ ವ್ಯಕ್ತಿ ಅವಕಾಶ ನೋಡಿ ಒಂಟೆಯ ಮೇಲಿಂದ ೀಳಿಸಿದನು. ಇದೇ ನೋವಿನಲ್ಲಿ ಅವರು ಹುತಾತ್ಮರಾದರು. ಹ. ೈನಬ್(ರ)ರಿಗೆ ಉಮಾಮ ಎಂಬ ಮಗಳಿದ್ದಳು. ಅವಳನ್ನು ಪ್ರವಾದಿ(ಸ) ಂಬಾ ಪ್ರೀತಿಸುತ್ತಿದ್ದರು. ಮಡಿಲಲ್ಲಿ ಕೂರಿಸಿಕೊಳ್ಳುತ್ತಿದ್ದರು. ಮಸೀದಿಗೆ ಒಟ್ಟಿಗೆ ೆದುಕೊಂಡು ಹೋಗುತ್ತಿದ್ದರು. ನಮಾಝ್ ಮಾಡುವಾಗ ಭುಜದ ಮೇಲೆ ಾರಿಸಿಕೊಳ್ಳುತ್ತಿದ್ದರು. ಒಮ್ಮೆ ಕಂಠೀಹಾರ ಉಡುಗೊರೆಯಾಗಿ ಬಂತು. ವಾದಿ(ಸ) ಹೇಳಿದರು, "ನಾನು ಅಧಿಕವಾಗಿ ಪ್ರೀತಿಸುವವರಿಗೆ ಈ ಹಾರ ಡುತ್ತೇನೆ" ಎಂದರು. ಎಲ್ಲರ ಗಮನ ಆಯಿಶಾ(ರ)ರ ಕಡೆಗೆ ಹರಿಯಿತು. ವರೆ ಪ್ರವಾದಿಯವರು(ಸ) ಆ ಉಡುಗೊರೆಯನ್ನು ಪ್ರೀತಿಯ ಮೊಮ್ಮಗಳು ಮಾಮಳಿಗೆ ನೀಡಿದರು.

ಹ. ಆಯಿಶಾ(ರ)ರ ಸಮಕ್ಷಮ ಫಾತಿಮಾ(ರ)ರ ವಿವಾಹ ಹ. ಲಿ(ರ)ರೊಂದಿಗೆ ನೆರವೇರಿತು. ಈ ಶುಭಕಾರ್ಯದಲ್ಲಿ ಎಲ್ಲಾ ಮಾತೆಯರು ಂತೋಷದಿಂದ ಭಾಗವಹಿಸಿದ್ದರು. ಈ ಕಾರ್ಯಕ್ರಮವನ್ನು ಹ. ಆಯಿಶಾ(ರ)ರು ಶೇಷ ರೀತಿಯಲ್ಲಿ ಆಯೋಜಿಸಿದ್ದರು. ಮನೆಯನ್ನು ಶುಚಿಗೊಳಿಸಿದರು. ಣ್ಣ-ಬಣ್ಣ ಬಳಿಸಿದರು, ಹಾಸಿಗೆ ಹಾಸಿದರು. ಖರ್ಜೂರದ ತೊಗಟೆಯನ್ನು ಂಬಿಗೆ ತುಂಬಿಸಿದರು. ಔತಣಕೂಟದಲ್ಲಿ ಒಣ ಖರ್ಜೂರ ಹಾಗೂ ್ರಾಕ್ಷಿಗಳನ್ನು ನೀಡಲಾಯಿತು. ಬಟ್ಟೆ ಹಾಗೂ ನೀರು ತುಂಬುವ ಚರ್ಮದ ೀಲ ಇಡಲು ಕಟ್ಟಿಗೆಯ ಒಂದು ಹಗ್ಗ ತಯಾರಿಸಿ ನೀಡಿದರು.

ಹ. ಆಯಿಶಾ(ರ) ಹೇಳುತ್ತಾರೆ, "ಮಗಳು ಫಾತಿಮಾಳ(ರ) ವಿವಾಹಕ್ಕಿಂತ ತ್ಯುತ್ತಮ ವಿವಾಹ ನಾನು ಕಂಡಿಲ್ಲ." ಹ. ಅಲಿ(ರ)ರ ಮನೆ, ಹ. ಯಿಶಾ(ರ)ರ ಮನೆಯ ಗೋಡೆಗೆ ತಾಗಿಕೊಂಡಿತ್ತು. ತಾಯಿ-ಮಗಳು ಆ ೋಡೆಗೆ ಒಂದು ದೊಡ್ಡ ತೂತು ಕೊರೆದಿದ್ದರು. ಅದರ ಮೂಲಕ ಇಬ್ಬರೂ ರಸ್ಪರ ಮಾತನಾಡಿಕೊಳ್ಳುತ್ತಿದ್ದರು.

ಹ. ಫಾತಿಮಾ(ರ)ರ ಕುರಿತು ಹ. ಆಯಿಶಾ(ರ)ರು ಹೇಳುತ್ತಾರೆ, ವರ ತಂದೆಯನ್ನು(ಸ) ಹೊರತುಪಡಿಸಿ ಫಾತಿಮಾ(ರ)ರಂತಹ ಅತ್ಯುತ್ತಮ ಕ್ತಿತ್ವ ನಾನು ಕಂಡಿಲ್ಲ" ಎಂದರು.

ಓರ್ವ ವ್ಯಕ್ತಿ ಹ. ಆಯಿಶಾ(ರ)ರಲ್ಲಿ ಕೇಳಿದರು, "ಮಾತೆ! ಪ್ರವಾದಿ(ಸ) ಾರನ್ನು ಹೆಚ್ಚು ಪ್ರೀತಿಸುತ್ತಿದ್ದರು." 'ಫಾತಿಮಾ(ರ)'ರನ್ನು ಎಂದುತ್ತರಿಸಿದರು.

ಹ. ಆಯಿಶಾ(ರ) ಮಾತು ಮುಂದುವರಿಸುತ್ತಾ, "ಪ್ರವಾದಿ(ಸ)ರ ಪ್ರತಿಯೊಂದ ನಡೆ-ನುಡಿಗಳಲ್ಲಿ ಹ. ಫಾತಿಮಾರಿಗಿಂತ ಸಾಮ್ಯತೆಯಿರುವವರನ್ನು ನಾನ ಕಂಡಿಲ್ಲ." (ಅಂದರೆ ಅವರು ಪ್ರವಾದಿ(ಸ)ರಂತೆಯೇ ನಡೆದಾಡುತ್ತಿದ್ದರು ಕುಳಿತುಕೊಳ್ಳುತ್ತಿದ್ದರು, ನಗುತ್ತಿದ್ದರು, ಮಾತ ನಾಡುತ್ತಿದ್ದರು ಇತ್ಯಾದಿ.) ಅವರ ಪ್ರವಾದಿ(ಸ)ರ ಬಳಿ ಬಂದಾಗ ಪ್ರವಾದಿ(ಸ) ಎದ್ದು ನಿಂತು ಅವರ(ರ ಹಣೆಗೆ ಮುತ್ತಿಟ್ಟು ತನ್ನ ಸ್ಥಾನದಲ್ಲಿ ಕೂರಿಸಿಕೊಳ್ಳುತ್ತಿದ್ದರು" ಎಂದರು.

ಈ ಬಗ್ಗೆ ಹಲವಾರು ಪ್ರವಾದಿ ವಚನಗಳಿವೆ. ಅವೆಲ್ಲವೂ ಹ ಆಯಿಶಾ(ರ)ರಿಂದಲೇ ವರದಿಯಾಗಿವೆ. ಶಿಯಾ ಪಂಥದವರು ಯಾವೆಲ್ ಪ್ರವಾದಿ ವಚನಗಳ ಬಗ್ಗೆ ಹೆಮ್ಮೆ ಪಡುತ್ತಾರೋ ಅವೆಲ್ಲ ಹ. ಆಯಿಶಾ(ರ)ರೆ ವರದಿ ಮಾಡಿರುತ್ತಾರೆ.

ಹ. ಫಾತಿಮಾ(ರ)ರ ಸಂತತಿಯ ಕುರಿತ ಪ್ರವಾದಿ ವಚನಗಳನ ಹ.ಆಯಿಶಾ(ರ)ರೇ ವರದಿ ಮಾಡಿದ್ದಾರೆ.

"ಒಮ್ಮೆ ಎಲ್ಲ ಪತ್ನಿಯರು(ರ) ಪ್ರವಾದಿ(ಸ)ರ ಬಳಿ ಕುಳಿತಿದ್ದರು ಫಾತಿಮಾ(ರ) ಅಲ್ಲಿಗೆ ಬಂದರು. ಅವರ ಮತ್ತು ಪ್ರವಾದಿ(ಸ)ರ ನಡೆ ನುಡಿಗಳಲ್ಲಿ ಸಾಮ್ಯತೆ ಇತ್ತು. ಪ್ರವಾದಿ(ಸ) ಪ್ರೀತಿಯಿಂದ ಫಾತಿಮಾ(ರ)ರನ ಬಳಿಗೆ ಕರೆದರು. ಅವರ(ರ) ಕಿವಿಯಲ್ಲಿ ಏನೋ ಹೇಳಿದರು. ಅದನ್ನಾಲಿಸಿ ಫಾತಿಮಾ(ರ) ಅಳತೊಡಗಿದರು. ಅವರು ಅಳುವುದನ್ನು ಕಂಡು ಪ್ರವಾದಿ(ಸ ಪುನಃ ಕರೆದು ಅವರ(ರ) ಕಿವಿಯಲ್ಲಿ ಮತ್ತೇನೋ ಹೇಳಿದರು. ಹ. ಫಾತಿಮಾ(ರ ಆಗ ನಗಲಾರಂಭಿಸಿದರು. ನಾನು ಕೇಳಿದೆ, "ಫಾತಿಮಾ(ರ)! ಎಲ್ ಪತ್ನಿಯರನ್ನು ಬಿಟ್ಟು ಪ್ರವಾದಿ(ಸ) ನಿಮ್ಮ ಬಳಿ ಹೇಳಿದ ರಹಸ್ಯವೇನು? ಪ್ರವಾದಿ(ಸ) ಅಲ್ಲಿಂದ ಹೊರ ನಡೆದರು. ಫಾತಿಮಾ(ರ) ಹೇಳಿದರು "ತಂದೆ ಹೇಳಿದ ರಹಸ್ಯವನ್ನು ಭೇದಿಸಲಾರೆ ಅದು ಅಮಾನತ ಆಗಿದೆ" ಎಂದರು.

ಪ್ರವಾದಿ(ಸ) ನಿಧನದ ಬಳಿಕ ನಾನು ಫಾತಿಮಾ(ರ)ರಲ್ಲಿ ವಿಚಾರಿಸಿದ ಹ. ಫಾತಿಮಾ(ರ) "ಈಗ ಹೇಳುತ್ತೇನೆ. ಪ್ರವಾದಿ(ಸ)ರು ಮೊದಲ ಬಾರಿ ತಮ್ಮ(ಸ) ನಿಧನ ವಾರ್ತೆ ತಿಳಿಸಿದರು. ಆಗ ನಾನು ದುಃಖ ತಾಳಲಾರ ಅತ್ತುಬಿಟ್ಟೆ. ನಂತರ "ಫಾತಿಮಾ ಲೋಕದ ಎಲ್ಲ ಸ್ತ್ರೀಯರ ನಾಯಕಿಯಾಗಲ ಬಯಸುವುದಿಲ್ಲವೇ? ಎಂದಾಗ ನನಗಾದ ದುಃಖವನ್ನು ಮರೆತು ನಕ್ಕುಬಿಟ್ಟೆ ಎಂದರು. ಮಲತಾಯಿ ಹಾಗೂ ಮಲ ಮಗಳ ಆತ್ಮೀಯ ಸಂಬಂ ಲೋಕದ ಎಲ್ಲಾ ತಾಯಿ-ಮಕ್ಕಳಿಗೂ ಮಾದರಿಯಾಗಿದೆ.

### ಕಿಡಿಗೇಡಿತನ:

ದುರಾಚಾರದ ಅರ್ಥ ಗ್ರಹಿಸಲು ಇಬ್ಲೀಸ್‌ನ ಉದಾಹರಣೆ ಸಾಕು. ಅಲ್ಲಾಹನು ಆದಮ್(ಅ)ರನ್ನು ಮಣ್ಣಿನಿಂದ ಸೃಷ್ಟಿಸಿ ತನ್ನ ಆತ್ಮವನ್ನು ಊದಿದನು. ಭೂಮ್ಯಾಕಾಶಗಳಲ್ಲಿರುವ ಸರ್ವರಿಗೂ ಆದಮರಿಗೆ ಸಾಷ್ಟಾಂಗವೆರಗುವಂತೆ ಆದೇಶಿಸಿದನು. ಎಲ್ಲರೂ ದೇವಾದೇಶ ಪಾಲಿಸಿದರು. ಆದರೆ ಇಬ್ಲೀಸನು ಅಹಂಕಾರದಿಂದ ಈ ಆಜ್ಞೆಯನ್ನು ಉಲ್ಲಂಘಿಸಿದನು.

"ನೀನೇಕೆ ಸಾಷ್ಟಾಂಗವೆರಗಲಿಲ್ಲ. ಎಂಬ ದೇವನ ಪ್ರಶ್ನೆಗೆ" "ನೀನು, ನನನ್ನು ಅಗ್ನಿಯಿಂದ ಸೃಷ್ಟಿಸಿದೆ, ಆದಮ್‌ನನ್ನು ಮಣ್ಣಿನಿಂದ ಸೃಷ್ಟಿಸಿದೆ, ನಾನು ಆತನಿಗಿಂತ ಶ್ರೇಷ್ಠವಾಗಿದ್ದೇನೆ" ಎಂದನು. ಅವನ ಅಹಂಕಾರಕ್ಕೆ ಅಲ್ಲಾಹನು ಶಪಿಸಿದನು. ಶೈತಾನನು ಅಲ್ಲಾಹನಲ್ಲಿ ಕ್ಷಮೆಯಾಚಿಸುವ ಬದಲು ಹತಾಶನಾದನು. ಅವನಿಗೆ ಆದಮರ ಮೇಲೆ ಅಸೂಯೆ ಹುಟ್ಟಿತು.

ಹಟಮಾರಿಯಾಗಿ ಅಲ್ಲಾಹನಲ್ಲಿ ಮಾತನಾಡ ತೊಡಗಿದ, "ನಾನು ನಿನ್ನ ಈ ಅತ್ಯಂತ ಪ್ರಿಯ ದಾಸನನ್ನು ನಿನ್ನ ಆಜ್ಞೋಲ್ಲಂಘನೆ ಮಾಡಲು ಪ್ರೇರೇಪಿಸುವೆ. ನಾಲ್ದೆಸೆಗಳಿಂದ ಆತನ ಮೇಲೆ ಸಹಾನುಭೂತಿ ತೋರಿಸಿ ಕೆಡುಕಿನೆಡೆಗೆ ಸೆಳೆಯುತ್ತೇನೆ. ನನ್ನಂತೆ ಶಪಿಸಲ್ಪಟ್ಟವನಾಗಿ ಮಾಡಿ ಬಿಡುತ್ತೇನೆ" ಎಂದನು. ಆದ್ದರಿಂದ ಮಾನವರು ಸದಾ ಕೆಡುಕು ಮಾಡುತ್ತಿರುವಂತೆ ಶೈತಾನನು ತನ್ನೆಲ್ಲಾ ಪ್ರಯತ್ನ ಜಾರಿಯಲ್ಲಿರಿಸಿದ್ದಾನೆ. ತನ್ನ ಬಲೆಗೆ ಬಿದ್ದ ಜನರಲ್ಲಿ ಈ 3 ಪಾಪಗಳನ್ನು ಜನರಿಂದ ಮಾಡಿಸುತ್ತಿರುತ್ತಾನೆ. 1) ಅಹಂಕಾರ. 2) ಅಸೂಯೆ. 3) ಅಲ್ಲಾಹನ ಕರುಣೆಯಿಂದ ಹತಾಶನಾಗುವುದು. ಈ ಮೂರು ಕೆಡುಕುಗಳನ್ನು ಮಾಡುತ್ತಿರುತ್ತಾನೆ. ಅಂತಿಮವಾಗಿ ಅವನು ಶೈತಾನನಾಗಿ ಬಿಡುತ್ತಾನೆ. ಈ ದುರಾಚಾರವು ಮದೀನದಲ್ಲಿ ತಾಂಡವವಾಡುತ್ತಿದ್ದಾಗ ಮಾನವರ ರೂಪದಲ್ಲಿ ದೊಡ್ಡ ದೊಡ್ಡ ಅಹಂಕಾರಿ ಶೈತಾನರನ್ನು ಸೃಷ್ಟಿಸಿತು. ಶೈತಾನನು ಅಂದು ಅಲ್ಲಾಹನ ಮುಂದೆ ಒಡ್ಡಿದ ಸವಾಲಿನಂತೆ ಪ್ರವಾದಿಯವರ(ಸ) ಮೇಲೆ ಕಪಟ ವಿಶ್ವಾಸಿಗಳು ಎರಗಿದರು. ಅಬ್ದುಲ್ಲಾ ಬಿನ್ ಉಬೈ ಕಪಟವಿಶ್ವಾಸಿಗಳ ಸರದಾರನಿಗಿದ್ದ ಅಹಂಕಾರ, ಅಸೂಯೆ, ಆಜ್ಞೋಲ್ಲಂಘನೆಯ ಸಾಕಾರಮೂರ್ತಿ. ಅವನ ಜೀವನಗಾಥೆಯು ಸ್ವಾರಸ್ಯಕರವೂ ರೋಮಾಂಚನವೂ ಪಾಠಬೋಧಕವೂ ಆಗಿದೆ.

### ಶೈತಾನನ ಕೆಲವು ಕುತಂತ್ರಗಳು.

### ಅಧಿಕಾರ ನಷ್ಟ:

ಮದೀನದಲ್ಲಿ ಔಸ್ ಮತ್ತು ಖಝ್ರಜ್ ಗೋತ್ರಗಳಿದ್ದವು. ಇವೆರಡೂ

ಗೋತ್ರಗಳು ಒಂದೇ ವ್ಯಕ್ತಿಯ ಜನಾಂಗವಾಗಿತ್ತು. ಈ ಗೋತ್ರಗಳ ಸಾವಿರಾರು ಜನರು ಮದೀನಾದಲ್ಲಿ ನೆಲೆಸಿದ್ದರು. ಅವು ತಮ್ಮ ವೈರಿ ಗೋತ್ರಗಳೊಂದಿಗೆ ಯುದ್ಧ ನಡೆಸುತ್ತಿದ್ದವು.

ಎರಡೂ ಗೋತ್ರದವರು ಪರಸ್ಪರ ಸಮಾಲೋಚನೆ ನಡೆಸಿ ಶತ್ರುತ್ವ ಮರೆತು ಓರ್ವ ನಾಯಕನನ್ನು ಆಯ್ಕೆ ಮಾಡಿ ಒಂದಾಗಲು ನಿರ್ಧರಿಸಿದವು. ಖಝ್ರುಜ್ ಗೋತ್ರದ ಶ್ರೀಮಂತ ವ್ಯಕ್ತಿ ಅಬ್ದುಲ್ಲಾ ಬಿನ್ ಉಬೈನನ್ನು ಸರದಾರನನ್ನಾಗಿ ಆಯ್ಕೆ ಮಾಡಿದರು. ಅಧಿಕಾರದ ಗದ್ದುಗೆಗೇರಲು ದಿನ ನಿಶ್ಚಯಿಸಲಾಯಿತು. ಅಬ್ದುಲ್ಲಾ ಬಿನ್ ಉಬೈ ಆ ಘಳಿಗೆಗಾಗಿ ಕಾತರದಿಂದ ಕಾಯುತ್ತಿದ್ದ.

ಅಷ್ಟರಲ್ಲಿ ವಿಧಿಯಾಟ ಬೇರೆಯೇ ಆಯಿತು. ಮದೀನಾದ ಬಹಳಷ್ಟು ನಿವಾಸಿಗಳು ಇಸ್ಲಾಮ್ ಸ್ವೀಕರಿಸಿದ್ದರು. ಅವರು ಪ್ರವಾದಿ(ಸ)ರನ್ನು ಮದೀನಾಕ್ಕೆ ಬರುವಂತೆ ಆಮಂತ್ರಿಸಿದರು. ಸಹಾಬಿಗಳೊಂದಿಗೆ ಪ್ರಚಾರ ಮಾಡಿದರು. ಸರಿಸುಮಾರು ಎಲ್ಲರೂ ಇಸ್ಲಾಮ್ ಸ್ವೀಕರಿಸಿದರು. ಪ್ರವಾದಿ(ಸ)ರು ಇಸ್ಲಾಮಿನ ನಾಯಕರಾದರು. ಅಬ್ದುಲ್ಲಾ ಬಿನ್ ಉಬೈನ ಕನಸು ನುಚ್ಚುನೂರಾಯಿತು.

ಸರದಾರನ ಪಟ್ಟವೂ ತಪ್ಪಿತು. ಸ್ವತಂತ್ರವಾಗಿ ಬದುಕುವುದು ಕಷ್ಟವಾಯಿತು. ದಾರಿಕಾಣದೆ ಈ ದುಷ್ಟನು ಮುನಾಫಿಕ(ಕರ್ಮಭ್ರಷ್ಟ)ನಾದ. ಮುಸ್ಲಿಮರ ಮಧ್ಯೆ ಇದ್ದುಕೊಂಡು ಅವರ ವಿರುದ್ಧವೇ ಕುತಂತ್ರಗಳನ್ನು ಮಾಡತೊಡಗಿದ.

**ಐತಿಹಾಸಿಕ ಹಿನ್ನೆಲೆ:**

ನೀಚ ವ್ಯಕ್ತಿಗಳು ಪರರ ಸದ್ಗುಣಗಳನ್ನು ಹಾಗೂ ತಮ್ಮ ದುರ್ಗುಣಗಳನ್ನು ಗುರುತಿಸುತ್ತಾರೆ. ಜೊತೆಗೆ ಆತನ ಒಳಿತು ಆತನನ್ನು ಉನ್ನತಕ್ಕೇರಿಸುತ್ತದೆ. ತನ್ನ ಕೆಡುಕು ತನಗೆ ನಷ್ಟವುಂಟು ಮಾಡುತ್ತದೆ ಎಂದೂ ತಿಳಿದಿರುತ್ತಾರೆ. ನೀಚ ವ್ಯಕ್ತಿಗಳು ಸಜ್ಜನರೊಂದಿಗೆ ಸೇರಿ ಸಜ್ಜನ ವ್ಯಕ್ತಿಯಾಗಿ ಮಾರ್ಪಡಲು ಖಂಡಿತ ಬಯಸಲಾರರು. ಬದಲಾಗಿ ಸಭ್ಯರನ್ನು ದಾರಿತಪ್ಪಿಸಲು ಸಂಚು ಹೂಡುತ್ತಲೇ ಇರುತ್ತಾರೆ. ಅದರಲ್ಲಿ ಯಶಸ್ಸು ದೊರಕದಿದ್ದರೆ ಅವರ ವಿರುದ್ಧ ಸುಳ್ಳಾರೋಪಗಳನ್ನು ಹಬ್ಬಿಸಲು ಆರಂಭಿಸುತ್ತಾರೆ. ಈ ದುರ್ಗುಣಗಳಿಂದ ಕೂಡಿದ ದುಷ್ಟ ವ್ಯಕ್ತಿಯೇ ಅಬ್ದುಲ್ಲಾ ಬಿನ್ ಉಬೈ.

ಅಲ್ಲಾಹನ ಧರ್ಮ, ಅಲ್ಲಾಹನ ಸಂದೇಶವಾಹಕರು ಹಾಗೂ ಸತ್ಯವಿಶ್ವಾಸಿಗಳ ವಿರುದ್ಧ ತನ್ನ ಕುಟಿಲ ಬುದ್ಧಿಯನ್ನು ತೋರಿಸಿದ. ಪ್ರವಾದಿ(ಸ) ಹಾಗೂ ಅರೇಬಿಯಾದ ಮುಶ್ರಿಕರ ನಡುವೆ ನಡೆದ ಪ್ರತಿಯೊಂದು ಸಂಘರ್ಷದಲ್ಲೂ ಕಪಟವಿಶ್ವಾಸಿ ಅಬ್ದುಲ್ಲಾ ಬಿನ್ ಉಬೈಯ ಪಾತ್ರವಿದೆ.

ಪ್ರವಾದಿ(ಸ) ಮದೀನಾಕ್ಕೆ ವಲಸೆ ಹೋದಾಗ ಮಕ್ಕಾದ ಮುಶ್ರಿಕರು ುಹಮ್ಮದ್(ಸ) ಹಾಗೂ ಅವರ ಸಂಗಡಿಗರನ್ನು ಮದೀನಾದಿಂದ ುಚ್ಚಾಟಿಸುವಂತೆ ಅಬ್ದುಲ್ಲಾ ಬಿನ್ ಉಬೈನನ್ನೇ ದಾಳವಾಗಿ ಬಳಸಿದರು. ವನು "ಇದಕ್ಕಿಂತ ಉತ್ತಮ ಉಪಾಯ ಸೂಚಿಸುತ್ತೇನೆಂದು ಹೇಳಿ", ೀವು ಈ ಕಡೆಯಿಂದ ಮದೀನಾದ ಮೇಲೆ ಆಕ್ರಮಣಮಾಡಿ, ಆ ಕಡೆಯಿಂದ ಾನು ಅವರ ಕೈಗಳನ್ನೆಳೆಯುತ್ತೇನೆ, ಅವರೆಲ್ಲರೂ ಮೃತ್ಯುವಿನ ಕೂಪಕ್ಕೆ ಳ್ಳಲ್ಪಡುವರು" ಎಂದ.

ಅಬ್ದುಲ್ಲಾ ಬಿನ್ ಉಬೈ ತನ್ನ ಕುತಂತ್ರಗಳನ್ನು ಮದೀನಾದ ಆಸುಪಾಸಿನ ುಹೂದಿಗಳ ಕಿವಿಗಳಲ್ಲೂ ಊದುತ್ತಿದ್ದನು. ಮಕ್ಕಾದ ಮುಶ್ರಿಕರು ಆತನ ಹಾಯದ ನಿರೀಕ್ಷೆಯಿಟ್ಟು ಪ್ರವಾದಿ(ಸ)ರ ವಿರುದ್ಧ ಯುದ್ಧಗಳನ್ನು ಸಾರಿದರು. ದರೆ ಪ್ರತೀ ಬಾರಿಯೂ ಪ್ರವಾದಿಯವರಿಗೆ(ಸ) ಜಯ ಲಭಿಸಿತು. ತದನಂತರ ಡೀ ಅರೇಬಿಯಾ ಮದೀನಾದ ಮೇಲೆ ಮುಗಿಬಿದ್ದಿತು. ಕಂದಕ (ಅಹ್‌ಝಾಬ್) ುದ್ಧ ನಡೆಯಿತು. ಅದು ಮುಸ್ಲಿಮರ ಪಾಲಿಗೆ ಅತ್ಯಂತ ಅಪಾಯಕಾರಿಯಾಗಿ ರಿಣಮಿಸಿತು. ಈ ಯುದ್ಧದಲ್ಲಿ ಮುಸ್ಲಿಮರಿಗೆ ಜಯ ಲಭಿಸಿತು.

ಅರಬರ ಎಲ್ಲಾ ಪ್ರಯತ್ನಗಳು ವಿಫಲಗೊಂಡಾಗ ಪ್ರವಾದಿ(ಸ)ರು ುಸ್ಲಿಮರನ್ನುದ್ದೇಶಿಸಿ ಈ ರೀತಿ ಹೇಳಿದರು,

"ಇನ್ನು ಮುಂದೆ ಕುರೈಶರು ನಿಮ್ಮ ಮೇಲೆ ದಾಳಿ ನಡೆಸಲಾರರು, ದಲಿಗೆ ನೀವೇ ಅವರ ಮೇಲೆ ದಾಳಿ ಮಾಡುವಿರಿ" ಪ್ರವಾದಿ(ಸ) ುಡಿದಂತೆಯೇ ಆಯಿತು. ಮಕ್ಕಾ ವಿಜಯವಾಯಿತು. ಇಡೀ ಅರಬ್ ಾಮ್ರಾಜ್ಯವು ಮುಸ್ಲಿಮರ ವಶವಾಯಿತು, ಇಸ್ಲಾಮಿನ ಪತಾಕೆ ಹಾರತೊಡಗಿತು.

ಇದೆಲ್ಲವನ್ನೂ ಕಂಡು ಅಬ್ದುಲ್ಲಾ ಬಿನ್ ಉಬೈನ ಹೃದಯ ನಂಜಿನಿಂದ ುದಿಯ ತೊಡಗಿತು. ಮುಸಲ್ಮಾನರ ಶಕ್ತಿಯನ್ನು ಬಲಪ್ರಯೋಗದಿಂದ ಮನಿಸಲು ಸಾಧ್ಯವಾಗದೆ ಇದ್ದಾಗ ಅವನು ಸುಳ್ಳಾರೋಪಕ್ಕಿಳಿದ. ಶೈತಾನನು ುತ್ಸರಿಗಳಿಂದ ಹಾಗೂ ಹತಾಶರಿಂದ ಮಾಡಿಸುವುದು ಇದನ್ನೇ. ಪಾಠ ೋಧಕವಾದ ಕೆಲವು ಘಟನೆಗಳನ್ನು ವಿವರಿಸಲಾಗಿದೆ.

**ಲವು ಪಾಠ ಬೋಧಕ ಘಟನೆಗಳು:**

ಅರೇಬಿಯಾದಲ್ಲಿ ಪುತ್ರನನ್ನು ದತ್ತು ಪಡೆಯುವ ಸಂಪ್ರದಾಯವಿತ್ತು. ಬ್ಬ ವ್ಯಕ್ತಿಯು ಮರಣಾನಂತರ ಆತನ ಆಸ್ತಿಗೆ ದತ್ತು ಪುತ್ರನು ಕ್ಕುದಾರನಾಗುತ್ತಿದ್ದ. ಆ ವ್ಯಕ್ತಿಯ ಸಂಬಂಧಿಕರು ಆತನ ಆಸ್ತಿಯಿಂದ ಂಚಿತರಾಗುತ್ತಿದ್ದರು. ಈ ಸಂಪ್ರದಾಯದಿಂದಾಗಿ ಸಮಾಜದಲ್ಲಿ ಗೊಂದಲ

ಸೃಷ್ಟಿಯಾಯಿತು. ಇದನ್ನು ತಡೆಗಟ್ಟಲು ಅಲ್ಲಾಹನು ಪ್ರವಾದಿಯವರಿಗೆ(ಸ
ಈ ರೀತಿ ಆದೇಶಿಸಿದನು.

"ಅಲ್ಲಾಹನು ಯಾವ ಮನುಷ್ಯನ ಶರೀರದೊಳಗೂ ಎರಡು ಹೃದಯಗಳನ್ನಿರಿಸಿಲ್ಲ
ನೀವು 'ಝಿಹಾರ್' ಮಾಡುವ ನಿಮ್ಮ ಪತ್ನಿಯರನ್ನು ಅವನು ನಿಮ್ಮ ತಾಯಂದಿರನ್ನಾಗಿ
ಮಾಡಲೂ ಇಲ್ಲ ಮತ್ತು ಅವನು ನಿಮ್ಮ ದತ್ತುಪುತ್ರರನ್ನು ನಿಮ್ಮ ಸ್ವಂತ ಪುತ್ರರನ್ನಾಗಿ
ಮಾಡಿರುವುದೂ ಇಲ್ಲ. ಇವೆಲ್ಲ ನೀವು ನಿಮ್ಮ ಬಾಯಿಯಿಂದ ಹೊರಡಿಸಿ ಬಿಡುವ
ಮಾತುಗಳು. ಆದರೆ ಅಲ್ಲಾಹನು ಕೇವಲ ಸತ್ಯವಾದುದನ್ನೇ ಹೇಳುತ್ತಾನೆ. ಅವನೆ
ಸನ್ಮಾರ್ಗದ ಕಡೆಗೆ ಮಾರ್ಗದರ್ಶನ ನೀಡುತ್ತಾನೆ. ದತ್ತು ಮಕ್ಕಳನ್ನು ಅವರ ಪಿತರಿ
ಸಂಬಂಧಿಸಿ ಕರೆಯಿರಿ. ಇದು ಅಲ್ಲಾಹನ ಬಳಿ ಹೆಚ್ಚು ನ್ಯಾಯೋಚಿತವಾ
ವಿಷಯವಾಗಿದೆ ಮತ್ತು ನಿಮಗೆ ಅವರ ಪಿತರು ಯಾರೆಂದು ತಿಳಿದಿರದಿದ್ದರೆ ಅವರ
ನಿಮ್ಮ ಧರ್ಮ ಸಹೋದರರು ಮತ್ತು ಮಿತ್ರರಾಗಿರುತ್ತಾರೆ. ನೀವು ತಿಳಿಯದೆ ಹೇ
ಬಿಟ್ಟ ಮಾತಿಗಾಗಿ ನಿಮ್ಮ ಮೇಲೇನೂ ದೋಷವಿಲ್ಲ. ಆದರೂ ನೀವ
ಉದ್ದೇಶಪೂರ್ವಕವಾಗಿ ಹೇಳಿದ ಮಾತಿನ ಬಗ್ಗೆ ಖಂಡಿತ ದೋಷವಿದೆ. ಅಲ್ಲಾಹನ
ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ." (ಕುರ್‌ಆನ್– 33:4–5

ಸಾವಿರಾರು ವರ್ಷಗಳಿಂದ ಆಚರಣೆಯಲ್ಲಿದ್ದ ಈ ಕೆಟ್ಟ ಸಂಪ್ರದಾಯವನ್ನು
ಅಲ್ಲಾಹನು ಈ ಮೂಲಕ ಅಂತ್ಯಗೊಳಿಸಿದ.

ಕಾರ್ಯತಃ ಈ ಸಂಪ್ರದಾಯವನ್ನು ಮುರಿಯುವುದು ಯಾರು ಎಂಬ
ಪ್ರಶ್ನೆ ಎದುರಾಯಿತು. ಇದಕ್ಕಾಗಿ ಅಲ್ಲಾಹನು ಪ್ರವಾದಿಯವರನ್ನೇ(ಸ) ಆಯ್
ಮಾಡಿದ. ಪ್ರವಾದಿ(ಸ)ರು ಪ್ರವಾದಿತ್ವ ಪ್ರಾಪ್ತಿಗೆ ಮುನ್ನ ಝೈದ್(ರ)ರನ್ನು
ದತ್ತು ಪುತ್ರನನ್ನಾಗಿ ಸ್ವೀಕರಿಸಿದ್ದರು. ಮದೀನಕ್ಕೆ ವಲಸೆ ಹೋದ ಬಳಿ
ತನ್ನ ಅತ್ತೆಯ ಮಗಳಾದ ಝೈನಬ್ ಬಿಂತಿ ಜಹಶ್(ರ)ರೊಂದಿಗೆ ಝೈದ್(ರ)
ವಿವಾಹ ನೆರವೇರಿತು. ಕಾರಣಾಂತರದಿಂದ ವಿಚ್ಛೇದನವು ನಡೆಯಿತು.

ಅಲ್ಲಾಹನು ಪ್ರವಾದಿ(ಸ)ರನ್ನುದ್ದೇಶಿಸಿ "ಓ ಪ್ರವಾದಿಯೇ(ಸ) ನೀವ
ಝೈನಬ್(ರ)ರನ್ನು ವಿವಾಹವಾಗಿರಿ. ಈ ಮೂಲಕ ದತ್ತುಪುತ್ರನ ಸಂಪ್ರದಾಯ
ಶಾಶ್ವತವಾಗಿ ತೊಡೆದು ಹೋಗಲಿ" ಎಂದು ಆದೇಶಿಸಿದನು. ಹೀಗೆ ಪ್ರವಾದಿ(ಸ)
ಝೈನಬ್(ರ)ರನ್ನು ವಿವಾಹವಾದರು.

ಈ ಘಟನೆಗೆ ಸಂಬಂಧಿಸಿ ಕಪಟವಿಶ್ವಾಸಿ ಅಬ್ದುಲ್ಲಾ ಬಿನ್ ಉಬೈ
ಹಾಗೂ ಅವನ ಅನುಯಾಯಿಗಳು ಗೇಲಿ ಮಾಡ ತೊಡಗಿದರು. ಯಹೂದಿಗಳು
ಆತನೊಂದಿಗೆ ದನಿಗೂಡಿಸಿದರು.

'ನೋಡಿರಿ, ಪ್ರವಾದಿ(ಸ) ತನ್ನ ಸೊಸೆಯನ್ನೇ ವಿವಾಹ ಮಾಡಿಕೊಂಡರು

ಂದು ಇಡೀ ಅರೇಬಿಯಾದಲ್ಲಿ ಅಪಪ್ರಚಾರ ಮಾಡಿದನು. ಆದರೆ ಅಲ್ಲಾಹನು ಮಾಜದಿಂದ ತೊಡೆದು ಹಾಕಲಿಚ್ಛಿಸಿದ ಅನಿಷ್ಟ ಸಂಪ್ರದಾಯವನ್ನು ಮೂಲೋತ್ಪಾಟನೆ ಮಾಡಿದನು. ಮುಸ್ಲಿಮ್ ಸಮುದಾಯ ಈ ಪದ್ಧತಿಯನ್ನು ಟ್ಟುನಿಟ್ಟಾಗಿ ಪಾಲನೆ ಮಾಡುತ್ತಾ ಬಂದಿದೆ. ಈ ಸಂಪ್ರದಾಯವು ಹಿಜರಿ ರಲ್ಲಿ ಅಂತ್ಯಗೊಂಡಿತು.

ಶಅಬಾನ್ ಹಿಜರಿ ಶಕೆ 6ರಲ್ಲಿ ಅಬ್ದುಲ್ಲಾ ಬಿನ್ ಉಬೈಗೆ ಮುಸ್ಲಿಮರ ಧ್ಯೆ ಒಡಕುಂಟು ಮಾಡುವ ಅವಕಾಶ ಲಭಿಸಿತು. ಮುಸ್ಲಿಮರ ಮೇಲೆ ಲ್ಲಾಹನ ಕೃಪೆ ಇಲ್ಲದಿರುತ್ತಿದ್ದರೆ ಆ ಕಪಟ ವಿಶ್ವಾಸಿಯು ಮುಸ್ಲಿಮರನ್ನು ರಸ್ಪರ ಕಚ್ಚಾಡಿಸಿಯೇ ಬಿಡುತ್ತಿದ್ದನು.

ಏನೆಂದರೆ ಅಂದು ಸ್ವತಃ ಪ್ರವಾದಿಯವರೇ(ಸ) ಯುದ್ಧಕ್ಕೆ ತೆರಳಿದ್ದರು. ಬ್ದುಲ್ಲಾ ಬಿನ್ ಉಬೈ ತನ್ನ ಸಂಗಡಿಗರ ಜೊತೆ ಹೊರಟನು. ಪ್ರವಾದಿ(ಸ) ಾಗೂ ಅವರ ಸಂಗಡಿಗರು ಮರ್‌ಯಸೀಲ್‌ನಲ್ಲಿ ತಂಗಿದರು. ಅಲ್ಲೇ ಉಮರ್(ರ)ರ ಗುಲಾಮ ಜಹ್‌ಜ ಹಾಗೂ ಖಝ್ರಜ್ ಗೋತ್ರದ ಸಹಾಯಕ ನಾನ್‌ನ ನಡುವೆ ನೀರಿನ ವಿಚಾರದಲ್ಲಿ ಜಗಳ ಆರಂಭವಾಯಿತು. ಹಾಯಕ್ಕಾಗಿ ಸಿನಾನ್ ಅನ್ಸಾರರನ್ನು ಹಾಗೂ ಜಹ್‌ಜ ಮುಹಾಜಿರರನ್ನು ಾಗಿ ಕರೆದರು. ಇತ್ತಂಡಗಳಿಂದ ಜನ ಜಮಾಯಿಸಿದರು. ಆ ಜಗಳವನ್ನು ತ್ಯರ್ಥಗೊಳಿಸಲಾಯಿತು. ಆದರೆ ಅಬ್ದುಲ್ಲಾ ಬಿನ್ ಉಬೈ ಆ ಕ್ಷುಲ್ಲಕ ಚಾರವನ್ನು ದೊಡ್ಡದು ಮಾಡಿದನು. ಮುಹಾಜಿರರು ನಮ್ಮ ಮೇಲೆರಗಿದ್ದಾರೆ, ಮ್ಮ ಶತ್ರುಗಳಾಗಿ ಮಾರ್ಪಟ್ಟಿದ್ದಾರೆ. ನಮ್ಮ ಮತ್ತವರ ಉದಾಹರಣೆ ಹೇಗೆಂದರೆ ನಾಯಿಗಳನ್ನು ಸಾಕಿ ಅವುಗಳೇ ನಮ್ಮನ್ನು ಕಚ್ಚಿ ತಿಂದಂತೆ. ಇದೆಲ್ಲ ನಿಮ್ಮ ಾರಣಗಳಿಂದಲೇ ಸಂಭವಿಸಿದೆ. ನೀವು ಸ್ವತಃ ಅವರಿಗೆ ಇಲ್ಲಿ ಆಶ್ರಯ ೀಡಿದ್ದೀರಿ. ಆಸ್ತಿ-ಪಾಸ್ತಿಯಲ್ಲಿ ಪಾಲುದಾರರನ್ನಾಗಿ ಮಾಡಿದ್ದೀರಿ" ಎಂದು ಬ್ದುಲ್ಲಾ ಬಿನ್ ಉಬೈ ಅನ್ಸಾರಿಗಳನ್ನು ಉದ್ರೇಕಗೊಳಿಸಿದನು.

"ಮದೀನಾ ತಲುಪಿದೊಡನೆ ನಮ್ಮೊಂದಿಗಿರುವ ಗೌರವಸ್ಥರು, ನೀಚರನ್ನು ೊರದಬ್ಬುವರು" ಎಂದು ಪ್ರಮಾಣ ಮಾಡಿದನು. ಪ್ರವಾದಿಯವರಿಗೆ(ಸ) ಈ ವಿಚಾರ ತಿಳಿದಾಗ ಹ. ಉಮರ್(ರ) ಈ ದುಷ್ಟನನ್ನು ಕೊಂದು ಡಬೇಕೆಂದು ಸಲಹೆ ನೀಡಿದರು. ಆ ಪ್ರವಾದಿಯವರು(ಸ), "ಉಮರ್(ರ)! ಗತ್ತು ಏನೆನ್ನಬಹುದು. ಮುಹಮ್ಮದ್(ಸ) ತನ್ನ ಸಂಗಡಿಗರನ್ನು ೊಲ್ಲುತ್ತಿದ್ದಾನೆಂದು ಹೇಳಬಹುದಲ್ಲವೇ? ಆ ಕೂಡಲೇ ಮರ್‌ಯಸೀಲ್‌ನಿಂದ ಂತೆರಳುವಂತೆ ಆದೇಶಿಸಿದರು. ದಾರಿ ಮಧ್ಯೆ ಮದೀನಾದ ಅನ್ಸಾರರಲ್ಲಿ ೀಮಂತರಾಗಿದ್ದ ಉಸೈದ್ ಬಿನ್ ಹುದೈರ್(ರ) ಹೇಳಿದರು. "ಓ

ಪ್ರವಾದಿಯವರೇ(ಸ) ತಾವಿಂದು ಅಕಾಲದಲ್ಲಿ ಹಿಂತಿರುಗುವ ಆದೇಶ ಹೊರಡಿ
ಬಿಟ್ಟಿದ್ದೀರಿ." ಪ್ರವಾದಿ(ಸ) ಹೇಳಿದರು, "ನಿಮ್ಮ ಒಡೆಯ ಏನು ಹೇಳಿದ್ದಾನೆಂ
ನಿಮಗೆ ತಿಳಿದಿಲ್ಲವೇ?" "ಯಾರವರು?" ಎಂದು ಉಸೈದ್ ಪ್ರಶ್ನಿಸಿದರು.

"ಅಬ್ದುಲ್ಲಾ ಬಿನ್ ಉಬೈ" ಎಂದು ಪ್ರವಾದಿ(ಸ)ರು ಹೇಳಿದರು. ಆ
ಉಸೈದ್(ರ) ಹೇಳಿದರು, "ಪ್ರವಾದಿಯವರೇ(ಸ) ನೀವು ಆತನ ವಿಚಾರವ
ಬಿಟ್ಟುಬಿಡಿರಿ. ನೀವು(ಸ) ಮದೀನಾಕ್ಕೆ ಬರುವ ಮೊದಲು ಜನರು ಈತನ
ಮದೀನಾದ ಸರದಾರನನ್ನಾಗಿ ಮಾಡುವ ತೀರ್ಮಾನ ಮಾಡಿದ್ದರು. ಅಧಿಕಾ
ಹಸ್ತಾಂತರದ ಸಿದ್ಧತೆಯೂ ನಡೆದಿತ್ತು. ನೀವು ಬಂದೊಡನೆ ಆತನ ಸಕ
ಕುತಂತ್ರಗಳಿಗೆ ತಣ್ಣೀರೆರಚಿದಂತಾಯಿತು. ಆ ಅವಿವೇಕಿ ಅಸೂಯೆಯಿಂ
ಹೀಗೆ ವರ್ತಿಸುತ್ತಿದ್ದಾನೆ

**ಹ. ಆಯಿಶಾ(ರ)ರ ಮೇಲೆ ಅಪವಾದ:**

ಮುಸ್ಲಿಮರಲ್ಲಿ ಇಬ್ಬರು ಪ್ರಭಾವಿ ವ್ಯಕ್ತಿಗಳು ಪ್ರವಾದಿ(ಸ)ರ ಆ
ಸಲಹೆಗಾರರು. ಅವರೀರ್ವರ ಸಹಕಾರದಿಂದಲೇ ಮುಸ್ಲಿಮರ ವ್ಯವಸ್ಥೆಯ
ಬದಲಾಗಿದೆ ಎಂಬ ವಿಚಾರವನ್ನು ಅಬ್ದುಲ್ಲಾ ಬಿನ್ ಉಬೈ ಅರಿತಿದ್ದನ
ಒಂದು ವೇಳೆ ಅವರಿಬ್ಬರನ್ನೂ ಪ್ರವಾದಿಯವರ(ಸ) ವಿರುದ್ಧ ಜಗಳ ಕಾಯಿಸಿದ
ಮುಸ್ಲಿಮರಲ್ಲಿ ಅನೈಕ್ಯತೆ ಉಂಟಾಗಬಹುದೆಂದು ಯೋಚಿಸಿದನು. ಆ ಇಬ್ಬ
ಆಪ್ತ ಸಲಹೆಗಾರರು ಹ. ಅಬೂಬಕರ್(ರ) ಮತ್ತು ಹ. ಉಮರ್(ರ
ಆಗಿದ್ದರು.

ಪ್ರವಾದಿ(ಸ) ಪತ್ನಿಯಾದ ಹ. ಆಯಿಶಾ(ರ)ರ ತಂದೆ ಹಾಗ
ಇನ್ನೋರ್ವ ಪತ್ನಿ ಹಫ್ಸಾ(ರ)ರ ತಂದೆ. ಈ ಆಪ್ತ ಸಲಹೆಗಾರ
ಪ್ರವಾದಿಯವರ(ಸ) ಪತ್ನಿಯರ ಪಿತರೂ ಆಗಿದ್ದರು.

ಈ ವಿಚಾರವನ್ನು ಮುಂದಿಟ್ಟುಕೊಂಡು ಅಬ್ದುಲ್ಲಾ ಬಿನ್ ಉ
ಕ್ಷೋಭೆ ಹಬ್ಬಿಸಿದನು. ಈ ಕ್ಷೋಭೆಯಿಂದ ಇಸ್ಲಾಮೀ ಸಮಾಜವು ನಲುಗಿತ
ಒಂದು ವೇಳೆ ಅಂದು ಮುಸ್ಲಿಮರ ಮೇಲೆ ಅಲ್ಲಾಹನ ಕೃಪೆ ಇಲ್ಲದಿರುತ್ತಿದ್ದ
ಸಹಾಬಿಗಳ(ರ) ಯುಕ್ತಿ ಹಾಗೂ ಬುದ್ಧಿವಂತಿಕೆಯಿಂದ ಸಮ
ಬಗೆಹರಿಸದಿರುತ್ತಿದ್ದರೆ, ಮದೀನಾದಲ್ಲಿ ಅಂತಃಕಲಹಗಳು ಭುಗಿದೇಳುತ್ತಿದ್ದ
ಆ ಕ್ಷೋಭೆಗೆ ಕಾರಣ ಆಯಿಶಾ(ರ)ರ ಮೇಲೆ ಹೊರಿಸಿದ ಅಪವಾದವಾಗಿತ

ಈ ಕುರಿತು ಸ್ವತಃ ಆಯಿಶಾ(ರ)ರೇ ಹೇಳುತ್ತಾರೆ, "ಪ್ರವಾದಿ(ಸ) ಯಾ
ಸಂದರ್ಭದಲ್ಲಿ ಪತ್ನಿಯರಲ್ಲಿ ಒಬ್ಬರನ್ನು ಜೊತೆಗೆ ಕರೆದುಕೊಂಡು ಹೋಗುತ್ತಿದ್ದರ
ಅದೃಷ್ಟ ಚೀಟಿ ಎತ್ತುವ ಮೂಲಕ ನಿರ್ಧರಿಸಲಾಗುತ್ತಿತ್ತು. ಬನೂ ಮುಸ್ತಲಿ

ಯುದ್ಧಕ್ಕೆ ಹೊರಟ ಸಂದರ್ಭದಲ್ಲಿ ಅದೃಷ್ಟ ಚೀಟಿ ನನ್ನ ಪಾಲಿಗೆ ಬಂತು. ನಾನು ಪ್ರವಾದಿಯವರ(ಸ) ಸಂಗಡ ಹೊರಟೆ. ಯುದ್ಧ ಮುಗಿಸಿ ಮದೀನಾಕ್ಕೆ ಮರಳಿ ಬರುವ ಸಂದರ್ಭದಲ್ಲಿ ರಾತ್ರಿ ವೇಳೆ ನಾವೆಲ್ಲರೂ ಒಂದೆಡೆ ತಂಗಿದ್ದೆವು. ಪುನಃ ಕತ್ತಲೆಯಲ್ಲೇ ಪ್ರಯಾಣ ಮುಂದುವರೆಯಿತು. ಕೂಡಲೇ ಹೊರಡಬೇಕೆಂದು ಡಂಗುರ ಸಾರಲಾಯಿತು. ನಾನು ಎದ್ದವಳೇ ಸ್ವಲ್ಪ ದೂರದಲ್ಲಿ ಶೌಚಕ್ಕೆ ಹೋದೆ. ಮರಳಿ ಬಂದಾಗ ಕೊರಳಿನ ಸರ ಕಾಣೆಯಾಗಿತ್ತು. ಓಡಿ ಹೋಗಿ ಸರ ಹುಡುಕಲಾರಂಭಿಸಿದೆ. ಆ ವೇಳೆಗೆ ಯಾತ್ರಾತಂಡ ಅಲ್ಲಿಂದ ತೆರಳಿತ್ತು. ಪ್ರಯಾಣ ಆರಂಭವಾಗುವ ಮುನ್ನ ನಾನು ನನ್ನ ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳುತ್ತಿದ್ದೆ ಹಾಗೂ ನಾಲ್ವರು ಪಲ್ಲಕ್ಕಿಯನ್ನು ಎತ್ತಿ ಒಂಟೆ ಮೇಲಿರಿಸುತ್ತಿದ್ದರು. ಅಂದು ಸ್ತ್ರೀಯರು ವಿಶೇಷವಾಗಿ ಆಹಾರ ಸೇವನೆ ಮಾಡದ ಕಾರಣ ಅಷ್ಟೊಂದು ಭಾರವಿರುತ್ತಿರಲಿಲ್ಲ. ನನ್ನ ಪಲ್ಲಕ್ಕಿ ಎತ್ತುವಾಗ ನಾನು ಪಲ್ಲಕ್ಕಿಯಲ್ಲಿಲ್ಲದಿರುವುದರ ಬಗ್ಗೆ ವಾಹಕರಿಗೆ ಅರಿವಾಗಲಿಲ್ಲ. ಖಾಲಿ ಪಲ್ಲಕ್ಕಿಯನ್ನೇ ಒಂಟೆಗೇರಿಸಿ ತೆರಳಿದರು. ನಾನು ಸರ ತೆಗೆದು ಹಿಂದಿರುಗಿದಾಗ ಅಲ್ಲಿ ಯಾರೂ ಇರಲಿಲ್ಲ. ಅವರಿಗೆ ನಾನಿಲ್ಲದ ಅರಿವಾಗಿ ಹಿಂದಿರುಗುವ ನಿರೀಕ್ಷೆಯಲ್ಲಿ ಚದ್ದರ ಹೊದ್ದು ಮಲಗಿದೆ. ನಿದ್ದೆ ಆವರಿಸಿತು. ಸಫ್ವಾನ್ ಬಿನ್ ಮುಅತ್ತಲ್ ಸಲಮ(ರ) (ಬದ್ರ್ ಯುದ್ಧದಲ್ಲಿ ಪಾಲ್ಗೊಂಡಿದ್ದ ಸಹಾಬಿವರ್ಯರು). ಯಾತ್ರಾತಂಡ ತೆರಳಿದ ಬಳಿಕ ಯಾವುದಾದರೂ ಸಾಮಗ್ರಿಗಳು ಉಳಿದು ಬಿಟ್ಟಿದ್ದರೆ ಅಥವಾ ಯಾರಾದರೂ ದಾರಿ ಮಧ್ಯೆಯೇ ಉಳಿದು ಬಿಟ್ಟಿದ್ದರೆ ಅಂತಹವರ ರಕ್ಷಣೆಗಾಗಿ ಪ್ರವಾದಿ(ಸ) ಇವರನ್ನು ನೇಮಿಸಿದ್ದರು.

ಅದೇ ರೀತಿ ಅಂದು ಕೂಡ ಸಫ್ವಾನ್ ಬಿನ್ ಮುಅತ್ತಲ್(ರ)ರು ತಮ್ಮ ಕಾರ್ಯದಲ್ಲಿ ನಿರತರಾಗಿದ್ದರು. ಬೆಳಗಿನ ಜಾವ ನಾನು ಮಲಗಿದ್ದ ಸ್ಥಳದಿಂದ ಅವರು ದಾಟುತ್ತಿರುವಾಗ ನನ್ನನ್ನು ಗಮನಿಸಿದರು. ಅವರಿಗೆ ನನ್ನ ಪರಿಚಯ ಸಿಕ್ಕಿತು. ಹೇಗೆಂದರೆ ಪರ್ದಾದ ಆದೇಶ ಬರುವುದಕ್ಕಿಂತ ಮುಂಚೆ ಅವರು ನನ್ನನ್ನು ನೋಡಿದ್ದರು. ತಕ್ಷಣ ಒಂಟೆ ನಿಲ್ಲಿಸಿ "ಇನ್ನಾಲಿಲ್ಲಾಹಿ ವ ಇನ್ನ ಇಲೈಹಿ ರಾಜಿಊನ್" ಪ್ರವಾದಿಯವರ(ಸ) ಪತ್ನಿ ಇಲ್ಲೇ ಉಳಿದು ಬಿಟ್ಟರು ಎಂದರು. ಅವರ ಸ್ವರ ಕೇಳಿ ನನಗೆ ಎಚ್ಚರವಾಯಿತು. ಕೂಡಲೇ ವಸ್ತ್ರದಿಂದ ಮುಖ ಮುಚ್ಚಿಕೊಂಡೆ. ಅವರು ನನ್ನೊಂದಿಗೆ ಒಂದು ಮಾತನ್ನೂ ಆಡಲಿಲ್ಲ. ತಮ್ಮ ಒಂಟೆಯನ್ನು ತಂದು ನನ್ನ ಬಳಿ ಕೂರಿಸಿ ದೂರ ಸರಿದು ನಿಂತರು. ನಾನು ಒಂಟೆಯೇರಿ ಕುಳಿತುಕೊಂಡೆ. ಅವರು ಒಂಟೆಯ ಕಡಿವಾಣ ಹಿಡಿದು ಮುಂದೆ ಸಾಗಿದರು. ಮಧ್ಯಾಹ್ನದ ವೇಳೆ ಒಂದೆಡೆ ತಂಗಿದ್ದ ಸೇನೆಯ ಜೊತೆ ನಾವೂ ಸೇರಿಕೊಂಡೆವು. ನಾನು ಪಲ್ಲಕ್ಕಿಯಲ್ಲಿಲ್ಲದ ಸಂಗತಿ ಯಾರಿಗೂ

ತಿಳಿದಿರಲಿಲ್ಲ. ಆದರೆ ಅಪವಾದ ಹೊರಿಸುವವರು ಅದನ್ನು ಹಬ್ಬಿಸಿಯೇ ಬಿಟ್ಟರು. ಅದರ ಸೂತ್ರಧಾರಿ ಅಬ್ದುಲ್ಲಾ ಬಿನ್ ಉಬೈ. ನನ್ನ ವಿರುದ್ಧ ಅಪವಾದ ಹಬ್ಬಿಸಿದ ಮಾಹಿತಿ ನನಗೆ ತಿಳಿದಿರಲಿಲ್ಲ.

ಮದೀನಾ ತಲುಪಿದಾಗ ನನ್ನ ಆರೋಗ್ಯ ಹದಗೆಟ್ಟಿತು. ಒಂದು ತಿಂಗಳವರೆಗೆ ಹಾಸಿಗೆಯಲ್ಲೇ ಮಲಗಿದ್ದೆ. ಆ ಅಪವಾದದ ಸುದ್ದಿಯು ಎಲ್ಲೆಡೆಯೂ ಹರಡಿತ್ತು. ಪ್ರವಾದಿಯವರ(ಸ) ಗಮನಕ್ಕೂ ಬಂದಿತ್ತು. ನನಗೆ ಮಾತ್ರ ಇದ್ಯಾವುದರ ಬಗ್ಗೆಯೂ ತಿಳಿದಿರಲಿಲ್ಲ. ಆದರೆ ಪದೇ ಪದೇ ಒಂದು ವಿಚಾರವು ನನ್ನನ್ನು ಕಾಡುತ್ತಿತ್ತು. ನನಗೆ ಅಸೌಖ್ಯ ಉಂಟಾದಾಗ ಪ್ರವಾದಿಯವರು(ಸ) ವಿಶೇಷ ಕಾಳಜಿ ವಹಿಸುತ್ತಿದ್ದರು. ಆದರೆ ಈ ಬಾರಿ ನನ್ನ ಬಳಿಗೆ ಬಾರದೆ ಮನೆಯ ಹೊರಗೆ ನಿಂತು ಅವಳು ಹೇಗಿದ್ದಾಳೆಂದು ಮಾತ್ರ ವಿಚಾರಿಸಿ ಹೋಗುವುದು, ನನಗೆ ಸಂದೇಹ ಉಂಟು ಮಾಡಿತು ಅವರ ಅನುಮತಿ ಮೇರೆಗೆ ನಾನು ತವರಿಗೆ ಹೋದೆ.

ಕೆಲದಿನಗಳಲ್ಲಿ ನಾನು ಸ್ವಲ್ಪ ಗುಣಮುಖಳಾದೆ. ಒಂದು ರಾತ್ರಿ ಶೌಚಕ್ಕೆಂದು ಮದೀನಾದಿಂದ ಸ್ವಲ್ಪ ದೂರ ಹೋದೆ. ಆಗ ನಮ್ಮ ಮನೆಯಲ್ಲಿ ಶೌಚಾಲಯವಿರಲಿಲ್ಲ. ನಾವು ಕಾಡಿನ ಮಧ್ಯೆ ಹೋಗುತ್ತಿದ್ದೆವು. ಅಂದು ರಾತ್ರಿ ಮಿಸ್ತಹ್ ಬಿನ್ ಅಸಾಸರ ತಾಯಿ ನನ್ನ ಸಂಗಡವಿದ್ದರು. ಉಮ್ಮು ಮಿಸ್ತಹ್ ನನ್ನ ತಂದೆಯ ಸೋದರ ಸಂಬಂಧಿ ಸಹೋದರಿಯಾಗಿದ್ದರು (ಅವರ ಕುಟುಂಬದ ಖರ್ಚು-ವೆಚ್ಚ ಸ್ವತಃ ಅಬೂಬಕರ್(ರ) ನೋಡಿಕೊಳ್ಳುತ್ತಿದ್ದರು.) ದಾರಿ ಮಧ್ಯೆ ಅವರ ವಸ್ತ್ರ ತೊಡಕಿ ಅವರು ಬೀಳುವಂತಾದರು. ಅವರು "ಮಿಸ್ತಹ್ ನಾಶವಾಗಲಿ" ಎಂದು ಹಿಡಿ ಶಾಪ ಹಾಕಿದರು. ಆಗ ನಾನು "ನೀವು ಎಂತಹ ತಾಯಿ? ಸ್ವಂತ ಮಗನಿಗೆ ಶಾಪ ಹಾಕುವುದೇ? ಅದಲ್ಲದೇ ಮಿಸ್ತಹ್‌ರು ಬದ್ರ್ ಯುದ್ಧದಲ್ಲಿ ಮುಶ್ರಿಕರ ವಿರುದ್ಧ ಹೋರಾಡಿದ ಸಹಾಬಿಯಲ್ಲವೇ" ಎಂದೆ. ಆಗ ಅವರು "ಮಗಳೇ, ಆತನ ಕುಪ್ರಚಾರದ ಬಗ್ಗೆ ನಿನಗೆ ಅರಿವಿಲ್ಲ" ಎಂದರು. ಆಗ ನಾನು ಏನೆಂದು ಪ್ರಶ್ನಿಸಿದೆ. ಆಗ ಅವರು "ನಿನ್ನನ್ನು ಸಫ್ವಾನ್‌ರೊಂದಿಗೆ ಸಂಬಂಧ ಕಲ್ಪಿಸಿ ಅಪವಾದ ಮಾಡಿದ್ದಾನೆ" ಎಂದರು. ಆ ಮಾತು ಕೇಳಿದ ನನಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಅಲ್ಲಿಂದ ನೇರವಾಗಿ ಮನೆಗೆ ಹಿಂದಿರುಗಿದೆ. ಅಂದು ಇಡೀ ರಾತ್ರಿ ಕಣ್ಣೀರು ಸುರಿಸುತ್ತಾ ಕಳೆದೆ.

ಸುಮಾರು ಒಂದು ತಿಂಗಳು ಈ ಅಪವಾದದ ಚರ್ಚೆಗಳು ನಡೆದವು. ಪ್ರವಾದಿಯವರು(ಸ) ಚಿಂತಾಕ್ರಾಂತರಾದರು. ಆ ಎಲ್ಲಾ ದಿನಗಳು ನನ್ನ ಪಾಲಿಗೆ ದುಃಖದ ದಿನಗಳಾಗಿದ್ದುವು. ನಿತ್ಯ ಅಳುವುದೇ ಆಯಿತು. ನನ್ನ

ಹೆತ್ತವರು ದುಃಖಿತಪ್ತರಾದರು. ಈ ಸಂದರ್ಭದಲ್ಲಿ ಪ್ರವಾದಿ(ಸ) ತನ್ನ ಆಪ್ತ ಸಂಗಾತಿಗಳೊಡನೆ ಸಮಾಲೋಚನೆ ನಡೆಸುತ್ತಿದ್ದರು. ಹ. ಉಸಾಮ ಬಿನ್ ಝೈದ್(ರ)ರು ನನ್ನ ಪರವಾಗಿ ಮಾತನಾಡಿದರು, "ಓ ಪ್ರವಾದಿಗಳೇ(ಸ), ನಿಮ್ಮ ಪತ್ನಿಯರಲ್ಲಿ ಒಳಿತಿನ ಹೊರತು ಬೇರೇನೂ ನಾವು ಕಂಡಿಲ್ಲ ಎಂದರು. ತಾಯಿ ಆಯಿಶಾ(ರ)ರ ವಿರುದ್ಧ ಎದ್ದಿರುವ ಅಪವಾದವು ಸುಳ್ಳಾಗಿದೆ" ಎಂದರು.

ಪ್ರವಾದಿ(ಸ) ಹ. ಅಲೀ(ರ)ಯವರನ್ನು ಪ್ರಶ್ನಿಸಿದಾಗ, ಅಲೀ(ರ) ಹೀಗೆಂದರು, "ಒಂದು ವೇಳೆ ಪ್ರವಾದಿಯವರು(ಸ) ಆ ವದಂತಿಗಳಿಂದ ಪ್ರಭಾವಿತರಾದರೆ ತಮಗೆ(ಸ) ನಾಡಿನಲ್ಲಿ ಬೇರೆ ಸ್ತ್ರೀಯರೂ ಇದ್ದಾರೆ, ಅವರ ಸ್ಥಾನದಲ್ಲಿ ಬೇರೆ ವಿವಾಹ ಮಾಡಿಕೊಳ್ಳಬಹುದೆಂದರು. ಆದರೆ ಆಯಿಶಾ(ರ)ರ ಸೇವಕಿಯನ್ನೊಮ್ಮೆ ವಿಚಾರಿಸಿದರೆ ಉತ್ತಮ" ಎಂದರು.

ಆಗ ಪ್ರವಾದಿಯವರು(ಸ) ಸೇವಕಿ ಬರೀರಾಳನ್ನು ಕರೆದು ವಿಚಾರಿಸಿದರು, "ನೀವು ಆಕೆಯಲ್ಲಿ(ರ) "ಸಂದೇಹಗಳನ್ನು ಕಂಡಿದ್ದೀರಾ?" ಬರೀರಾ ಹೇಳಿದಳು." ನಿಮ್ಮನ್ನು ನ್ಯಾಯದೊಂದಿಗೆ ಕಳುಹಿಸಿದ ಆ ಅಲ್ಲಾಹನಾಣೆ! ನಾನು ಅವರಲ್ಲಿ(ರ) ಶುಭಕರವಲ್ಲದ ಯಾವುದೇ ವಿಚಾರವನ್ನು ಕಂಡಿಲ್ಲ. ಕೆಲವೊಮ್ಮೆ ನಾನು ಹಿಟ್ಟು ಕಲಸಿಟ್ಟು ಅದನ್ನು ನೋಡಿಕೊಳ್ಳಲು ಹೇಳಿ ಬೇರೆ ಕೆಲಸಕ್ಕೆ ಹೋಗುತ್ತಿದ್ದಾಗ ಅವರು(ರ) ಅಲ್ಲೇ ನಿದ್ದೆಗೆ ಜಾರಿ ಬಿಡುತ್ತಿದ್ದರು ಮತ್ತು ಆಡು ಬಂದು ಹಿಟ್ಟನ್ನು ತಿಂದು ಬಿಡುತ್ತಿತ್ತು. ಇದರ ಹೊರತು ಅವರ ಮೇಲೆ ಆರೋಪ ಮಾಡುವಂತಹ ಯಾವ ವಿಷಯವನ್ನೂ ನಾನು ಕಂಡಿಲ್ಲ" ಎಂದರು.

ಪ್ರವಾದಿ(ಸ) ತಮ್ಮ ಇತರೆ ಪತ್ನಿಯರಲ್ಲಿ ವಿಚಾರಿಸಿದರು. ಪ್ರಿಯ ಪತ್ನಿ ಆಯಿಶಾ(ರ)ರನ್ನು ಕೀಳಾಗಿಸಲು ಸವತಿಯರಿಗೆ ಇದೊಂದು ಸದಾವಕಾಶವಿತ್ತು. ಆದರೆ ಹಾಗಾಗದೆ ವಿಷಯ ಕೇಳುತ್ತಲೇ ಅವರೆಲ್ಲರೂ ಅಪವಾದದ ಶಬ್ದ ಕೇಳಲಾಗದೆ ತಮ್ಮ ಕಿವಿಗಳಿಗೆ ಬೆರಳು ತುರುಕಿಸಿಕೊಂಡರು. "ಆಯಿಶಾ(ರ)ರಲ್ಲಿ ಒಳಿತಲ್ಲದೇ ಬೇರೇನನ್ನೂ ನಾವು ಕಂಡಿಲ್ಲ" ಎಂದರು.

ಪ್ರವಾದಿಯವರು(ಸ) ವೇದಿಕೆಯೇರಿ ಮುಸ್ಲಿಮರನ್ನುದ್ದೇಶಿಸಿ ಹೀಗೆ ಹೇಳಿದರು, "ಓ ಮುಸ್ಲಿಮರೇ! ನನ್ನ ಪತ್ನಿಯ ಬಗ್ಗೆ ಅಪವಾದ ಹಬ್ಬಿಸಿ ನನ್ನನ್ನು ದ್ರೋಹಿಸುತ್ತಿರುವವರನ್ನು ಹದ್ದುಬಸ್ತಿನಲ್ಲಿಡಲು ಯಾರೂ ಇಲ್ಲವೇ? ಅಲ್ಲಾಹನಾಣೆ ನಾನು ನನ್ನ ಪತ್ನಿಯಲ್ಲೂ ಹಾಗೂ ಆರೋಪಿತ ವ್ಯಕ್ತಿಯಲ್ಲೂ ಯಾವ ಕೆಡುಕನ್ನೂ ಕಂಡಿಲ್ಲ. ಅವರು ನಾನಿಲ್ಲದ ಸಂದರ್ಭದಲ್ಲಿ ಒಮ್ಮೆಯೂ ನನ್ನ ಮನೆಗೆ ಕಾಲಿಟ್ಟಿಲ್ಲ" ಎಂದರು.

ಇದನ್ನು ಕೇಳಿದೊಡನೆ ಉಸ್ಯೆದ್ ಬಿನ್ ಹುದ್ಯೆದ್ (ಔಸ್ ಗೋತ್ರದ ಶ್ರೀಮಂತ ವ್ಯಕ್ತಿ) ಎದ್ದು ನಿಂತು "ಪ್ರವಾದಿಗಳೇ(ಸ)! ಒಂದು ವೇಳೆ ಆ ವ್ಯಕ್ತಿ ಔಸ್ ಗೋತ್ರದವನಾಗಿದ್ದರೆ ನಾನು ಆತನ ಕೊರಳು ಕೊಯ್ಯುತ್ತೇನೆ. ಒಂದು ವೇಳೆ ಆತ ಖಝ್ರಜ್ ಗೋತ್ರಜನಾಗಿದ್ದರೆ ನೀವು(ಸ) ಅಪ್ಪಣೆ ನೀಡಿದರೆ ಸಾಕು ನಾನದನ್ನು ಪಾಲಿಸುತ್ತೇನೆ" ಎಂದರು.

ಸಅದ್(ರ)ರ ಮಾತುಗಳನ್ನು ಕೇಳಿದ ಹ. ಸಅದ್ ಬಿನ್ ಉಬಾದ(ರ) (ಖಝ್ರಜ್ ಗೋತ್ರದ ಶ್ರೀಮಂತ ವ್ಯಕ್ತಿ) ಎದ್ದು ನಿಂತು, "ನೀವು ಸುಳ್ಳು ಹೇಳುತ್ತೀರಿ. ನೀವು ಖಂಡಿತವಾಗಿಯೂ ಆತನನ್ನು ಕೊಲ್ಲಲಾರಿರಿ. ಆ ವ್ಯಕ್ತಿ ಖಝ್ರಜ್ ಗೋತ್ರದವನಾಗಿದ್ದಾನೆಂದು. ನೀವು ಆ ವ್ಯಕ್ತಿಯ ಕೊರಳು ಕೊಯ್ಯುವ ವಿಚಾರ ಹೇಳುತ್ತಿದ್ದೀರಿ. ಒಂದು ವೇಳೆ ಅಬ್ದುಲ್ಲಾ ಬಿನ್ ಉಬೈ ನಿಮ್ಮ ಗೋತ್ರದವನಾಗಿದ್ದರೆ ನೀವೆಂದಿಗೂ ಆತನ ಕತ್ತು ಕೊಯ್ಯುವ ಕುರಿತು ಹೇಳುತ್ತಿರಲಿಲ್ಲ" ಎಂದರು.

ಅಷ್ಟರಲ್ಲಿ ಉಸ್ಯೆದ್ ಬಿನ್ ಹುದ್ಯೆರ್(ರ) ಹೇಳಿದರು,

"ನೀವು ಕಪಟವಿಶ್ವಾಸಿಗಳಾಗಿದ್ದೀರಿ. ಆದುದರಿಂದ ನೀವು ಮುನಾಫಿಕರ ಪರವಾಗಿ ಮಾತನಾಡುತ್ತಿದ್ದೀರಿ" ಎಂದರು.

ಆಗ ಮಸೀದಿಯಲ್ಲಿ ಗದ್ದಲವೆದ್ದಿತು. ಆ ವೇಳೆ ಪ್ರವಾದಿ(ಸ)ರು ಮುಂದೆ ಮಿಂಬರ್‌ನಲ್ಲಿ ನಿಂತಿದ್ದರು. ಔಸ್ ಹಾಗೂ ಖಝ್ರಜ್ ಗೋತ್ರದವರಲ್ಲಿ ಮಾತಿನ ಚಕಮಕಿ ನಡೆಯಿತು. ಪ್ರವಾದಿಯವರು(ಸ) ಮಧ್ಯ ಪ್ರವೇಶ ಮಾಡಿ ಎಲ್ಲರನ್ನೂ ಶಾಂತಗೊಳಿಸಿದರು.

(ಗಮನಿಸಿರಿ, ಶ್ಯೆತಾನ್ ಹಾಗೂ ಆತನ ಚೇಲರು ಎಷ್ಟೊಂದು ಬುದ್ಧಿವಂತರಾಗಿದ್ದಾರೆ. ಅಬ್ದುಲ್ಲಾ ಬಿನ್ ಉಬೈ ಬಿಟ್ಟ ಆ ಒಂದು ಶ್ಯೆತಾನನ ಬಾಣಕ್ಕೆ ಹಲವರು ಗುರಿಯಾದರು.)

ಒಂದೆಡೆ ಆತ ಪ್ರವಾದಿ(ಸ) ಹಾಗೂ ಅಬೂಬಕರ್(ರ)ರ ಮೇಲೆ ದಾಳಿ ಮಾಡಿದನು. ಇನ್ನೊಂದೆಡೆ ಇಸ್ಲಾಮಿನ ಉನ್ನತ ಚಾರಿತ್ರ್ಯವನ್ನು ಧೂಳೀಪಟ ಮಾಡಲು ಯತ್ನಿಸಿದನು. ಒಂದು ವೇಳೆ ಅಲ್ಲಾಹನು ಅನುಗ್ರಹಿಸದಿರುತ್ತಿದ್ದರೆ, ಸಹಾಬಿಗಳು ಪ್ರವಾದಿ(ಸ)ಯವರಿಂದ ತರಬೇತಿ ಹೊಂದದಿರುತ್ತಿದ್ದರೆ ಔಸ್ ಹಾಗೂ ಖಝ್ರಜ್ ಗೋತ್ರದವರು ಪರಸ್ಪರ ಹೊಡೆದಾಡುತ್ತಿದ್ದರು.

ನಂತರದ ವಿಷಯವನ್ನು ಆಯಿಶಾ(ರ) ಸ್ವತಃ ಈ ರೀತಿ ವಿವರಿಸುತ್ತಾರೆ, "ಒಂದು ದಿನ ಪ್ರವಾದಿ(ಸ) ಸಲಾಮ್ ಹೇಳಿ, ನನ್ನ ಬಳಿ ಬಂದು

ಕುಳಿತುಕೊಂಡರು. ಈ ಪ್ರಸಂಗ ನಡೆದಾಗಿನಿಂದ ಅವರು(ಸ) ನನ್ನ ಬಳಿ ಕುಳಿತಿರಲಿಲ್ಲ. ನನ್ನ ಹೆತ್ತವರೂ ನನ್ನ ಬಳಿ ಬಂದು ಕುಳಿತುಕೊಂಡರು. ಪ್ರವಾದಿ(ಸ) ಕೇಳಿದರು, "ಆಯಿಶಾ! ನಿಮ್ಮ ಬಗ್ಗೆ ನನಗೆ ಇಂತಹ ಸುದ್ದಿ ಸಿಕ್ಕಿತು. ಒಂದು ವೇಳೆ ನೀನು ನಿರಪರಾಧಿಯಾಗಿದ್ದರೆ ಸ್ವತಃ ಅಲ್ಲಾಹನು ನಿನ್ನ ನಿರಪರಾಧಿತ್ವವನ್ನು ಸಾಬೀತು ಪಡಿಸುವನು. ನಿಜವಾಗಿಯೂ ಒಂದು ವೇಳೆ ನಿನ್ನಿಂದ ಪ್ರಮಾದವಾಗಿದ್ದರೆ ನೀನು ಅಲ್ಲಾಹನಲ್ಲಿ ಕ್ಷಮೆಯಾಚಿಸು. ಭಕ್ತನು ಪಶ್ಚಾತ್ತಾಪಪಟ್ಟು ಕ್ಷಮೆಯಾಚಿಸಿದರೆ ಅಲ್ಲಾಹನು ಖಂಡಿತವಾಗಿಯೂ ಕ್ಷಮಿಸುತ್ತಾನೆ" ಎಂದರು.

ಪ್ರವಾದಿಯವರ(ಸ) ನುಡಿಗಳನ್ನಾಲಿಸಿ ನನ್ನ ಕಣ್ಣೀರು ಬತ್ತಿ ಹೋಯಿತು. ಅವರೊಂದಿಗೆ ಮಾತನಾಡಲು ತಂದೆಯವರಲ್ಲಿ ಕೇಳಿಕೊಂಡೆ. ತಂದೆಯವರು, ಮಗಳೇ! ನನಗೇನು ಹೇಳಬೇಕೆಂದು ತೋಚುತ್ತಿಲ್ಲ ಎಂದರು. ತಾಯಿಯಲ್ಲಿ ಕೇಳಿದಾಗ ಅವರೂ ಅದೇ ರೀತಿ ಉತ್ತರಿಸಿದರು.

ಅಂತಿಮವಾಗಿ ನಾನೇ ಹೇಳಿದೆ, "ಜನರ ಕಿವಿಗೆ ಅಪವಾದದ ಧ್ವನಿ ತಟ್ಟಿದೆ ಹಾಗೂ ಅದು ಮನಸ್ಸಿನಲ್ಲಿ ಬೇರೂರಿದೆ. ನಾನು ನಿರಪರಾಧಿ ಎಂಬುದಕ್ಕೆ ಅಲ್ಲಾಹನೇ ಸಾಕ್ಷಿ ಎಂದರೆ ನೀವು ನಂಬಲಾರಿರಿ. ಈ ಸಂದರ್ಭದಲ್ಲಿ ಪ್ರವಾದಿ ಯಾಕೂಬ್(ಅ)ರನ್ನು ನೆನಪಿಸಲು ಪ್ರಯತ್ನಿಸಿದೆ. ಆದರೆ ನೆನಪಾಗಲಿಲ್ಲ. ಕೊನೆಗೆ ಹೇಳಿದೆ, ಯೂಸುಫ್(ಅ)ರ ತಂದೆ ಹೇಳಿದ ಮಾತುಗಳನ್ನಷ್ಟೇ ನನಗೆ ನಿಮ್ಮೊಡನೆ ಹೇಳಲಿಕ್ಕಿರುವುದು. "ತಾಳ್ಮೆಯೇ ನನಗೆ ಭೂಷಣ. ನಿಮ್ಮ ಅಪವಾದದ ವಿರುದ್ಧ ನಾನು ಅಲ್ಲಾಹನ ಸಹಾಯ ಯಾಚಿಸುತ್ತೇನೆ." (ಈ ಸಂಜ್ಞೆಯು ಆ ಘಟನೆ ಕಡೆಗಿದೆ. ಅಂದು ಯಾಕೂಬ್(ಅ)ರ ಮುಂದೆ ಅವರ ಮಗ ಬಿನ್‌ಯಮೀನ್‌ರ ಮೇಲೆ ಹೊರಿಸಲಾದ ಕಳ್ಳತನದ ಆರೋಪದ ಕುರಿತು ಹೇಳಿದಾಗ ಯಾಕೂಬ್(ಅ)ರು ಹೀಗೆ ಪ್ರಾರ್ಥಿಸಿದ್ದರು. ಸೂರಃ ಯೂನುಸ್‌ನ 10ನೇ ರುಕೂಅ್‌ನಲ್ಲಿ ಈ ಘಟನೆಯ ಉಲ್ಲೇಖವಿದೆ.)

ಇಷ್ಟನ್ನು ಹೇಳಿ ನಾನು ಇನ್ನೊಂದೆಡೆ ಮುಖಮಾಡಿ ಮಲಗಿದೆ. ಪ್ರವಾದಿ(ಸ) ಮಾತ್ರ ಅಲ್ಲಿಂದ ಕದಲಲಿಲ್ಲ. "ಅಲ್ಲಾಹನು ನನ್ನ ನಿರಪರಾಧಿತ್ವವನ್ನು ಅರಿತಿದ್ದರೆ ಆತನು ಸತ್ಯವನ್ನು ಬಹಿರಂಗಗೊಳಿಸುವನು" ಎಂದು ಮನಸ್ಸಿನಲ್ಲಿ ಅಂದುಕೊಂಡೆ. ನನ್ನ ಪರವಾಗಿ ದೇವವಾಣಿ ಅವತೀರ್ಣಗೊಳ್ಳುತ್ತದೆ ಹಾಗೂ ಪುನರುತ್ಥಾನದವರೆಗೆ ಅದು ಓದಲ್ಪಡುತ್ತದೆ ಎಂದು ನಾನು ಕನಸು–ಮನಸ್ಸಿನಲ್ಲೂ ಯೋಚಿಸಿರಲಿಲ್ಲ. ಅಲ್ಲಾಹನು ಸ್ವತಃ ನನ್ನ ಪರವಾಗಿ ದಿವ್ಯವಾಣಿ ಅವತೀರ್ಣಗೊಳಿಸುವಷ್ಟು ಅರ್ಹಳು ಎಂದು ನಾನು ಭಾವಿಸಿರಲಿಲ್ಲ.

ಅಷ್ಟರಲ್ಲೇ ಪ್ರವಾದಿಯವರ(ಸ) ಮೇಲೆ ದಿವ್ಯವಾಣಿ ಅವತೀರ್ಣಗೊಂಡಿತು.

ಪ್ರವಾದಿಯವರ(ಸ) ಶರೀರದಿಂದ ಹೊಳೆಯುವ ಮುತ್ತುಗಳಂತೆ ಬೆವರ ಹನಿಗಳು ಜಾರಿದವು. ನಾನು ನಿರ್ಭೀತಳಾಗಿದ್ದೆ. ಆದರೆ ನಮ್ಮ ಮನೆಯವರು ತುಂಬಾ ಭಯಭೀತರಾಗಿದ್ದರು.

ದಿವ್ಯವಾಣಿ ಅವತೀರ್ಣಗೊಂಡ ಬಳಿಕ ಪ್ರವಾದಿಯವರು(ಸ) ಮುಗುಳ್ನಗುತ್ತಾ, "ಆಯಿಶಾ! ಅಭಿನಂದನೆಗಳು, ಅಲ್ಲಾಹನು ನಿನ್ನ ನಿರಪರಾಧಿತ್ವವನ್ನು ಸಾಬೀತುಪಡಿಸಿದನು" ಎನ್ನುತ್ತಾ ಸೂರಃ ಅನ್ನೂರ್‌ನ 10 ಸೂಕ್ತಗಳನ್ನು (11–21) ಓದಿ ಹೇಳಿದರು.

"ಆಯಿಶಾ! ಏಳು ಪ್ರವಾದಿಯರಿಗೆ(ಸ) ಕೃತಜ್ಞತೆ ಸಲ್ಲಿಸು" ಎಂದು ನನ್ನ ತಾಯಿ ಹೇಳಿದರು. ಆಗ ನಾನು ಹೇಳಿದೆ, "ನಾನು ಅವರಿಗೂ(ಸ) ನಿಮಗೂ ಕೃತಜ್ಞತೆ ಸಲ್ಲಿಸುವುದಿಲ್ಲ. ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುತ್ತೇನೆ" ಎಂದೆ. ಆತನು ನನ್ನ ಪರವಾಗಿ ವಾದಿಸಿದನು. ನೀವಾದರೋ ನನ್ನ ಮೇಲೆ ಹೊರಿಸಿದ ಅಪವಾದವನ್ನು ನಿರಾಕರಿಸಲಿಲ್ಲ ಎಂದರು.

**ನೂರ್ ಅಧ್ಯಾಯದ ರಚನಾತ್ಮಕ ಅಂಶಗಳು:**

ಈ ಅಧ್ಯಾಯದಲ್ಲಿ ಅಲ್ಲಾಹನು ಹಲವಾರು ವಿಷಯಗಳನ್ನು ಮುಸ್ಲಿಮರ ತರಬೇತಿಗಾಗಿ ವಿವರಿಸಿದ್ದಾನೆ.

ಒಂದನೆಯದಾಗಿ, ಕಪಟ ವಿಶ್ವಾಸಿಗಳ ಕಾಪಟ್ಯವು ಬಹಿರಂಗಗೊಂಡಿತು. ಈ ಮೊದಲು ಕಪಟ ವಿಶ್ವಾಸಿಗಳನ್ನು ಗುರುತಿಸಲು ಸಾಧ್ಯವಿರಲಿಲ್ಲ. ಒಳಗಿಂದೊಳಗೆ ಕಟ್ಟಿಗೆ ಹುಳುವಿನಂತೆ ಅಂಟಿಕೊಂಡಿದ್ದರು ಹಾಗೂ ಮುಸ್ಲಿಮ್ ಸಮಾಜಕ್ಕೆ ನಷ್ಟವುಂಟು ಮಾಡಲು ಪ್ರಯತ್ನಿಸುತ್ತಿದ್ದರು. ಈ ಘಟನೆಯ ಬಳಿಕ ಮುಸ್ಲಿಮರಿಗೆ ಕಪಟ ವಿಶ್ವಾಸಿಗಳು ಯಾರೆಂದು ಗುರುತಿಸಲು ಸಾಧ್ಯವಾಯಿತು. ಎರಡನೆಯದಾಗಿ, ಅಲ್ಲಾಹನು ತಿಳಿಸಿರುವ– "ಓ ಮುಸ್ಲಿಮರೇ ನೀವು ಈ ವದಂತಿಯನ್ನು ನಿಮ್ಮ ಪಾಲಿಗೆ ಕೆಡುಕೆಂದು ಭಾವಿಸಬೇಡಿರಿ, ಇದು ನಿಮ್ಮ ಪಾಲಿಗೆ ಶುಭವೆಂದು ಭಾವಿಸಿರಿ. ಹೆದರಬೇಡಿರಿ, ಕಪಟ ವಿಶ್ವಾಸಿಗಳು ತಾವು ದೊಡ್ಡ ಕುತಂತ್ರ ಮಾಡಿದ್ದೇವೆಂದು ಕೊಂಡಿದ್ದರು. ಆದರೆ ಅದು ಅವರಿಗೇ ತಿರುಗುಬಾಣವಾಯಿತು. ಮುಸ್ಲಿಮರ ವಿರುದ್ಧ ಯುದ್ಧ ಸಾರಿದ ಕಪಟ ವಿಶ್ವಾಸಿಗಳಿಗೆ ಸಿಕ್ಕಿದ್ದು ಶೂನ್ಯ ಫಲಿತಾಂಶ. ಜೊತೆಗೆ ಮುಶ್ರಿಕರ ಇಡೀ ಅರಬ್ ಸಾಮ್ರಾಜ್ಯವು ಸೋಲುಂಡಿತು. ಯುದ್ಧದಿಂದ ಏನೂ ಸಾಧಿಸಲಾಗದಿದ್ದಾಗ ಕಪಟ ವಿಶ್ವಾಸಿಗಳು ಮುಸ್ಲಿಮರ ಚಾರಿತ್ರ್ಯದ ಮೇಲೆ ಲಗ್ಗೆಯಿಟ್ಟರು. ಆದರೆ ಈ ಕುತಂತ್ರವೂ ಫಲಿಸಲಿಲ್ಲ. ಈ ಸಂದರ್ಭದಲ್ಲಿ ಒಂದು ವೇಳೆ ಪ್ರವಾದಿಯವರು(ಸ) ಆದೇಶಿಸುತ್ತಿದ್ದರೆ ಬಹುದೇವಾರಾಧಕರ

ಕತ್ತು ಕೊಯ್ಯಲ್ಪಡುತ್ತಿದ್ದವು. ಆದರೆ ಸತತ ಒಂದು ತಿಂಗಳು ಪ್ರವಾದಿಯವರು(ಸ) ಹಾಗೂ ಮುಸ್ಲಿಮರು ಎಲ್ಲವನ್ನೂ ಸಹಿಸಿದರು. ಪ್ರವಾದಿಯವರಿಗೆ(ಸ) ಆಯಿಶಾ(ರ)ರ ಮೇಲೆ ಸಂಶಯ ಉಂಟಾಗಲಿಲ್ಲ.

ಸವತಿಯರ ಸಂಬಂಧವು ಬಹಳ ಸೂಕ್ಷ್ಮವಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಸವತಿಯರು ಎಲ್ಲೆಡೆಯೂ ವದಂತಿಗಳನ್ನು ಹಬ್ಬಿಸಲು ಹವಣಿಸುತ್ತಾರೆ. ಆದರೆ ಅವರ್‍ಯಾರು ಆಯಿಶಾ(ರ)ರ ವಿರುದ್ಧ ಚಕಾರವೆತ್ತಲಿಲ್ಲ. ಈ ವದಂತಿಯ ಕುರಿತು ಅಬೂ ಅಯ್ಯೂಬ್ ಅನ್ಸಾರಿ(ರ)ಯವರ ಬಳಿ ಅವರ ಪತ್ನಿ ವಿಚಾರಿಸಿದಾಗ ಅವರು ಕೇಳಿದರು, "ಅಯ್ಯೂಬ್‌ರ ಮಾತೆ; ಒಂದು ವೇಳೆ ಆಯಿಶಾ(ರ)ರ ಜಾಗದಲ್ಲಿ ನೀನಿರುತ್ತಿದ್ದರೆ ಇಂತಹ ದುಷ್ಕೃತ್ಯವೆಸಗುತ್ತಿದ್ದೀಯಾ?" ಆಗ ಅವರ ಪತ್ನಿಯು "ಅಲ್ಲಾಹನಾಣೆ! ಖಂಡಿತ ಇಲ್ಲ" ಎಂದರು.

ಇದನ್ನು ಕೇಳಿದ ಅಬೂ ಅಯ್ಯೂಬ್(ರ)ರು "ಆಯಿಶಾ(ರ) ನಿನಗಿಂತ ಅದೆಷ್ಟೋ ಪಟ್ಟು ಉತ್ತಮರು. ಅದೇ ರೀತಿ ಒಂದು ವೇಳೆ ನಾನು ಸಫ್ವಾನ್(ರ)ರ ಜಾಗದಲ್ಲಿರುತ್ತಿದ್ದರೆ ಈ ರೀತಿಯ ಯೋಚನೆಯೂ ನನ್ನಲ್ಲಿ ಮೂಡುತ್ತಿರಲಿಲ್ಲ. ಸಫ್ವಾನ್(ರ)ರಂತೂ ನನಗಿಂತ ಉತ್ತಮರು ಎಂದರು."

ಯಾರೋ ಒಬ್ಬರು ಬಂದು ಸಫ್ವಾನ್(ರ)ರಲ್ಲಿ ಹಸ್ಸಾನ್ ಬಿನ್ ಸಾಬಿತ್(ರ)ರು ನಿಮ್ಮ ಬಗ್ಗೆ ಇಂತಿಂತಹ ಮಾತುಗಳನ್ನಾಡಿದ್ದಾರೆ ಎಂದಾಗ. ಕೋಪೋದ್ರಿಕ್ತರಾದ ಸಫ್ವಾನ್(ರ)ರು "ನಾನು ಪ್ರಮಾಣ ಮಾಡಿ ಹೇಳುತ್ತೇನೆ, ನಾನು ಯಾವ ಸ್ತ್ರೀಯನ್ನೂ ಸ್ಪರ್ಶಿಸಲಿಲ್ಲ" ಎನ್ನುತ್ತಾ ಖಡ್ಗ ಹಿಡಿದು ಹೊರಟರು. ಹಸ್ಸಾನ್(ರ)ರು ಸಿಕ್ಕಿದೊಡನೆ ಕಾವ್ಯದ ಸಾಲುಗಳ ಮೂಲಕ ದಾಳಿ ಮಾಡಿದರು.

"ನಾನು ಕವಿಯಲ್ಲ, ಓರ್ವ ಯುವಕನಾಗಿದ್ದೇನೆ. ನನ್ನ ಮೇಲೆ ಸುಳ್ಳಾರೋಪ ಹೊರಿಸಿದರೆ ನಾನು ಬಿಡಲಾರೆನು" ಎಂದು ಖಡ್ಗದಿಂದ ಪ್ರಹಾರ ಮಾಡಲು ಮುಂದಾದಾಗ ಜನರು ಅವರನ್ನು ತಡೆದು ಪ್ರವಾದಿಯವರ(ಸ) ಬಳಿಗೆ ಕರೆದುಕೊಂಡು ಹೋದರು. ಪ್ರವಾದಿ(ಸ)ರು ಅವರನ್ನು ಕ್ಷಮಿಸಿದರು ಹಾಗೂ ಪರಿಹಾರದ ರೂಪದಲ್ಲಿ ಹ. ಹಸ್ಸಾನ್(ರ)ರಿಗೆ ಜಾಗವನ್ನು ನೀಡಿದರು.

ಬಳಿಕ ಹಸ್ಸಾನ್(ರ)ರ ಕುರಿತು ಆಯಿಶಾ(ರ)ರ ಬಳಿ ಕೆಲವರು ಹೀಗೆ ಹೇಳಿದರು, "ಅವರು ಮುಸ್ಲಿಮರಾಗಿ ನಿಮ್ಮನ್ನು ಕಳಂಕಿತಗೊಳಿಸಿದ್ದಾರೆ". (ಅವರು ಕಪಟ ವಿಶ್ವಾಸಿಯೂ ಆಗಿರಲಿಲ್ಲ) ಅದಕ್ಕೆ ಆಯಿಶಾ(ರ) ಉತ್ತರಿಸುತ್ತಾ,

"ಓ ಜನರೇ ಪ್ರವಾದಿ(ಸ) ಹಾಗೂ ಮುಸ್ಲಿಮರ ಪರವಾಗಿ ಇಸ್ಲಾಮಿನ ಶತ್ರುಗಳ ವಿರುದ್ಧ ತನ್ನ ಕಾವ್ಯಗಳ ಮೂಲಕ ಪ್ರತಿ ದಾಳಿ ಮಾಡಿದ್ದವರು ಇವರೇ ಆಗಿದ್ದಾರೆ. ಅದೇ ರೀತಿ ಹಸ್ಸಾನ್(ರ)ರು ಈ ವದಂತಿಯಲ್ಲಿ ಭಾಗಿಯಾಗಿದ್ದರು ಎಂಬುದೂ ಸ್ಪಷ್ಟ" ಎಂದರು.

ಹ. ಅಬೂಬಕರ್(ರ)ರು ಮಿಸ್ತಹ್(ರ)ರ ಮನೆಯ ಖರ್ಚು ವೆಚ್ಚಗಳನ್ನು ಭರಿಸುತ್ತಿದ್ದರು. ಮಿಸ್ತಹ್(ರ)ರು ಈ ವದಂತಿಯಲ್ಲಿ ಪಾಲ್ಗೊಂಡಾಗ ಅಬೂಬಕರ್(ರ)ರು "ಅಲ್ಲಾಹನಾಣೆ! ಇನ್ನು ಮುಂದೆ ನಾನು ಅವರಿಗೆ ಮಾಡುತ್ತಿದ್ದ ಸಹಾಯವನ್ನು ನಿಲ್ಲಿಸಿ ಬಿಡುತ್ತೇನೆ" ಎಂದರು. ಆದರೆ ಅಲ್ಲಾಹನು ಆದೇಶಿಸುತ್ತಾ,

**"ನಿಮ್ಮಲ್ಲಿ ಅನುಗ್ರಹೀತರು ಮತ್ತು ಸಾಮರ್ಥ್ಯವುಳ್ಳವರು ತಮ್ಮ ಸಂಬಂಧಿಕರಿಗೂ ದರಿದ್ರರಿಗೂ ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋಗುವವರಿಗೂ ಸಹಾಯ ಮಾಡಲಿಕ್ಕಿಲ್ಲವೆಂದು ಪ್ರತಿಜ್ಞೆ ಮಾಡಿ ಬಿಡಬಾರದು. ಅವರನ್ನು ಕ್ಷಮಿಸಿ ಬಿಡಬೇಕು ಮತ್ತು ಮನ್ನಿಸಬೇಕು. ಅಲ್ಲಾಹನು ನಿಮ್ಮನ್ನು ಕ್ಷಮಿಸಬೇಕೆಂದು ನೀವು ಇಚ್ಛಿಸುವುದಿಲ್ಲವೇ? ಅಲ್ಲಾಹ್ ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ."**

**(ಪವಿತ್ರ ಕುರ್‌ಆನ್:24:22)**

ಈ ಸೂಕ್ತವನ್ನು ಆಲಿಸಿದ ಅಬೂಬಕರ್(ರ)ರು "ಅಲ್ಲಾಹನಾಣೆ! ನಿನ್ನ ಆದೇಶವನ್ನು ಖಂಡಿತವಾಗಿಯೂ ಪಾಲಿಸುತ್ತೇನೆ, ನನ್ನ ಪಾಪಗಳನ್ನು ಕ್ಷಮಿಸು" ಎಂದು ಪ್ರಾರ್ಥಿಸಿದರು. ಬಳಿಕ ಅವರು(ರ) ಮಿಸ್ತಹ್(ರ)ರಿಗೆ ಮಾಡುತ್ತಿದ್ದ ಸಹಾಯವನ್ನು ಮುಂದುವರಿಸಿದರು. ಹಾಗೂ ಅವರನ್ನು ಕ್ಷಮಿಸಿದರು.

ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳುತ್ತಾರೆ, "ಹ. ಅಬೂಬಕರ್(ರ)ರಂತೆಯೇ ಇನ್ನಿತರ ಸಹಾಬಿಗಳು(ರ) ವದಂತಿಗಳಲ್ಲಿ ಪಾಲ್ಗೊಂಡ ಸಂಬಂಧಿಕರಿಗೆ ನೆರವು ನೀಡುವುದಿಲ್ಲವೆಂದು ಶಪಥ ಮಾಡಿದ್ದರು. ಅವರೆಲ್ಲರೂ ಈ ಸೂಕ್ತ ಅವತೀರ್ಣಗೊಂಡ ಬಳಿಕ ಕ್ಷಮಿಸಿದರು ಹಾಗೂ ಅವರಿಗೆ ಮಾಡುತ್ತಿದ್ದ ಸಹಾಯವನ್ನು ಮುಂದುವರೆಸಿದರು.

ಈ ವದಂತಿಯನ್ನಾಧಾರಿಸಿ ಅವತೀರ್ಣಗೊಂಡ ಅನ್ನೂರ್ ಅಧ್ಯಾಯದ ಮೂಲಕ ಅಲ್ಲಾಹನು ಮುಸ್ಲಿಮರಿಗೆ ಸಾಮಾಜಿಕ ಸುಧಾರಣೆಯ ಅತ್ಯುತ್ತಮ ನಿಯಮಗಳು, ಸೇನಾ ನಾಯಕತ್ವ ಹಾಗೂ ಅವಮಾನಗೊಳಿಸಬಾರದೆಂಬುದರ ಕುರಿತು ದೋಷರಹಿತ ನಿಯಮಗಳು ಹಾಗೂ ನಾಗರಿಕ ಜೀವನವನ್ನು ಕಲುಷಿತವಾಗುವುದರಿಂದ ರಕ್ಷಿಸಲು ಉತ್ತಮ ಕಾನೂನುಗಳನ್ನು ಪ್ರತಿಪಾದಿಸಿದನು. ಇದು ಅಲ್ಲಾಹನ ಅಪಾರ ಅನುಗ್ರಹವಾಗಿದೆ.

## ನೂರ್ ಅಧ್ಯಾಯದಲ್ಲಿನ ಕೆಲವು ನಿಯಮಗಳು:

1. "ವ್ಯಭಿಚಾರಿಣಿ ಮತ್ತು ವ್ಯಭಿಚಾರಿ ಇವರಿಬ್ಬರಲ್ಲಿ ಪ್ರತಿಯೊಬ್ಬರಿಗೂ ನೂರು ಛಡಿಯೇಟು ಕೊಡಿರಿ. ನೀವು ಅಲ್ಲಾಹನ ಹಾಗೂ ಅಂತಿಮ ದಿವಸದ ಮೇಲೆ ವಿಶ್ವಾಸವಿರಿಸುತ್ತೀರಾದರೆ ಅಲ್ಲಾಹನ ಧರ್ಮದ ವಿಷಯದಲ್ಲಿ ಅವರ ಮೇಲಿನ ಕನಿಕರವು ನಿಮ್ಮನ್ನು ತಡೆಯದಿರಲಿ. ಅವರಿಗೆ ಶಿಕ್ಷೆ ಕೊಡುವಾಗ ಸತ್ಯವಿಶ್ವಾಸಿಗಳ ಒಂದು ಸಮೂಹ ಅಲ್ಲಿ ಉಪಸ್ಥಿತವಿರಲಿ." (ಕುರ್‌ಆನ್ 24: 2)

2. ವ್ಯಭಿಚಾರ ಮಾಡಿದ ಸ್ತ್ರೀ-ಪುರುಷರನ್ನು ಸಮಾಜದಿಂದ ಬಹಿಷ್ಕರಿಸಲಾಯಿತು. "ವ್ಯಭಿಚಾರಿಯು ವ್ಯಭಿಚಾರಿಣಿಯೊಂದಿಗೆ ಅಥವಾ ಬಹುದೇವ ವಿಶ್ವಾಸಿನಿಯೊಂದಿಗೆ ಹೊರತು ವಿವಾಹವಾಗದಿರಲಿ ಮತ್ತು ವ್ಯಭಿಚಾರಿಣಿಯೊಂದಿಗೆ ವ್ಯಭಿಚಾರಿ ಅಥವಾ ಬಹುದೇವ ವಿಶ್ವಾಸಿಯ ಹೊರತು ವಿವಾಹವಾಗದಿರಲಿ, ಇದನ್ನು ಸತ್ಯವಿಶ್ವಾಸಿಗಳ ಮೇಲೆ ನಿಷಿದ್ಧಗೊಳಿಸಲಾಗಿದೆ." (ಕುರ್‌ಆನ್ 24:3)

3. "ಯಾರು ಸುಶೀಲೆಯರ ಮೇಲೆ ಆರೋಪ ಹೊರಿಸುತ್ತಾರೋ, ಆ ಬಳಿಕ ನಾಲ್ವರು ಸಾಕ್ಷಿದಾರರನ್ನು ತರುವುದಿಲ್ಲವೋ ಅವರಿಗೆ ಎಂಭತ್ತು ಛಡಿಯೇಟು ಕೊಡಿರಿ ಮತ್ತು ಅವರ ಸಾಕ್ಷ್ಯವನ್ನು ಎಂದಿಗೂ ಸ್ವೀಕರಿಸಬೇಡಿರಿ. ಅವರು ಸ್ವಯಂ ಕರ್ಮಭ್ರಷ್ಟರು."

(ಕುರ್‌ಆನ್ 24:4)

4. ಪತಿಯು ತನ್ನ ಪತ್ನಿಯ ಮೇಲೆ ಆರೋಪ ಹೊರಿಸಿದಾಗ ಕುರ್‌ಆನ್‌ನ ನಿಯಮಗಳನ್ನು ಜಾರಿಗೊಳಿಸಲಾಯಿತು. (ಅಂದರೆ ಅವರು ಪರಸ್ಪರರನ್ನು ಶಪಿಸುತ್ತಾ, ಮೂದಲಿಸುತ್ತಾ ಇರುತ್ತಾರೆ. ಕೊನೆಗೆ ನ್ಯಾಯಾಧೀಶರು ತಲಾಕ್‌ನ ಮೂಲಕ ಅವರನ್ನು ಬೇರ್ಪಡಿಸುತ್ತಾರೆ.)

"ತಮ್ಮ ಪತ್ನಿಯರ ಮೇಲೆ ಆರೋಪ ಹೊರಿಸುವವರ ಬಳಿ ಸ್ವಯಂ ಅವರ ಹೊರತು ಬೇರೆ ಯಾರೂ ಸಾಕ್ಷಿದಾರರಿಲ್ಲದಿದ್ದರೆ ಅವರಲ್ಲಿ ಒಬ್ಬನ ಸಾಕ್ಷ್ಯವು (ಹೇಗಿರಬೇಕೆಂದರೆ) ಅವನು ನಾಲ್ಕು ಬಾರಿ ಅಲ್ಲಾಹನ ಆಣೆ ಹಾಕಿ ತಾನು (ಹೊರಿಸಿದ ಆರೋಪದ ವಿಷಯದಲ್ಲಿ) ಸತ್ಯವಂತನೆಂದು ಸಾಕ್ಷ್ಯ ಹೇಳಲಿ ಮತ್ತು ಐದನೇ ಬಾರಿ, ತಾನು (ಈ ಆರೋಪದಲ್ಲಿ) ಸುಳ್ಳನಾಗಿದ್ದರೆ ತನ್ನ ಮೇಲೆ ಅಲ್ಲಾಹನ ಶಾಪವಿರಲೆಂದು ಹೇಳಲಿ. ಮತ್ತು ಆ ಸ್ತ್ರೀಯ ಮೇಲಿನಿಂದ ಶಿಕ್ಷೆಯನ್ನು ತಪ್ಪಿಸಲು ಇರುವ ಕ್ರಮವೇನೆಂದರೆ ಆಕೆ ನಾಲ್ಕು ಬಾರಿ ಅಲ್ಲಾಹನ ಆಣೆ ಹಾಕಿ ಈತನು (ತನ್ನ ಆರೋಪದಲ್ಲಿ) ಸುಳ್ಳನೆಂದು ಸಾಕ್ಷ್ಯ ಹೇಳಬೇಕು- ಮತ್ತು ಐದನೆಯ ಬಾರಿ, ಒಂದು ವೇಳೆ ಆತನು ಸತ್ಯವಂತನಾಗಿದ್ದರೆ ನನ್ನ ಮೇಲೆ ಅಲ್ಲಾಹನ ಕ್ರೋಧವೆರಗಲಿ ಎಂದು ಹೇಳಬೇಕು. ನಿಮ್ಮ ಮೇಲೆ ಅಲ್ಲಾಹನ ಅನುಗ್ರಹವೂ ಅವನ ಕೃಪೆಯೂ ಇಲ್ಲದಿರುತ್ತಿದ್ದರೆ ಮತ್ತು ಅಲ್ಲಾಹ್

ಪಶ್ಚಾತ್ತಾಪ ಸ್ವೀಕರಿಸುವವನೂ ಯುಕ್ತಿಪೂರ್ಣನೂ ಆಗಿರದಿರುತ್ತಿದ್ದರೆ (ಪತ್ನಿಯರ ಮೇಲೆ ಆರೋಪ ಹೊರಿಸುವ ಪ್ರಕರಣವು ನಿಮ್ಮನ್ನು ದೊಡ್ಡ ಪೇಚಿನಲ್ಲಿ ಸಿಲುಕಿಸಿ ಬಿಡುತ್ತಿತ್ತು)."

(ಕುರ್‌ಆನ್ 24:6–10)

5. ವದಂತಿಗಳಲ್ಲಿ ಪಾಲ್ಗೊಳ್ಳಬೇಡಿರಿ. ಆರೋಪಗಳನ್ನು ಮುಚ್ಚಲು ಪ್ರಯತ್ನಿಸಿರಿ. ವದಂತಿಗಳನ್ನು ಹಬ್ಬಿಸುವವರಿಗೆ ಪ್ರೇರಣೆ ನೀಡಬೇಡಿರಿ. ಅವರ ಮಾತುಗಳನ್ನು ಆಲಿಸಬೇಡಿರಿ. ಆ ತಪ್ಪು ಸಾಬೀತಾಗುವವರೆಗೂ ಪರಸ್ಪರ ಸುವಿಚಾರದೊಂದಿಗೆ ಮಾತನಾಡಿರಿ. "ನೀವು ಸತ್ಯವಿಶ್ವಾಸಿಗಳಾಗಿದ್ದರೆ ಮುಂದೆಂದೂ ಇಂತಹ ಕೃತ್ಯವೆಸಗಬಾರದೆಂದು ಅಲ್ಲಾಹನು ನಿಮಗೆ ಉಪದೇಶ ಮಾಡುತ್ತಾನೆ. ಅಲ್ಲಾಹನು ನಿಮಗೆ ಸುಸ್ಪಷ್ಟ ಆದೇಶಗಳನ್ನೀಯುತ್ತಾನೆ ಮತ್ತು ಅವನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ. ಸತ್ಯವಿಶ್ವಾಸ ಸ್ವೀಕರಿಸಿಕೊಂಡವರ ಸಮೂಹದಲ್ಲಿ ಅಶ್ಲೀಲತೆ ಹರಡಬೇಕೆಂದು ಬಯಸುವವರು ಇಹಲೋಕದಲ್ಲೂ ಪರಲೋಕದಲ್ಲೂ ವೇದನಾಯುಕ್ತ ಶಿಕ್ಷೆಗೆ ಅರ್ಹರಾಗಿದ್ದಾರೆ. ಅಲ್ಲಾಹನು ಬಲ್ಲವನು; ನೀವು ಬಲ್ಲವರಲ್ಲ; ನಿಮ್ಮ ಮೇಲೆ ಅಲ್ಲಾಹನ ಅನುಗ್ರಹ ಮತ್ತು ಅವನ ಕೃಪೆ ಇಲ್ಲದಿರುತ್ತಿದ್ದರೆ ಮತ್ತು ಅಲ್ಲಾಹನು ಮಹಾ ವತ್ಸಲನೂ ಕರುಣಾ ನಿಧಿಯೂ ಆಗಿಲ್ಲದಿರುತ್ತಿದ್ದರೆ (ಈಗ ತಾನೇ ನಿಮ್ಮ ಮಧ್ಯೆ ಹರಡಲ್ಪಟ್ಟ ವಿಷಯವು ಅತ್ಯಂತ ಕೆಟ್ಟ ಪರಿಣಾಮಗಳನ್ನು ತೋರಿಸಿ ಬಿಡುತ್ತಿತ್ತು)."

(ಕುರ್‌ಆನ್ 24:17–20)

6. "ದುಶ್ಶೀಲೆಯರು ದುಶ್ಶೀಲರಿಗಾಗಿ ಮತ್ತು ದುಶ್ಶೀಲರು ದುಶ್ಶೀಲೆಯರಿಗಾಗಿರುವರು. ಸುಶೀಲೆಯರು ಸುಶೀಲರಿಗಾಗಿ ಮತ್ತು ಸುಶೀಲರು ಸುಶೀಲೆಯರಿಗಾಗಿರುವರು. ಜನರು ಆಡುತ್ತಿರುವ ಮಾತುಗಳಿಂದ ಅವರು ಮುಕ್ತರಾಗಿರುತ್ತಾರೆ. ಅವರಿಗಾಗಿ ಕ್ಷಮೆ ಇದೆ ಮತ್ತು ಸನ್ಮಾನ್ಯ ಜೀವನಾಧಾರವಿದೆ."

(ಕುರ್‌ಆನ್ 24:26)

ಅಂದರೆ ಆ ಜೋಡಿಗಳು ಪರಸ್ಪರಿಗಾಗಿ ಸಮಾನವಾಗಿವೆ. ಇದರಿಂದ ಸಾಬೀತಾಗುವುದೇನೆಂದರೆ ಪ್ರವಾದಿ(ಸ) ಓರ್ವ ಪರಿಶುದ್ಧ ವ್ಯಕ್ತಿಯಾಗಿದ್ದರು. ಆದುದರಿಂದ ಆಯಿಶಾ(ರ)ರು ಈ ಅಪವಾದದಿಂದ ಮುಕ್ತರಾಗಿದ್ದರು. ಇಲ್ಲವಾದಲ್ಲಿ ಅಲ್ಲಾಹನು ಈ ಜೋಡಿಯನ್ನು ಶಾಶ್ವತವಾಗಿ ಉಳಿಸುತ್ತಿರಲಿಲ್ಲ.

7. ಅನುಮತಿ ಪಡೆದು ಇತರರ ಮನೆಗಳನ್ನು ಪ್ರವೇಶಿಸಿರಿ. "ಸತ್ಯವಿಶ್ವಾಸಿಗಳೇ ನಿಮ್ಮ ಮನೆಗಳ ಹೊರತು ಇತರರ ಮನೆಗಳಿಗೆ ಅವರ ಒಪ್ಪಿಗೆ ಪಡೆಯದೆ ಹಾಗೂ ಮನೆಯವರಿಗೆ ಸಲಾಮ್ ಹೇಳದೆ ಪ್ರವೇಶಿಸಬೇಡಿ. ಈ ಕ್ರಮವು ನಿಮ್ಮ ಮಟ್ಟಿಗೆ ಉತ್ತಮ. ನೀವು ಇದನ್ನು ಗಮನದಲ್ಲಿರಿಸುವಿರೆಂದು ನಿರೀಕ್ಷಿಸಲಾಗಿದೆ."

(ಕುರ್‌ಆನ್ 24:27)

8. ಬೇರೊಬ್ಬರ ಮನೆಯಲ್ಲಿ ಯಾರೂ ಇಲ್ಲದಿದ್ದರೆ ಮನೆಯನ್ನು ಪ್ರವೇಶಿಸಬೇಡಿರಿ. 'ಇನ್ನು ಅಲ್ಲಿ ಯಾರೂ ಕಾಣಿಸದಿದ್ದರೆ ನಿಮಗೆ ಅನುಮತಿ ಸಿಗುವ ವರೆಗೂ ಅದರೊಳಗೆ ಪ್ರವೇಶಿಸಬೇಡಿರಿ." (ಕುರ್‌ಆನ್ 24:28)

9. ಒಂದು ವೇಳೆ ಅವರು ಹಿಂದಿರುಗುವಂತೆ ಸೂಚಿಸಿದಾಗ ಏನೂ ಮಾತನಾಡದೆ ಮರಳಿ ಬಿಡಿರಿ ಮತ್ತು ಮರಳಿ ಹೋಗಿರೆಂದು ನಿಮ್ಮೊಡನೆ ಹೇಳಲಾದರೆ ಮರಳಿ ಬಿಡಿರಿ. ಇದು ನಿಮ್ಮ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮ ಮತ್ತು ನೀವು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹನು ಚೆನ್ನಾಗಿ ತಿಳಿದಿರುತ್ತಾನೆ."

(ಕುರ್‌ಆನ್ 24:28)

10. ಹೊಟೇಲ್, ಧರ್ಮ ಶಾಲೆ, ಅತಿಥಿ ಗೃಹ, ಪ್ರಯಾಣಿಕರ ತಂಗುದಾಣ ಮುಂತಾದ ಸ್ಥಳಗಳಲ್ಲಿ ಅನುಮತಿಯಿಲ್ಲದೆ ಪ್ರವೇಶಿಸಬಹುದು. "ಆದರೆ ಯಾರೂ ವಾಸಿಸದಂತಹ ಮತ್ತು ನಿಮಗೆ ಉಪಯೋಗದ ವಸ್ತುವೇನಾದರೂ ಇರುವಂತಹ ನಿವಾಸದೊಳಗೆ ಪ್ರವೇಶಿಸುವುದರಲ್ಲಿ ಅಡ್ಡಿಯಿಲ್ಲ. ನೀವು ಪ್ರಕಟಗೊಳಿಸುವುದನ್ನೂ ಬಚ್ಚಿಡುವುದನ್ನೂ ಅಲ್ಲಾಹನು ಅರಿಯುವನು." (ಕುರ್‌ಆನ್ 24:29)

11. "ಪೈಗಂಬರರೇ, ಸತ್ಯವಿಶ್ವಾಸಿಗಳೊಡನೆ ತಮ್ಮ ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಲಿಕ್ಕೂ ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿಕ್ಕೂ ಹೇಳಿರಿ. ಇದು ಅವರ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮವಾಗಿದೆ. ಅಲ್ಲಾಹನು ಅವರು ಮಾಡುವುದೆಲ್ಲವನ್ನೂ ಅರಿಯುವವನಾಗಿದ್ದಾನೆ. ಪೈಗಂಬರರೇ, ಸತ್ಯವಿಶ್ವಾಸಿನಿಯರೊಡನೆ ಹೇಳಿರಿ– ಅವರು ತಮ್ಮ ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಲಿ, ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿ ಮತ್ತು ತಮ್ಮ ಶೃಂಗಾರಗಳನ್ನು ತೋರಿಸದಿರಲಿ (ಆದರೆ) ಸ್ವಯಂ ಪ್ರಕಟವಾಗುವಂತಹವುಗಳನ್ನು ಹೊರತು. ಮತ್ತು ತಮ್ಮ ಎದೆಯ ಮೇಲೆ ತಮ್ಮ ಮೇಲು ಹೊದಿಕೆಯ ಸೆರಗನ್ನು ಹಾಕಿಕೊಂಡಿರಲಿ. ಅವರು ತಮ್ಮ ಶೃಂಗಾರವನ್ನು ಇವರ ಹೊರತು ಇತರರಿಗೆ ತೋರಿಸದಿರಲಿ– ಪತಿಯರು, ತಂದೆಯರು, ಪತಿಯ ತಂದೆಯರು, ತಮ್ಮ ಪುತ್ರರು, ಪತಿಯರ ಪುತ್ರರು, ಸಹೋದರರು, ಸಹೋದರ ಪುತ್ರರು, ಸಹೋದರಿಯರ ಪುತ್ರರು, ಆಪ್ತ ಸ್ತ್ರೀಯರು, ತಮ್ಮ ದಾಸಿಯರು, ಯಾವುದೇ ಮಪೇಕ್ಷೆ ಇಲ್ಲದಂತಹ ಅಧೀನ ಸೇವಕರು ಮತ್ತು ಇನ್ನೂ ಸ್ತ್ರೀಯರ ರಹಸ್ಯ ವಿಷಯಗಳನ್ನರಿಯದ ಬಾಲಕರು. ಅವರು, ತಾವು ಮರೆಸಿಟ್ಟಿರುವಂತಹ ಅಲಂಕಾರದ ಅರಿವು ಜನರಿಗಾಗುವಂತೆ ತಮ್ಮ ಪಾದಗಳನ್ನು ನೆಲಕ್ಕೆ ಬಡಿಯುತ್ತಾ ನಡೆಯದಿರಲಿ. ಸತ್ಯ ವಿಶ್ವಾಸಿಗಳೇ! ನೀವೆಲ್ಲರೂ ಸೇರಿ ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡಿರಿ. ನಿಮಗೆ ಯಶಸ್ಸು ಪ್ರಾಪ್ತಿಯಾಗಲೂಬಹುದು." (ಕುರ್‌ಆನ್ 24:30–31)

13. ನಿಮ್ಮ ಸಮಾಜದಲ್ಲಿ ಸ್ತ್ರೀ–ಪುರುಷರು ಅವಿವಾಹಿತರಾಗಿ ಉಳಿಯದಂತೆ,

ಅವರ ವಿವಾಹ ಮಾಡಲು ಪ್ರಯತ್ನಿಸಿರಿ. "ನಿಮ್ಮಲ್ಲಿ ಒಂಟಿಯಾಗಿರುವವ
ಮತ್ತು ನಿಮ್ಮ ದಾಸ-ದಾಸಿಯರಲ್ಲಿ ಸಜ್ಜನರಾಗಿರುವವರ ವಿವಾಹ ಮಾಡಿಬಿಡಿ
ಅವರು ಬಡವರಾಗಿದ್ದರೆ ಅಲ್ಲಾಹ್ ತನ್ನ ಅನುಗ್ರಹದಿಂದ ಅವರನ
ಸಂಪನ್ನಗೊಳಿಸುವನು. ಅಲ್ಲಾಹ್ ಅತಿ ವಿಶಾಲನೂ ಸರ್ವಜ್ಞನೂ ಆಗಿರುತ್ತಾನೆ.
(ಕುರ್‌ಆನ್ 24:32

14. ದಾಸಿಯರಿಂದ ಕೆಲಸ ಮಾಡಿಸುವುದನ್ನು ನಿಷಿದ್ಧಗೊಳಿಸಲಾಗಿದೆ.

ಸೂಚನೆ: ಇದರ ಹೊರತು ಈ ಅಧ್ಯಾಯದಲ್ಲಿ ಇತರ ನಿಯಮ-
ಆದೇಶಗಳನ್ನು ಈ ವದಂತಿಗೆ ಸಂಬಂಧಿಸಿಲ್ಲವಾದ್ದರಿಂದ ಇಲ್ಲಿ ಉಲ್ಲೇಖಿಸಲಿಲ್ಲ

ಹ. ಆಯಿಶಾ(ರ)ರಿಂದಾಗಿ ವದಂತಿಗಳಿಗೆ ಸಂಬಂಧಿಸಿದ ಎಲ್ಲಾ
ದುರ್ಮಾರ್ಗಗಳನ್ನು ಅಲ್ಲಾಹನು ಮುಚ್ಚಿ ಬಿಟ್ಟನು. ಅಷ್ಟೊಂದು ದೊ
ಅಪವಾದವನ್ನು ಆಯಿಶಾ(ರ)ರು ಬಹಳ ತಾಳ್ಮೆಯೊಂದಿಗೆ ಸಹಿಸಿಕೊಂಡರು
ಈ ಕಾನೂನಾತ್ಮಕ ಅನುಗ್ರಹಗಳು ಹ. ಸಿದ್ದೀಕ್(ರ)ರ ಕುಟುಂಬ
ಭಾಗ್ಯದಿಂದಲೇ ದೊರೆತಿದೆ ಎಂಬುದು ಎಲ್ಲಾ ಸಹಾಬಿಗಳ ಅನಿಸಿಕೆ.

ಕುರ್‌ಆನ್‌ನ ಒಂದು ದೊಡ್ಡ ಭಾಗವು ಆಯಿಶಾ(ರ)ರ ಭಾಗ್ಯದಿಂದಲೆ
ಅವತೀರ್ಣಗೊಂಡಿದೆ ಎಂಬುದು ಜನರಾಡಿಕೊಳ್ಳುವುದು ಸತ್ಯವಾಗಿದೆ.

## ತಯಮ್ಮುಮ್‌ನ ವಿಧಿ-ವಿಧಾನ:

ವುಝೂ ಮಾಡಲು ನೀರು ದೊರಕದೆ ಇದ್ದಾಗ ಶುದ್ಧ ಮಣ್ಣಿ
ಮೇಲೆ ಕೈಗಳನ್ನು ಬಡಿದು ಮುಖ ಹಾಗೂ ಕೈಗಳನ್ನು ಸವರಿಕೊಳ್ಳುವುದ
ತಯಮ್ಮುಮ್‌ನ ವಿಧಾನ.

ಆಯಿಶಾ(ರ)ರ ಔದಾರ್ಯದಿಂದಲೇ ಈ ವಿಧಾನವು ನಮಗೆ ಲಭಿಸಿತ
ಎಂಬುದೇ ಎಲ್ಲ ಸಹಾಬಿಗಳ ಒಮ್ಮತಾಭಿಪ್ರಾಯ.

ಒಮ್ಮೆ ಪ್ರವಾದಿಯವರು(ಸ) ಪ್ರಯಾಣದಲ್ಲಿದ್ದರು. ಈ ಸಂದರ್ಭದಲ್ಲಿ
ಆಯಿಶಾ(ರ)ರು ಪ್ರವಾದಿಯವರ(ಸ) ಸಂಗಡವಿದ್ದರು ಹಾಗೂ ಅದೇ ಸ
ಅವರ(ರ) ಕೊರಳಿನಲ್ಲಿತ್ತು. ಯಾತ್ರಿಕರ ತಂಡ ಒಂದೆಡೆ ಬೀಡು ಬಿಟ್ಟಿತು
ಇಲ್ಲಿಯೂ ಆಯಿಶಾ(ರ) ಸರ ಕಾಣೆಯಾಯಿತು. ಆಯಿಶಾ(ರ)ರು ಈ
ವಿಚಾರವನ್ನು ಪ್ರವಾದಿಯವರ(ಸ) ಗಮನಕ್ಕೆ ತಂದರು. ಎಷ್ಟು ಹುಡುಕಿದರೂ
ಸರ ಪತ್ತೆಯಾಗಲಿಲ್ಲ. ಬೀಡು ಬಿಟ್ಟ ಪ್ರದೇಶದಲ್ಲಿ ನೀರು ಸಹ ಲಭ್ಯವಿರಲಿಲ್ಲ
ಜನರೆಲ್ಲರೂ ಆತಂಕಗೊಂಡರು. ಜನರು ಅಬೂಬಕರ್(ರ)ರ ಬಳಿ ಬಂದ
"ನಿಮ್ಮ ಮಗಳು ನಮ್ಮನ್ನು ಸಂಕಷ್ಟಕ್ಕೆ ಸಿಲುಕಿಸಿಬಿಟ್ಟರು" ಎಂದು ದೂರಿದರು

ೀಪದಿಂದಲೇ ಅಬೂಬಕರ್(ರ)ರವರು ನೇರವಾಗಿ ಆಯಿಶಾ(ರ)ರ ಬಳಿಗೆ ರಳಿದರು. ಆಗ ಪ್ರವಾದಿಯವರು(ಸ) ಆಯಿಶಾ(ರ) ತೊಡೆಯ ಮೇಲೆ ಲೆಯಿಟ್ಟು ವಿಶ್ರಾಂತಿ ಪಡೆಯುತ್ತಿದ್ದರು. ನೀನು "ನಿತ್ಯವು ಒಂದಲ್ಲೊಂದು ಪತ್ತು ತಂದೆರಗಿಸುತ್ತೀಯಾ" ಎಂದು ಮಗಳನ್ನು ಗದರಿಸುತ್ತಾ ಚೂಪಾದ ಸ್ತ್ರದಿಂದ ತಿವಿದರು. ಪ್ರವಾದಿ(ಸ) ಎಚ್ಚರಗೊಳ್ಳದಂತೆ ಆಯಿಶಾ(ರ)ರು ುರು ಮಾತಾಡದೆ ನೋವನ್ನು ಸಹಿಸಿಕೊಂಡರು.

ಮುಂಜಾನೆ ಎಚ್ಚರಗೊಂಡ ಪ್ರವಾದಿ(ಸ)ರಿಗೆ ನೀರು ಲಭ್ಯವಿಲ್ಲದ ಸಂಗತಿ ಮನಕ್ಕೆ ಬಂತು. ನಮಾಝಿನ ಸಮಯವಾಗಿದೆ ಎಂದು ಆತಂಕಪಟ್ಟರು. ್ರವಾದಿಯವರೂ(ಸ) ಸಹ ಚಿಂತಾಕ್ರಾಂತರಾದರು. ಅದೇ ವೇಳೆಗೆ ಅವರ ೀಲೆ ಕಾರುಣ್ಯದ ಮಳೆಗೆರೆದ ಅಲ್ಲಾಹನು ಹೀಗೆ ಆದೇಶಿಸಿದನು.

"ಓ ಸತ್ಯವಿಶ್ವಾಸಿಗಳೇ, ನೀವು ಅಮಲಿನಲ್ಲಿದ್ದಾಗ ನಮಾಝನ್ನು ಸಮೀಪಿಸ ೀಡಿರಿ. ನೀವು ಹೇಳುತ್ತಿರುವುದೇನೆಂಬ ಬೋಧವಿರುವಾಗ ನಮಾಝ್ ಮಾಡಬೇಕು. ದೇ ರೀತಿಯಲ್ಲಿ ಜನಾಬತ್‌ನ ಸ್ಥಿತಿಯಲ್ಲಿಯೂ ಸ್ನಾನ ಮಾಡಿಕೊಳ್ಳದೆ ನಮಾಝನ್ನು ಮೀಪಿಸಬೇಡಿರಿ, ನೀವು ದಾರಿಹೋಕರಾಗಿರುವಾಗ ಹೊರತು. ನೀವು ನಾರೋಗ್ಯದಿಂದಿದ್ದಾಗ ಅಥವಾ ಪ್ರಯಾಣದಲ್ಲಿದ್ದಾಗ ಅಥವಾ ನಿಮ್ಮಲ್ಲಾರಾದರೂ ೌಚ್ಯಕ್ಕೆ ಹೋಗಿ ಬಂದಾಗ ಅಥವಾ ನೀವು ಸ್ತ್ರೀಯರನ್ನು ಸ್ಪರ್ಶಿಸಿರುವಾಗ ನಿಮಗೆ ೀರು ಸಿಗದೆ ಹೋದರೆ, ಶುದ್ಧ ಮಣ್ಣನ್ನು ಉಪಯೋಗಿಸಿಕೊಳ್ಳಿರಿ ಮತ್ತು ಅದರಿಂದ ುಖಗಳನ್ನೂ ಕೈಗಳನ್ನೂ ಸವರಿಕೊಳ್ಳಿರಿ. ನಿಶ್ಚಯವಾಗಿಯೂ ಅಲ್ಲಾಹನು ಮೃದು ೀತಿಯನ್ನನುಸರಿಸುವವನೂ ಅತ್ಯಂತ ಕ್ಷಮಾ ಶೀಲನೂ ಆಗಿರುತ್ತಾನೆ."

**(ಕುರ್‌ಆನ್– 4:43)**

ವಿಪತ್ತಿನಲ್ಲಿ ಸಿಲುಕಿದ್ದ ಯಾತ್ರಿಕ ತಂಡದವರು ಸಂತಸದಿಂದ ುಣಿದಾಡಿದರು. ತಮ್ಮ ಮಾತೆ ಹ. ಆಯಿಶಾ(ರ)ರಿಗಾಗಿ ಪ್ರಾರ್ಥಿಸಿದರು. ಂತಸಗೊಂಡ ಶ್ರೀಮಂತ ಅನ್ಸಾರಿ ಸಹಾಬಿಯಾದ ಉಸೈದ್ ಬಿನ್ ುದೈರ್(ರ)ರು ಉಚ್ಚ ಸ್ವರದಲ್ಲಿ "ಓ ಸಿದ್ದೀಕ್(ರ)ರ ಕುಟುಂಬವೇ ಇಸ್ಲಾಮಿನ ತಿಹಾಸದಲ್ಲಿ ಇದು ನಿಮ್ಮ ಮೊದಲ ಕೊಡುಗೆಯಲ್ಲ" ಎಂದರು. (ಅಂದರೆ ಮ್ಮಿಂದಾಗಿ ಇಂತಹ ಹಲವಾರು ಕೊಡುಗೆಗಳು ನಮಗೆ ದೊರೆತಿವೆ.)

ಮಗಳನ್ನು ಗದರಿಸಿ, ತಿವಿದು ಬಂದಿದ್ದ ಅಬೂಬಕರ್(ರ)ರು ಓಡುತ್ತಾ ೋಗಿ ಪ್ರೀತಿಯಿಂದ ಆಯಿಶಾ(ರ)ರ ಬಳಿ ಕುಳಿತು, "ಮಗಳೇ! ನೀನಿಷ್ಟು ಾಗ್ಯಶಾಲಿ ಎಂದು ನನಗೆ ತಿಳಿದಿರಲಿಲ್ಲ, ನಿನ್ನಿಂದಾಗಿ ಇಂದು ಇಡೀ ುಸ್ಲಿಮ್ ಸಮುದಾಯಕ್ಕೆ ಎಷ್ಟೊಂದು ಉಪಕಾರವಾಯಿತು" ಎಂದರು.

ಮತ್ತೊಂದು ಸ್ವಾರಸ್ಯಕರ ವಿಷಯವೆಂದರೆ, ಸರವು ಸಿಗದಿದ್ದಾಗ ಪ್ರವಾದಿವರ್ಯರು(ಸ) ಪ್ರಯಾಣ ಮುಂದುವರೆಸಲು ಆಜ್ಞಾಪಿಸಿದರು. "ಹ. ಆಯಿಶಾ(ರ)ರ ಒಂಟೆಯು ಎದ್ದು ನಿಂತುಕೊಂಡಿತು. 'ಸರ'ವು ಒಂಟೆಯ ಅಡಿಯಲ್ಲಿ ಬಿದ್ದಿತ್ತು." ಈ ಪ್ರಯಾಣದಲ್ಲೇ ಈ ಘಟನೆ ಸಂಭವಿಸಿ ತಯಮ್ಮುಮ್‌ನ ವಿಧಿ ಜಾರಿಗೊಳಿಸುವುದು ಅಲ್ಲಾಹನ ಇಚ್ಛೆಯಾಗಿತ್ತು. ಅಲ್ಲಾಹನಿಗೆ ಸ್ತುತಿ. ಒಟ್ಟಿನಲ್ಲಿ ಆಯಿಶಾ(ರ)ರ ಸ್ಥಾನಮಾನ ಹೆಚ್ಚಿಸಬೇಕಿತ್ತು.

## ತಖ್ಯೀರ್ ಸೂಕ್ತ:

**ಪೈಗಂಬರರೇ, ನಿಮ್ಮ ಪತ್ನಿಯರೊಡನೆ ಹೇಳಿರಿ– "ನೀವು ಈ ಲೋಕ ಮತ್ತು ಇದರ ವೈಭವಗಳನ್ನು ಇಚ್ಛಿಸುತ್ತೀರಾದರೆ– ಬನ್ನಿರಿ, ನಾನು ನಿಮಗೇನಾದರೂ ಕೊಡಿಸಿ ನಿಮ್ಮನ್ನು ಉತ್ತಮ ರೀತಿಯಲ್ಲಿ ಬೀಳ್ಕೊಡುತ್ತೇನೆ ಮತ್ತು ನೀವು ಅಲ್ಲಾಹ್, ಅವನ ಸಂದೇಶವಾಹಕರು ಮತ್ತು ಪರಲೋಕದ ಬೀಡನ್ನು ಇಚ್ಛಿಸುತ್ತೀರಾದರೆ, ನಿಮ್ಮಲ್ಲಿ ಸಜ್ಜನರಾಗಿರುವವರಿಗೆ ಅಲ್ಲಾಹ್ ದೊಡ್ಡ ಸತ್ಫಲವನ್ನು ಸಿದ್ಧಗೊಳಿಸಿಟ್ಟಿರುತ್ತಾನೆಂಬುದನ್ನು ತಿಳಿದುಕೊಳ್ಳಿರಿ."** **(33: 28–29)**

ತಖ್ಯೀರ್ ಎಂದರೆ ಪತ್ನಿಯಾದವಳಿಗೆ ತನ್ನ ಪತಿಯೊಂದಿಗೆ ಬಾಳುವ ಅಥವಾ ಅವನಿಂದ ಬೇರ್ಪಡುವ ಸ್ವಾತಂತ್ರ್ಯ ನೀಡುವುದು. ಎಲ್ಲಾ ಮುಶ್ರಿಕರು (ಮಕ್ಕಾದ ಕುರೈಶಿ ಸರದಾರರು, ಮದೀನಾದ ಆಸುಪಾಸಿನ ಯಹೂದಿಗಳು ಹಾಗೂ ಇತರ ಅರಬ್ ಗೋತ್ರಗಳು) ಒಟ್ಟು ಸೇರಿ ಅರೇಬಿಯಾದ ಪುಟ್ಟ ಗ್ರಾಮವಾದ ಮದೀನಾದ ಮೇಲೆ ದಾಳಿ ನಡೆಸುವ ಸಂದರ್ಭದಲ್ಲಿ ಈ ಸೂಕ್ತವು ಅವತೀರ್ಣಗೊಂಡಿತ್ತು. ಮದೀನಾಕ್ಕೆ ವಲಸೆ ಬಂದಿದ್ದ ಪ್ರವಾದಿ(ಸ)ರು ಮದೀನಾದಲ್ಲಿ ಇಸ್ಲಾಮಿನ ಆಡಳಿತವನ್ನು ಆರಂಭಿಸಿದ್ದರು. ಇಸ್ಲಾಮಿನ ಆಡಳಿತವು ಸಂಪೂರ್ಣವಾಗಿ ಸ್ಥಾಪಿತಗೊಂಡರೆ ನಮಗೆ ವಿನಾಶವಿದೆ ಎಂದರಿತ ಅರೇಬಿಯಾದ ದೊಡ್ಡ ದೊಡ್ಡ ಸರದಾರರು ಪ್ರವಾದಿವರ್ಯರ(ಸ) ವಿರುದ್ಧ ಯುದ್ಧ ಸಾರಲು ನಿರ್ಧರಿಸಿದರು. ಅರೇಬಿಯಾದಲ್ಲಿ ನಾವಿರಬೇಕೇ ಅಥವಾ ಇಸ್ಲಾಮಿನ ಧ್ವಜವಾಹಕರು ಇರಬೇಕೇ ಎಂಬುದು ನಿರ್ಣಾಯಕ ವಿಷಯವಾಗಿತ್ತು.

## ಪ್ರವಾದಿವರ್ಯರ(ಸ) ಸ್ಥಿತಿ:

ಆ ಸಂದರ್ಭದಲ್ಲಿ ಪ್ರವಾದಿವರ್ಯರ(ಸ) ಆರ್ಥಿಕ ಸ್ಥಿತಿಯು ಬಹಳ ಹದಗೆಟ್ಟಿತ್ತು. ಮದೀನಾಕ್ಕೆ ವಲಸೆ ಬಂದಾಗ ನಾಲ್ಕು ವರ್ಷಗಳ ಕಾಲ ಅವರ(ಸ) ಬಳಿ ಆದಾಯದ ಮೂಲ ಏನೂ ಇರಲಿಲ್ಲ. ಬಳಿಕ ಒಂದು ಕಾರ್ಯಾಚರಣೆಯಲ್ಲಿ ಅವರಿಗೆ(ಸ) ಜಮೀನಿನ ಒಂದು ಸಣ್ಣ ಭಾಗ

ದೊರಕಿತಾದರೂ ಅದರಿಂದ ಅವರ ಪತ್ನಿಯರ ಮೂಲಭೂತವಾದ ಸಣ್ಣ ಪುಟ್ಟ ಖರ್ಚು ವೆಚ್ಚಕ್ಕೂ ಸಾಕಾಗುತ್ತಿರಲಿಲ್ಲ. ಆ ವೇಳೆ ಪ್ರವಾದಿವರ್ಯರಿಗೆ(ಸ) ನಾಲ್ವರು ಪತ್ನಿಯರಿದ್ದರು. ಹ. ಸೌದ(ರ), ಹ. ಆಯಿಶಾ(ರ), ಹ. ಹಫ್ಸಾ(ರ) ಹಾಗೂ ಹ. ಉಮ್ಮು ಸಲಮ(ರ), ಇವರು ನಾಲ್ವರೂ ಅರಬ್ ಸಾಮ್ರಾಜ್ಯದ ಕುಲೀನ ಮನೆತನದ ಪುತ್ರಿಯರಾಗಿದ್ದರು. ಪ್ರವಾದಿವರ್ಯರು(ಸ) ತಮ್ಮ ಪತ್ನಿಯರನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಈ ಕರುಣೆ, ಪ್ರೀತಿ ಹಾಗೂ ವಿನಮ್ರತೆಯ ಹೊರತಾಗಿಯೂ ಅವರು(ಸ) ತಮ್ಮ ಪತ್ನಿಯರನ್ನು ಇತರ ಸ್ತ್ರೀಯರಿಗಾಗಿ ಮಾದರಿಯೋಗ್ಯರನ್ನಾಗಿ ಮಾಡಬಯಸುತ್ತಿದ್ದರು. ಜೊತೆಗೆ ಅವರು(ರ) ಪರಲೋಕವನ್ನು ಬಯಸುವವರಾಗಿದ್ದಾರೆಂದು ತಿಳಿಸುವುದು ಪ್ರವಾದಿರ್ಯರ(ಸ) ಉದ್ದೇಶವಾಗಿತ್ತು. ಆ ವೇಳೆ ನಾಲ್ದೆಸೆಯಿಂದಲೂ ಪ್ರವಾದಿವರ್ಯರ(ಸ) ಮೇಲೆ ಒತ್ತಡ ಹೆಚ್ಚಾಗತೊಡಗಿತ್ತು. ಒಂದೆಡೆ ಅರಬ್ ಸೈನ್ಯದ ದಾಳಿಯ ಭಯ, ಅವರ ವಿರುದ್ಧ ಯುದ್ಧ ಮಾಡಲು ಯೋಜನೆ ರೂಪಿಸುವುದು ಹಾಗೂ ತಯಾರಿ ನಡೆಸುವುದು ಒಂದು ದೊಡ್ಡ ಸವಾಲಾಗಿ ಪರಿಣಮಿಸಿತ್ತು. ಸ್ವತಃ ಮುಸ್ಲಿಮರು ಬಡತನದ ರೇಖೆಗಿಂತ ಕೆಳಗೆ ಜಾರಿದ್ದರು. ಅವರಿಗೆ ಏನಾದರೂ ಸಹಾಯ ಮಾಡುವುದು ಹಾಗೂ ಏನೂ ಇಲ್ಲದಿದ್ದರೂ ಕನಿಷ್ಠ ಪಕ್ಷ ಸಾಂತ್ವನ ನೀಡುವುದು ಪ್ರವಾದಿಯವರ(ಸ) ಕರ್ತವ್ಯವಾಗಿತ್ತು. ಎಲ್ಲಾ ಮುಸ್ಲಿಮರು ಬಾಳುತ್ತಿರುವಂತೆ ತಾನೂ ಅದೇ ರೀತಿ ಬಾಳಬೇಕಾಗಿತ್ತು. ಇಂತಹ ಸಂಕಷ್ಟದ ಪರಿಸ್ಥಿತಿಯಲ್ಲಿ ತನಗೆ ದೊರಕಿದ್ದನ್ನು ತನಗೆ ಹಾಗೂ ತನ್ನ ಕುಟುಂಬಿಕರಿಗೆ ಇರಿಸಿಕೊಳ್ಳುವುದು ಅಲ್ಲಾಹನ ಪ್ರವಾದಿಯವರ(ಸ) ಘನತೆ-ಗೌರವಕ್ಕೆ ವಿರುದ್ಧವಾಗಿತ್ತು. ನಿಮಗೆ ಆ ಘಟನೆ ನೆನಪಿರಬಹುದು. ಅರಬ್ ಸಾಮ್ರಾಜ್ಯದ ಮುಶ್ರಿಕರ ಮಿಶ್ರ ಸೇನೆಯನ್ನು ತಡೆಯಲು ಪ್ರವಾದಿಯವರು(ಸ) ಮದೀನಾದ ಆಸುಪಾಸಿನಲ್ಲಿ ಕಂದಕ ತೋಡಿಸುತ್ತಿದ್ದಾಗ ಸ್ವತಃ ಪ್ರವಾದಿಯವರು(ಸ) ಎಲ್ಲರೊಂದಿಗೆ ಸೇರಿ ಕಂದಕ ತೋಡುತ್ತಿದ್ದರು. ಇದೇ ಪರಿಸ್ಥಿತಿಯಲ್ಲಿ ಕೆಲವು ಮುಸ್ಲಿಮರು ಹಸಿವಿನ ಬೇಗೆ ತಾಳಲಾರದೆ ನಿತ್ರಾಣಗೊಳ್ಳುತ್ತಿದ್ದರು. ಅವರ ಸತ್ಯವಿಶ್ವಾಸ ಎಷ್ಟು ಬಲಿಷ್ಠವಾಗಿತ್ತೆಂದರೆ ಹೊಟ್ಟೆಗೆ ಕಲ್ಲುಗಳನ್ನು ಕಟ್ಟಿಕೊಂಡು ಕೆಲಸದಲ್ಲಿ ತಲ್ಲೀನರಾಗಿದ್ದರು. ಓರ್ವ ಮುಸ್ಲಿಮನು ನಿತ್ರಾಣದಿಂದ, ಓ ಪ್ರವಾದಿಗಳೇ(ಸ)! ಎನ್ನುತ್ತಾ ತಮ್ಮ ವಸ್ತ್ರವನ್ನು ಸರಿಸಿ ಹಸಿವೆ ತಾಳಲಾರದೆ ಹೊಟ್ಟೆಗೆ ಕಟ್ಟಿದ್ದ ಕಲ್ಲನ್ನು ತೋರಿಸಿದರು. ಆಗ ಪ್ರವಾದಿಯವರು(ಸ) ತಮ್ಮ ವಸ್ತ್ರವನ್ನು ಸರಿಸಿದರು. ಅಲ್ಲಾಹನ ಪ್ರವಾದಿಗಳೂ ತಮ್ಮ ಹೊಟ್ಟೆಯ ಮೇಲೆ ಎರಡು ಕಲ್ಲುಗಳನ್ನು ಕಟ್ಟಿಕೊಂಡಿದ್ದನ್ನು ನೋಡಿದ ಮುಸ್ಲಿಮರು ದಂಗಾದರು.!

## ಮದೀನಾದ ಕಪಟ ವಿಶ್ವಾಸಿಗಳು:

ಪ್ರವಾದಿಯವರ(ಸ) ಸಂಕಷ್ಟದ ಸಂದರ್ಭಕ್ಕೆ ಹೊಂಚು ಹಾಕುತ್ತಿದ್ದ ಮದೀನಾದ ಕಪಟ ವಿಶ್ವಾಸಿಗಳು ಪ್ರವಾದಿಯವರ(ಸ) ಮನೆಯನ್ನು ಗುರಿಯಾಗಿಸಿದರು. ಪ್ರವಾದಿಯವರ(ಸ) ಮನೆಗಳಲ್ಲಿ ಅರಾಜಕತೆ ಸೃಷ್ಟಿಸಲು ಮುನಾಫಿಕರು ತಮ್ಮ ಪತ್ನಿಯರನ್ನು ಅವರ(ಸ) ಮನೆಗಳಿಗೆ ಕಳುಹಿಸತೊಡಗಿದರು. ಪ್ರವಾದಿಯವರ(ಸ) ಪತ್ನಿಯರ ಬಳಿ ಬರುತ್ತಿದ್ದ ಈ ಕಪಟ ವಿಶ್ವಾಸಿ ಸ್ತ್ರೀಯರು, ಅಯ್ಯಯ್ಯೋ, ಎಂತಹ ಶ್ರೀಮಂತ ಕುಟುಂಬದ ಅರಬ್ ನಾಯಕರ ಪುತ್ರಿಯರಿವರು, ಹೂವಿನ ಹಾಸಿಗೆಯ ಯೋಗ್ಯತೆ ಹೊಂದಿದವರು ಇವರು. ಆದರೆ ಇವರಿಗೆ ಉಡಲು ಸರಿಯಾದ ಬಟ್ಟೆ ಹಾಗೂ ಹೊಟ್ಟೆಗೆ ಒಂದು ತುತ್ತು ಸರಿಯಾಗಿ ದೊರಕುತ್ತಿಲ್ಲದ್ದನ್ನು ನೋಡಿದರೆ ಖೇದವಾಗುತ್ತಿದೆ ಎಂದು ತೋರಿಕೆಯ ಸಹಾನುಭೂತಿ ವ್ಯಕ್ತಪಡಿಸುತ್ತಿದ್ದರು.

ಪ್ರವಾದಿಯವರು(ಸ) ಮನೆಯ ಹೊರಗೂ-ಒಳಗೂ ಕಿರುಕುಳಕ್ಕೆ ಒಳಗಾಗಬೇಕೆಂಬುದು ಕಪಟ ವಿಶ್ವಾಸಿಗಳ ದುರುದ್ದೇಶವಾಗಿತ್ತು. ಈ ದುರುದ್ದೇಶದಲ್ಲಿ ಅವರ ಪತ್ನಿಯರು ನಿಭಾಯಿಸಿದ ಪಾತ್ರವನ್ನು ನೀವು ಈಗಾಗಲೇ ಕಂಡಿದ್ದೀರಿ. ಹ. ಸೌದ(ರ) ಅನುಭವಿ ಹಾಗೂ ವೃದ್ಧರಾಗಿದ್ದರಿಂದ ಅವರ ಮೇಲೆ ಇದಾವುದೂ ಪ್ರಭಾವ ಬೀರಲಿಲ್ಲ. ಉಮ್ಮು ಸಲಮ(ರ)ರು ಗಂಭೀರ ಸ್ವಭಾವದ ಸ್ವಾವಲಂಬಿ ಸ್ತ್ರೀಯಾಗಿದ್ದರು. ಹ. ಹಫ್ಸ(ರ)ರು ಬಹಳ ಚಾಣಕ್ಷರಾಗಿದ್ದರು ಹಾಗೂ ಆ ಸಂದರ್ಭದಲ್ಲಿ ಆಯಿಶಾ(ರ)ರಿಗೆ 14 ವರ್ಷ ವಯಸ್ಸಾಗಿತ್ತು. ಆದುದರಿಂದ ಕಪಟ ವಿಶ್ವಾಸಿಗಳ ಕುತಂತ್ರವು ಅವರ ಮೇಲೂ ಪ್ರಭಾವ ಬೀರಲಿಲ್ಲ. ವಯಸ್ಸಿನಲ್ಲಿ ಕಿರಿಯರಾಗಿದ್ದ ಆಯಿಶಾ(ರ)ರು ಅನುಭವಿಯೂ ಆಗಿರಲಿಲ್ಲ. ಅವರು ಬಹಳ ಮುಗ್ಧರಾಗಿದ್ದರಿಂದ ಕಪಟ ವಿಶ್ವಾಸಿನಿಯರು ಅವರ ಮೇಲೆ ಹೆಚ್ಚು ಸಹಾನುಭೂತಿ ತೋರಿಸುತ್ತಿದ್ದರು.

ಹ. ಆಯಿಶಾ(ರ) ವಯಸ್ಸಿನಲ್ಲಿ ಕಿರಿಯರಾಗಿದ್ದರೂ, ಅವರ ವಾಕ್ಚಾತುರ್ಯವು ಅವರನ್ನು ಪ್ರವಾದಿ ಪತ್ನಿಯರ ನಾಯಕಿಯ ಸ್ಥಾನಮಾನವನ್ನು ನೀಡಿತ್ತು. ಕೊನೆಗೆ ಒಂದು ದಿನ ಪ್ರವಾದಿಪತ್ನಿಯರು ತಮಗೆ ದೊರೆಯುತ್ತಿರುವ ಆಹಾರ ಸಾಮಗ್ರಿಗಳು ಸಾಕಾಗುವುದಿಲ್ಲ. ಅದನ್ನು ಹೆಚ್ಚಿಸಬೇಕೆಂದು ಸಾಮೂಹಿಕ ಬೇಡಿಕೆಗಳನ್ನಿಟ್ಟರು. ಆದರೆ ಆ ವೇಳೆ ಪತ್ನಿಯರ ಬೇಡಿಕೆಗಳನ್ನು ಪೂರೈಸಲು ಪ್ರವಾದಿಯವರ(ಸ) ಬಳಿ ಏನೂ ಇರಲಿಲ್ಲ. ಈ ಬೇಡಿಕೆಯನ್ನಿಡುವುದರಲ್ಲಿ ಹ. ಆಯಿಶಾ(ರ) ಮುಂಚೂಣಿಯಲ್ಲಿದ್ದರು. ಪ್ರವಾದಿವರ್ಯರಿಗೆ ಮನೆಯ ಹಾಗೂ ಹೊರಗಿನ ಹೊಣೆಗಾರಿಕೆಗಳಿದ್ದುವು. ಈ ಸ್ಥಿತಿಯಲ್ಲಿ ಮನೆ ಖರ್ಚಿನ ಬಗ್ಗೆ ಪ್ರಯತ್ನಿಸುವಂತಿರಲಿಲ್ಲ.

ಜಾಬಿರ್ ಬಿನ್ ಅಬ್ದುಲ್ಲಾ(ರ)ರು ವರದಿ ಮಾಡಿರುತ್ತಾರೆ, ಒಂದು ದಿನ ಹ. ಅಬೂಬಕರ್(ರ) ಹಾಗೂ ಉಮರ್(ರ) ಪ್ರವಾದಿಯವರ(ಸ) ಬಳಿ ಬಂದರು. ಆಗ ಪ್ರವಾದಿಪತ್ನಿಯರು(ರ) ಪ್ರವಾದಿಯವರ(ಸ) ಸುತ್ತಲೂ ಕುಳಿತುಕೊಂಡಿದ್ದರು. ಪ್ರವಾದಿಯವರು(ಸ) ಸುಮ್ಮನೆ ಕುಳಿತುಕೊಂಡಿದ್ದನು ಇವರೀರ್ವರು ಗಮನಿಸಿದರು. ಪ್ರವಾದಿಯವರು(ಸ) ಹ. ಉಮರ್(ರ)ರ ಬಳಿ ಹೇಳಿದರು, ನೀವು ನೋಡುತ್ತಿರುವಂತೆ ಇವರು ನನ್ನ(ಸ) ಸುತ್ತಮುತ್ತ ಕುಳಿತುಕೊಂಡಿದ್ದಾರೆ. ಇವರು ಖರ್ಚಿಗಾಗಿ ನನ್ನ ಬಳಿ ಹಣ ಕೇಳುತ್ತಿದ್ದಾರೆ ಎಂದರು. ಅದನ್ನು ಕೇಳಿದ ಆ ಇಬ್ಬರು ಸಹಾಬಿಗಳು ತಮ್ಮ ಮಕ್ಕಳನ್ನು ಗದರಿಸುತ್ತಾ (ಅಂದರೆ ಅಬೂಬಕರ್(ರ) ಆಯಿಶಾ(ರ)ರನ್ನು ಹಾಗೂ ಉಮರ್(ರ)ರು ಹಫ್ಸಾ(ರ)ರನ್ನು), ನೀವು ಪ್ರವಾದಿಯವರಿಗೆ(ಸ) ತೊಂದರೆ ಕೊಡುತ್ತಿದ್ದೀರಿ ಹಾಗೂ ಅವರ(ಸ) ಬಳಿ ಇಲ್ಲದ ವಸ್ತುಗಳ ಬೇಡಿಕೆ ಇಡುತ್ತಿದ್ದೀರಾ ಎಂದರು.

ಈ ಪ್ರವಾದಿ ವಚನದಿಂದ ತಿಳಿದು ಬರುವುದೇನೆಂದರೆ ಆ ವೇಳೆಯಲ್ಲಿ ಪ್ರವಾದಿಯವರ(ಸ) ಆರ್ಥಿಕ ಸ್ಥಿತಿಯು ಬಹಳ ಹದಗೆಟ್ಟಿತ್ತು ಹಾಗೂ ಅದೇವೇಳೆ ಪ್ರವಾದಿ ಪತ್ನಿಯರು(ರ) ಖರ್ಚು ವೆಚ್ಚಕ್ಕಾಗಿ ಇಟ್ಟ ಬೇಡಿಕೆಗಳು ಪ್ರವಾದಿಯವರನ್ನು(ಸ) ಬಹಳ ದುಃಖಕ್ಕೀಡು ಮಾಡಿತ್ತು.

**ಅಲ್ಲಾಹನ ಸಹಾಯ:**

ಪ್ರವಾದಿ ಪತ್ನಿಯರನ್ನು ಪರೀಕ್ಷೆಗೊಳಪಡಿಸಿ ಅವರನ್ನು ಪರಿಶುದ್ಧರನ್ನಾಗಿಸಿ ಜಗತ್ತಿನ ಸಕಲ ಸ್ತ್ರೀಯರಿಗೆ ಮಾದರಿಯೋಗ್ಯರನ್ನಾಗಿಸುವುದು ಅಲ್ಲಾಹನ ಇಚ್ಛೆಯಾಗಿತ್ತು. ಜೊತೆಗೆ ಅಲ್ಲಾಹನು ಹ. ಆಯಿಶಾ(ರ)ರನ್ನು ಸ್ತ್ರೀಯರ ಪಾಲಿಗೆ ಪರಿಪೂರ್ಣ ಮಾದರಿಯನ್ನಾಗಿ ಮಾಡಲು ಬಯಸುತ್ತಿದ್ದುದರಿಂದ, ಜಗತ್ತಿನಲ್ಲಿ ಪರೀಕ್ಷೆಗಾಗಿ ಅವರನ್ನೇ(ರ) ಆರಿಸಿದನು. ಆದುದರಿಂದ ತಖ್ಯೀರ್ ಸೂಕ್ತವು ಅವತೀರ್ಣಗೊಳಿಸಿದನು.

ಈ ಸೂಕ್ತ ಅವತೀರ್ಣಗೊಂಡಾಗ ಮೊತ್ತ ಮೊದಲನೆಯದಾಗಿ ಹ. ಆಯಿಶಾ(ರ)ರ ಬಳಿಗೆ ಹೋದ ಪ್ರವಾದಿಯವರು(ಸ) ಅವರನ್ನುದ್ದೇಶಿಸಿ, ನಾನು ನಿನ್ನ(ರ) ಬಳಿ ಒಂದು ವಿಚಾರವನ್ನು ಹೇಳುತ್ತೇನೆ. ಉತ್ತರ ನೀಡಲು ಆತುರಪಡಬೇಡ. ನಿನ್ನ ಹೆತ್ತವರ ಅಭಿಪ್ರಾಯ ಕೇಳಿ ಬಳಿಕ ನಿರ್ಧಾರ ಕೈಗೊಳ್ಳು ಎಂದು ಆಯತುತ್ತಖ್ಯೀರ್ ಅನ್ನು ಪಠಿಸಿದರು.

ಆಯಿಶಾ(ರ)ರು ಕಿರಿಯರು ಹಾಗೂ ಅನನುಭವಿಯಾಗಿದ್ದರಿಂದ ಪ್ರವಾದಿಯವರ(ಸ) ಹೆತ್ತವರ ಅಭಿಪ್ರಾಯ ಕೇಳಿ ತೀರ್ಮಾನ ಕೈಗೊಳ್ಳಲು

ಸೂಚಿಸಿದ್ದರು. ಸೂಕ್ತ ಆಲಿಸಿದೊಡನೆ ಆಯಿಶಾ(ರ)ರು, ಓ ಪ್ರವಾದಿಗಳೇ(ಸ
ಈ ವಿಚಾರದಲ್ಲಿ ಅಲ್ಲಾಹನ ಆದೇಶವನ್ನು ಆಲಿಸಿ ಹೆತ್ತವರಲ್ಲಿ ಅಭಿಪ್ರಾಯ
ಕೇಳುವುದೇ? ನಾನಂತು ಅಲ್ಲಾಹ್, ಅಲ್ಲಾಹನ ಪ್ರವಾದಿ(ಸ) ಹಾಗು
ಪರಲೋಕವನ್ನು ಬಯಸುತ್ತೇನೆ ಎಂದರು. ಆಯಿಶಾ(ರ)ರು ಈ ಪರೀಕ್ಷೆಯ
ವಿಜಯಿಯಾಗಿ ಶುದ್ಧ ಚಿನ್ನವಾಗಿ ಹೊರಬಂದರು.

ಪ್ರವಾದಿಯವರು(ಸ) ಅವರ ಉತ್ತರವನ್ನು ಇತರ ಪತ್ನಿಯರಿಗೆ(ರ
ತಿಳಿಸಲಿಲ್ಲ. ಆದರೆ ಈ ಸೂಕ್ತ ಕೇಳಿದೊಡನೆ ಅವರೆಲ್ಲರೂ(ರ
ಆಯಿಶಾ(ರ)ರಂತೆಯೇ ಉತ್ತರಿಸಿದರು. ಕಪಟ ವಿಶ್ವಾಸಿಗಳ ಕುತಂತ್ರ
ಬುಡಮೇಲಾಯಿತು. ಪತ್ನಿಯರ ಪ್ರಾಮಾಣಿಕತೆಯಿಂದ ಪ್ರವಾದಿಯವರು(ಸ
ಸಂತುಷ್ಟರಾದರು. ಅಲ್ಲಾಹನ ಸಹಾಯ ದೊರೆತು, ಬಳಿಕ ಮನೆಯವರಿಂದಲ
ಸಂತೃಪ್ತಿ–ಶಾಂತಿ ದೊರೆತಾಗ ಪ್ರವಾದಿಯವರು(ಸ) ಪೂರ್ಣ ಶಕ್ತಿ–ಸಾಮರ್ಥ್ಯ
ಸ್ಥೈರ್ಯದೊಂದಿಗೆ ಕಂದಕ್ ಯುದ್ಧದಲ್ಲಿ ಪಾಲ್ಗೊಂಡರು ಹಾಗು
ಜಯಗಳಿಸಿದರು.

ಇಂತಹ ಪರೀಕ್ಷೆಯಲ್ಲಿ ಆಯಿಶಾ(ರ)ರು ನಿರ್ವಹಿಸಿದ ಪಾತ್ರ ಹಾಗು
ಅಲ್ಲಾಹನ ಆದೇಶ ಕೇಳಿದೊಡನೆ ನೀಡಿದ ಉತ್ತರವು ಇಂದಿನ ಆಧುನಿ
ಯುಗದ ಸ್ತ್ರೀಯರಿಗೆ ಅತ್ಯುತ್ತಮ ಮಾದರಿಯಾಗಿದೆ. ವಿಶೇಷವಾಗಿ ಇಸ್ಲಾಮಿ
ಆಂದೋಲನದಲ್ಲಿ ಮುಂಚೂಣಿಯಲ್ಲಿದ್ದು, ತನು–ಮನ–ಧನದಿಂ
ಹೋರಾಡುತ್ತಿರುವ ಪತಿಯಂದಿರ ಪತ್ನಿಯರಿಗೆ ಆಯಿಶಾ(ರ)ರ ಜೀವನ
ಅತ್ಯುತ್ತಮ ಮಾದರಿಯಾಗಿದೆ.

**ಜೇನುತುಪ್ಪದ ಘಟನೆ:**

**ಪ್ರೀತಿಯ ಮೇರೆಗಳು –**

ಮಾನವ ಸಮಾಜದಲ್ಲಿ ಪ್ರವಾದಿಯವರ(ಸ) ಸ್ಥಾನಮಾನವು ಅತ್ಯಂ
ಸೂಕ್ಷ್ಮವಾಗಿತ್ತು. ಇತರ ಮನುಷ್ಯರ ಜೀವನದಲ್ಲಿ ಘಟಿಸುವ ಒಂದು ಸಾಮಾ
ವಿಷಯವು ಅಷ್ಟೊಂದು ಮಹತ್ವಪೂರ್ಣವಾಗಿರುವುದಿಲ್ಲ. ಆದರೆ ಈ ಭೂಮಿಯ
ಮೇಲೆ ಅಲ್ಲಾಹನ ಪ್ರತಿನಿಧಿಯಾಗಿ ಆಗಮಿಸಿದ್ದ, ಅಲ್ಲಾಹನ ಆದೇಶಗಳನ
ಚಾಚೂತಪ್ಪದೆ ಪಾಲಿಸುತ್ತಿದ್ದ ಹಾಗೂ ಅದನ್ನು ಜೀವನದಲ್ಲಿ ಅಳವಡಿ
ಜನರಿಗೆ ಮಾದರಿಯುತರಾದ ಪ್ರವಾದಿವರ್ಯರ(ಸ) ಜೀವನದಲ್ಲಿ ಸಂಭವಿಸಿ
ಒಂದು ಸಾಮಾನ್ಯ ವಿಷಯವೂ ಬಹಳ ಮಹತ್ವಪೂರ್ಣದ್ದಾಗಿರುತ್ತಿತ್ತು ಹಾಗು
ಅದನ್ನು ಜನರು ಪಾಲಿಸುತ್ತಿದ್ದರು: ಬಳಿಕ ಅದನ್ನು ನ್ಯಾಯಬದ್ಧ ಗೊಳಿಸುತ್ತಿದ್ದರ

ಇದೇ ಕಾರಣದಿಂದ ಸಹಾಬಿಗಳು(ರ) ಐಚ್ಛಿಕ ಆರಾಧನೆಗಳನ್ನು ನಿರ್ವಹಿಸುತ್ತಿದ್ದಾಗ, ಇವು ಕಡ್ಡಾಯ ಕರ್ಮಗಳಲ್ಲ, ಬದಲಾಗಿ ಪ್ರವಾದಿಯವರು(ಸ) ಈ ರೀತಿ ಮಾಡುತ್ತಿದ್ದರು, ಆದುದರಿಂದ ನಾವೂ ಮಾಡುತ್ತಿದ್ದೇವೆ ಎಂದು ಸ್ಪಷ್ಟವಾಗಿ ಹೇಳುತ್ತಿದ್ದರು.

ಉದಾ: ಹಜರುಲ್ ಅಸ್ವದನ್ನು ಚುಂಬಿಸುವ ಘಟನೆ. ಪ್ರವಾದಿಯವರು(ಸ) ಒಂದು ಬಾರಿ ಹಜರುಲ್ ಅಸ್ವದ್ ಅನ್ನು ಚುಂಬಿಸಿದ್ದರಿಂದ, ಉಮರ್(ರ)ರೂ ಅದನ್ನು ಒಂದು ಬಾರಿ ಚುಂಬಿಸಿದರು. ಬಳಿಕ ಅದನ್ನುದ್ದೇಶಿಸಿ, "ಓ ಕಪ್ಪು ಶಿಲೆಯೇ? ಎಲ್ಲಾ ಶಿಲೆಗಳಂತೆ ನೀನೂ ಒಂದು ಶಿಲೆಯಾಗಿರುವಿ. ಅಂದರೆ ನಿನ್ನನ್ನು ಚುಂಬಿಸುವುದು ಕಡ್ಡಾಯವೇನಲ್ಲ ಹಾಗೂ ನೀನು ಆರಾಧನೆಗೂ ಯೋಗ್ಯವಲ್ಲ. ಪ್ರವಾದಿಯವರು(ಸ) ಒಂದು ಬಾರಿ ನಿನ್ನನ್ನು ಚುಂಬಿಸಿದ್ದರಿಂದ ನಾನೂ ನಿನ್ನನ್ನು ಚುಂಬಿಸಿದೆ" ಎಂದರು.

ಸಹಾಬಿಗಳು(ರ) ಮುಕ್ತವಾಗಿ/ಸ್ಪಷ್ಟವಾಗಿ ಹೇಳುತ್ತಿದ್ದ- ಇಂತಹ ಹಲವಾರು ಸಂದರ್ಭಗಳಿವೆ. ಒಂದು ಕಾನೂನಿನ ವಿಚಾರ ನೋಡೋಣ. ಹಲಾಲ್ (ಧರ್ಮಬದ್ಧ), ಹರಾಮ್ (ಧರ್ಮ ನಿಷಿದ್ಧ) ಹಾಗೂ ಅಮಾನ್ಯಗಳ ಮೇರೆಗಳನ್ನು ನಿಶ್ಚಯಿಸುವುದು ಏಕೈಕನಾದ ಅಲ್ಲಾಹನ ಅಧಿಕಾರದಲ್ಲಿದೆ. ಅಲ್ಲಾಹನು ಹರಾಮ್‌ಗೊಳಿಸಿದ್ದನ್ನು ಹಲಾಲ್‌ಗೊಳಿಸುವ, ಹಲಾಲ್ ಗೊಳಿಸಿದ್ದನ್ನು ಹರಾಮ್‌ಗೊಳಿಸುವ ಹಕ್ಕು ಪ್ರವಾದಿಯವರಿಗೂ(ಸ) ಇರಲಿಲ್ಲ.

ಪ್ರವಾದಿಯವರು(ರ) ತಮ್ಮ ಪತ್ನಿಯರನ್ನು ಬಹಳವಾಗಿ ಪ್ರೀತಿಸುತ್ತಿದ್ದರೆಂದು ನಮಗೆಲ್ಲಾ ತಿಳಿದಿದೆ. ಪ್ರವಾದಿಯವರು(ಸ) ಅಲ್ಲಾಹನ ಮೇರೆಯೊಳಗಿದ್ದುಕೊಂಡೇ ಪತ್ನಿಯರನ್ನು ಸಂತುಷ್ಟಪಡಿಸಲು ತಮ್ಮ ಕೈಲಾದಷ್ಟನ್ನು ಮಾಡುತ್ತಿದ್ದರು. ಒಮ್ಮೆ ಪತ್ನಿಯರ ಸಂತೋಷಕ್ಕಾಗಿ ಪ್ರವಾದಿಯವರು(ಸ) ಸ್ವಲ್ಪ ಮೆತ್ತಗಾದರು. ಈ ವಿಚಾರ ಅಷ್ಟೊಂದು ಮಹತ್ವಪೂರ್ಣದ್ದಾಗಿಲ್ಲದಿದ್ದರೂ ಅಲ್ಲಾಹನು ಈ ವಿಚಾರಕ್ಕೆ ಪ್ರವಾದಿಯವರನ್ನು(ಸ) ಟೀಕಿಸಿದನು.

ಅಲ್ಲಾಹನು ದತ್ತು ಪುತ್ರನನ್ನು ಸ್ವಂತ ಪುತ್ರನೆನ್ನುವ ಸಂಪ್ರದಾಯವನ್ನು ಮುರಿದನು. ಇದರಿಂದಾಗಿ ಪ್ರವಾದಿಯವರು(ಸ) ಬಾಲ್ಯದಲ್ಲಿ ಪುತ್ರನನ್ನಾಗಿ ಸ್ವೀಕರಿಸಿದ್ದ ಝೈದ್ ಬಿನ್ ಹಾರಿಸ(ರ)ರು ಅಲ್ಲಾಹನ ಆದೇಶದಂತೆ ಸ್ವಂತ ಪುತ್ರರಾಗಿ ಉಳಿಯಲಿಲ್ಲ. ಬಳಿಕ ಝೈದ್(ರ)ರು ತಮ್ಮ ಪತ್ನಿ ಝೈನಬ್(ರ)ರಿಗೆ ತಲಾಕ್ ನೀಡಿದರು. ಹ. ಝೈನಬ್(ರ)ರು ಪ್ರವಾದಿಯವರ(ಸ) ಪಿತೃ ಸಹೋದರಿಯಾಗಿದ್ದರು. ಅವರೊಂದಿಗೆ ವಿವಾಹವಾಗುವಂತೆ ಅಲ್ಲಾಹನು ಪ್ರವಾದಿಯವರಿಗೆ(ಸ) ಆದೇಶ ನೀಡಿದನು. ಅದರಂತೆ ಪ್ರವಾದಿ(ಸ) ಹಾಗೂ

ಝೈನಬ್(ರ)ರ ವಿವಾಹ ಜರುಗಿತು. ಆಯಿಶಾ(ರ)ರು ಹೇಳುತ್ತಾರೆ, ಸಂಜೆ ನಮಾಝ್‌ನ ಬಳಿಕ ಎಲ್ಲಾ ಪತ್ನಿಯರ ಬಳಿ ಹೋಗಿ ಕುಶಲೋಪರಿ ವಿಚಾರಿಸುವುದು ಪ್ರವಾದಿಯವರ(ಸ) ರೂಢಿಯಾಗಿತ್ತು. ಸ್ವಲ್ಪ-ಸ್ವಲ್ಪ ಸಮಯ ಹೀಗೆ ಎಲ್ಲರ ಬಳಿ ಹೋಗುತ್ತಿದ್ದರು. ಅದೊಂದು ದಿನ ಪ್ರವಾದಿಯವರು(ಸ) ಝೈನಬ್(ರ)ರ ಮನೆಯಲ್ಲಿ ವಾಡಿಕೆಗಿಂತ ಸ್ವಲ್ಪ ಹೆಚ್ಚಿನ ಸಮಯ ಕಳೆದರು. ಝೈನಬ್(ರ)ರಿಗೆ ಯಾರೋ ಸ್ವಲ್ಪ ಜೇನುತುಪ್ಪ ನೀಡಿದ್ದರು. ಪ್ರವಾದಿಯವರಿಗೆ(ಸ) ಜೇನುತುಪ್ಪ ಅತ್ಯಂತ ಪ್ರಿಯವಾಗಿತ್ತು. ಝೈನಬ್(ರ)ರು ಅದನ್ನು ಪ್ರವಾದಿಯವರಿಗೆ(ಸ) ನೀಡಿದರು. ಇದುವೇ ವಿಳಂಬಕ್ಕೆ ಕಾರಣವಾಗಿತ್ತು. ಮೊದಲ ದಿನ ಇತರ ಪ್ರವಾದಿಪತ್ನಿಯರು ಅದರ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಆದರೆ ಎರಡನೇ ಹಾಗೂ ಮೂರನೇ ದಿನವೂ ಅದು ಪುನರಾವರ್ತನೆಯಾದಾಗ ಅವರಲ್ಲಿ ಅಸೂಯೆ ಹುಟ್ಟಿಕೊಂಡಿತು. ವಿಶೇಷವಾಗಿ ಆಯಿಶಾ(ರ)ರಿಗೆ ಈ ವಿಚಾರವನ್ನು ಸಹಿಸಲಾಗಲಿಲ್ಲ. ಅವರು ಈ ವಿಚಾರವನ್ನು ಇತರ ಸವತಿಯರ ಮುಂದಿರಿಸಿದರು. ಪ್ರವಾದಿಯವರನ್ನು(ಸ) ಸ್ವಲ್ಪ ತಮಾಷೆ ಮಾಡಬೇಕೆಂದು ಅವರು ನಿರ್ಧರಿಸಿದರು.

ಪ್ರವಾದಿಯವರು(ಸ) ಬಂದೊಡನೆ, ತಮ್ಮ ಬಾಯಿಂದ ಮಗಾಫಿರ್‌ನ ವಾಸನೆ ಬರುತ್ತಿದೆ ಎಂದು ಹೇಳಬೇಕೆಂದು ಅವರು ನಿರ್ಧರಿಸಿದ್ದರು. ಮಗಾಫಿರ್ ಅರೇಬಿಯಾದಲ್ಲಿ ಬೆಳೆಯುವ ಒಂದು ಜಾತಿಯ ಹೂವು. ಅದು ಒಂದು ರೀತಿಯ ದುರ್ಗಂಧ ಭರಿತ ಹೂವು. ಒಂದು ವೇಳೆ ಜೇನು ನೊಣ ಆ ಹೂವಿನ ರಸವನ್ನು ಹೀರಿದ್ದರೆ ಆ ಜೇನು ತುಪ್ಪದಲ್ಲೂ ದುರ್ಗಂಧದ ಪ್ರಭಾವವಿರುತ್ತದೆ. ಕಿಂಚಿತ್ ದುರ್ಗಂಧವನ್ನೂ ಅಸಹ್ಯ ಪಡುತ್ತಿದ್ದ ಪ್ರವಾದಿಯವರಿಗೆ(ಸ) ಇದು ಸಹಿಸಲಿಕ್ಕಾಗದು. ನಮ್ಮ ಈ ಸಣ್ಣ ತಮಾಷೆಯಿಂದ ಪ್ರವಾದಿಯವರಿಗೆ(ಸ) ಝೈನಬ್(ರ) ಮನೆಯಲ್ಲಿನ ಜೇನುತುಪ್ಪ ಮಗಾಫೀರ್‌ನದ್ದಾಗಿದೆ ಎಂದು ಸಂಶಯ ಪಡುವರು ಹಾಗೂ ಪ್ರವಾದಿಯವರು(ಸ) ಅವರ(ರ) ಮನೆಯಲ್ಲಿ ಅಧಿಕ ಸಮಯ ಕಳೆಯಲಾರರು ಎಂಬುದು ಇತರ ಸವತಿಯರ ಉದ್ದೇಶವಾಗಿತ್ತು. ಅವರ(ರ) ಈ ತಮಾಷೆಯು ಫಲ ನೀಡಿತು. ಪತ್ನಿಯರ(ರ) ಮಾತನ್ನಾಲಿಸಿದ ಪ್ರವಾದಿಯವರು(ಸ) ತಾನು ಇನ್ನು ಮುಂದೆ ಜೇನುತುಪ್ಪ ಸೇವಿಸಲಾರೆ ಎಂದು ಶಪಥ ಮಾಡಿಬಿಟ್ಟರು.

ಪ್ರವಾದಿಯವರು(ಸ) ಒಂದು ನಿಷಿದ್ಧವಲ್ಲದ ವಸ್ತುವನ್ನು ಬಳಕೆ ಮಾಡುವುದಿಲ್ಲವೆಂದು ಶಪಥ ಮಾಡಿಕೊಂಡದ್ದು ಅದೊಂದು ದೊಡ್ಡ ವಿಚಾರವಾಗಿತ್ತು. ಅದು ಸಮುದಾಯಕ್ಕೆ ಕಾನೂನಾಗಿ ಮಾರ್ಪಡುತ್ತಿತ್ತು. ಆದುದರಿಂದ ಅಲ್ಲಾಹನು ಆ ಕೂಡಲೇ ಪ್ರವಾದಿಯವರನ್ನು(ಸ) ತಡೆಯುತ್ತಾ,

"ಸಂದೇಶವಾಹಕರೇ, ಅಲ್ಲಾಹನು ನಿಮಗೆ 'ಧರ್ಮಸಮ್ಮತ' ಗೊಳಿಸಿರುವ ವಸ್ತುವನ್ನು ನೀವೇಕೆ ನಿಷಿದ್ಧಗೊಳಿಸುತ್ತೀರಿ? ನೀವು ನಿಮ್ಮ ಪತ್ನಿಯರ ಮೆಚ್ಚುಗೆಯನ್ನು ಬಯಸುತ್ತೀರಿ (ಎಂಬ ಕಾರಣದಿಂದಲೇ?) ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ. ಅಲ್ಲಾಹನು ನಿಮಗೆ ನೀವು ಹಾಕಿದ ಆಣೆಗಳ ಪಾಲನೆಯಿಂದ ಮುಕ್ತರಾಗುವ ಕ್ರಮವನ್ನು ನಿಶ್ಚಯಿಸಿರುತ್ತಾನೆ. ಅಲ್ಲಾಹನು ನಿಮ್ಮ ಸಂರಕ್ಷಕನು ಮತ್ತು ಅವನೇ ಸರ್ವಜ್ಞನೂ ಯುಕ್ತಿ ಪೂರ್ಣನೂ ಆಗಿರುತ್ತಾನೆ."

(ಕುರ್‌ಆನ್ 66:1–2)

ಅಂದರೆ ಪತ್ನಿಯರ ಸಂತೋಷಕ್ಕಾಗಿ ಒಂದು ಹಲಾಲ್ ವಸ್ತುವನ್ನು ತಮ್ಮ ಮೇಲೆ ಹರಾಮ್‌ಗೊಳಿಸಿಕೊಂಡದ್ದು, ಅದು ನಿಮ್ಮಿಂದ(ಸ) ಸಂಭವಿಸಿ ಹೋಯಿತು. ಅದು ದೊಡ್ಡ ವಿಚಾರವೇನಾಗಿರದಿದ್ದರೂ ನಿಮಗೆ ಅದು ಒಳ್ಳೆಯದಲ್ಲ. ತಕ್ಷಣವೇ ಶಪಥವನ್ನು ಮುರಿಯಿರಿ. ಕಫ್ಫಾರ (ಪ್ರಾಯಶ್ಚಿತ್ತ) ನೀಡಿರಿ ಹಾಗೂ ಜೇನುತುಪ್ಪವನ್ನು ಬಳಸಿರಿ ಎಂದು ಅಲ್ಲಾಹನು ಆದೇಶ ನೀಡಿದನು.

ಆದೇಶದನ್ವಯ ಪ್ರವಾದಿಯವರು(ಸ) ಪುನಃ ಜೇನುತುಪ್ಪವನ್ನು ಬಳಸತೊಡಗಿದರು. ಹ. ಆಯಿಶಾ(ರ)ರ ಈ ತಮಾಷೆಯಿಂದ ಸಮುದಾಯದಲ್ಲಿ ಹರಡಬಹುದಾಗಿದ್ದ ಕ್ಷೋಭೆಯ ಬಾಗಿಲನ್ನು ಅಲ್ಲಾಹನು ಶಾಶ್ವತವಾಗಿ ಮುಚ್ಚಿಬಿಟ್ಟನು. ಪತ್ನಿಯ ಮೇಲೆ ಎಷ್ಟೇ ಪ್ರೀತಿಯಿದ್ದರೂ, ಅಲ್ಲಾಹನ ಆದೇಶಗಳನ್ನು ಬದಲಾಯಿಸಲು ಯಾರಿಂದಲೂ ಸಾಧ್ಯವಿಲ್ಲ ಎಂಬುದು ಇದರಿಂದ ಸಾಬೀತಾಯಿತು. ಜೇನುತುಪ್ಪದ ಈ ಘಟನೆ ಹಾಗೂ ಆಯಿಶಾ(ರ)ರ ಒಂದು ಸಣ್ಣಮಟ್ಟಿನ ಅಸೂಯೆಯಿಂದಾಗಿ ಇಡೀ ಸಮುದಾಯಕ್ಕೆ ಈ ಎಲ್ಲಾ ವಿಚಾರವು ತಿಳಿಯಿತು.

ಇದೇ ಘಟನೆಯನ್ನು 'ಮುಂದಿಟ್ಟುಕೊಂಡು ಉಲೆಮಾಗಳು, ಯಾವುದಾದರೂ ವಸ್ತುವಿನ ಮೇಲೆ ಯಾವುದೇ ಪ್ರಕಾರದಲ್ಲಿ ಶಪಥ ಮಾಡುವುದು, ಪ್ರತಿಜ್ಞೆ ಮಾಡುವುದು ಹಾಗೂ ಪ್ರತಿಜ್ಞೆಗೆ ಸಂಬಂಧಿಸಿ ವಿವಿಧ ರೀತಿಯ ನೀತಿ–ನಿಯಮಾವಳಿಗಳನ್ನು ರೂಪಿಸಿದ್ದಾರೆ.

## ಪ್ರವಾದಿವರ್ಯರ(ಸ) ಒಂದು ರಹಸ್ಯ ಘಟನೆ:

ಒಂದು ವೇಳೆ ಅಲ್ಲಾಹನು ಈ ರಹಸ್ಯದ ಕುರಿತು ಕುರ್‌ಆನಿನಲ್ಲಿ ಉಲ್ಲೇಖಿಸದಿಲ್ಲದಿರುತ್ತಿದ್ದರೆ ನಮಗೆ ಆ ರಹಸ್ಯದ ಕುರಿತು ಎಂದಿಗೂ ತಿಳಿಯುತ್ತಿರಲಿಲ್ಲ. ಅಲ್ಲಾಹನು ಸೂರ ಅತ್ತಹ್ರೀಮ್‌ನಲ್ಲಿ ಈ ರೀತಿ ಹೇಳುತ್ತಾನೆ, "(ಮತ್ತು ಈ ವಿಷಯವೂ ಗಮನಾರ್ಹವಾಗಿದೆ) ಪ್ರವಾದಿಯು ತಮ್ಮ ಓರ್ವ ಪತ್ನಿಯೊಡನೆ ಒಂದು ಮಾತನ್ನು

ರಹಸ್ಯವಾಗಿ ಹೇಳಿದ್ದರು. ತರುವಾಯ ಆ ಪತ್ನಿಯು (ಇನ್ನೊಬ್ಬರಿಗೆ) ಈ ರಹಸ್ಯವನ್ನು ಬಯಲುಗೊಳಿಸಿ ಬಿಟ್ಟಾಗ ಮತ್ತು ಅಲ್ಲಾಹನು ಪ್ರವಾದಿಗೆ ಈ (ರಹಸ್ಯವನ್ನು ಬಯಲುಗೊಳಿಸಿದ) ಸುದ್ದಿಯನ್ನು ತಿಳಿಸಿದಾಗ, ಅವರು ಅದರ ಸ್ವಲ್ಪಾಂಶವನ್ನು (ಆ ಪತ್ನಿಗೆ) ತಿಳಿಸಿದರು ಮತ್ತು ಸ್ವಲ್ಪಾಂಶವನ್ನು ಕಡೆಗಣಿಸಿದರು. ತರುವಾಯ ಪ್ರವಾದಿಯವರು ಅವರಿಗೆ ಆ (ರಹಸ್ಯವನ್ನು ಬಯಲುಗೊಳಿಸಿದ) ಸುದ್ದಿಯನ್ನು ತಿಳಿಸಿದಾಗ ಅವರು, "ನಿಮಗೆ ಈ ಸುದ್ದಿ ಕೊಟ್ಟವರಾರು?" ಎಂದು ಕೇಳಿದರು. ಪ್ರವಾದಿಯವರು, "ನನಗೆ ಸರ್ವಜ್ಞನೂ ವಿವರಪೂರ್ಣನೂ ಆಗಿರುವವನು ಸುದ್ದಿ ತಿಳಿಸಿದನು" ಎಂದರು.

(ಕುರ್‌ಆನ್ 66:3)

ಈ ಸೂಕ್ತದಿಂದ ತಿಳಿದು ಬರುವುದೇನೆಂದರೆ ಪ್ರವಾದಿಯವರು(ಸ) ಯಾವುದೋ ಒಂದು ರಹಸ್ಯವನ್ನು ಓರ್ವ ಪತ್ನಿಗೆ ತಿಳಿಸಿದ್ದರು. ಆದರೆ ಆ ಪತ್ನಿಯು ಆ ರಹಸ್ಯವನ್ನು ತನ್ನೋರ್ವ ಸವತಿಗೆ ತಿಳಿಸಿಬಿಟ್ಟಿದ್ದರು. ಇನ್ನು ಅಲ್ಲಾಹನ ಆದೇಶ ಮುಗಿದಿರಲಿಲ್ಲ. ಮುಂದುವರೆಸಿ ಅಲ್ಲಾಹನು ಈ ರೀತಿ ಹೇಳುತ್ತಾನೆ, "ನೀವಿಬ್ಬರೂ ಅಲ್ಲಾಹನೊಡನೆ ಪಶ್ಚಾತ್ತಾಪ ಪಡುತ್ತೀರಾದರೆ (ಇದು ನಿಮ್ಮ ಪಾಲಿಗೆ ಉತ್ತಮವಾಗಿದೆ). ಏಕೆಂದರೆ, ನಿಮ್ಮ ಹೃದಯಗಳು ನೇರ ಮಾರ್ಗದಿಂದ ಸರಿದು ಹೋಗಿವೆ ಮತ್ತು ನೀವು ಪ್ರವಾದಿಯ ವಿರುದ್ಧ ಗುಂಪುಗಾರಿಕೆ ನಡೆಸಿದರೆ, ಅಲ್ಲಾಹನು ಅವರ ಸಂರಕ್ಷಕನಾಗಿದ್ದಾನೆ ಮತ್ತು ಅವನ ನಂತರ ಜಿಬ್ರೀಲರು, ಎಲ್ಲ ಸಜ್ಜನ ಸತ್ಯವಿಶ್ವಾಸಿಗಳು ಮತ್ತು ಎಲ್ಲ ದೇವಚರರು ಅವರ ಸಂಗಾತಿಗಳೂ ಸಹಾಯಕರೂ ಆಗಿರುವರೆಂಬುದು ನಿಮಗೆ ತಿಳಿದಿರಲಿ."

(ಕುರ್‌ಆನ್ 66:4)

ಇದಲ್ಲದೆ ಅಲ್ಲಾಹನು ಈ ರಹಸ್ಯವನ್ನು ಇತರ ಪ್ರವಾದಿ ಪತ್ನಿಯರಿಗೆ ತಲುಪಬಾರದು ಎಂಬ ನಿಟ್ಟಿನಲ್ಲಿ ಗಂಭೀರ ಎಚ್ಚರಿಕೆ ಕೊಡುತ್ತಾ ಈ ರೀತಿ ಹೇಳುತ್ತಾನೆ, "ಪ್ರವಾದಿಯು ನಿಮಗೆಲ್ಲರಿಗೂ ತಲಾಕ್ ನೀಡಿದರೆ ಅಲ್ಲಾಹನು ಅವರಿಗೆ ನಿಮ್ಮ ಬದಲಿಗೆ ನಿಮಗಿಂತ ಉತ್ತಮರೂ ನೈಜ ಮುಸ್ಲಿಮರೂ ಸತ್ಯವಿಶ್ವಾಸವುಳ್ಳವರೂ ವಿಧೇಯರೂ ತೌಬಾ ಮಾಡುವವರೂ ಆರಾಧನಾಶೀಲೆಯರೂ ಉಪವಾಸ ವ್ರತ ಆಚರಿಸುವವರೂ ಆದ– ಹಿಂದೆ ವಿವಾಹವಾಗಿದ್ದ ಅಥವಾ ಕುಮಾರಿಯರಾಗಿರುವ ಪತ್ನಿಯರನ್ನು ದಯಪಾಲಿಸಬಹುದು."

(ಕುರ್‌ಆನ್ 66:5)

ಅಲ್ಲಾಹನ ಈ ಗಂಭೀರ ಎಚ್ಚರಿಕೆಯ ಪರಿಣಾಮ ಪತ್ನಿಯರಿಬ್ಬರೂ ಆ ರಹಸ್ಯವನ್ನು ನುಂಗಿಬಿಟ್ಟರು. ಅಲ್ಲಾಹನು ಎಚ್ಚರಿಕೆ ನೀಡುವಲ್ಲಿ ಸ್ವಲ್ಪವೂ ತಡಮಾಡಲಿಲ್ಲ ಹಾಗೂ ತನ್ನ ಸಂದೇಶವಾಹಕನಿಗೆ(ಸ) ತಕ್ಷಣ ಆ ವಿಚಾರವನ್ನು ತಿಳಿಸಿ ಸೂರಃ ಅತ್ತಹ್ರೀಮ್ ಅನ್ನು ಅವತೀರ್ಣಗೊಳಿಸಿದನು. ಆ ರಹಸ್ಯವು ಇಬ್ಬರು ಪತ್ನಿಯರ ಹೃದಯಗಳಲ್ಲೇ ಅದುಮಿ ಹೋಯಿತು– ಅಂದಿನಿಂದ ಇಂದಿನವರೆಗೂ ಅದು ರಹಸ್ಯವಾಗಿಯೇ ಉಳಿದಿದೆ.

ಒಂದು ವೇಳೆ ಸೂರ ಅತ್ತಹ್ರೀಮ್ ಅವತೀರ್ಣಗೊಂಡಾಗ ಮದೀನಾದಲ್ಲಿನ ಸ್ಥಿತಿಗತಿಗಳನ್ನು ಅವಲೋಕಿಸಿದರೆ ನಮಗೆ ಆ ರಹಸ್ಯದ ಮಹತ್ವವನ್ನು ಅಂದಾಜಿಸಬಹುದಾಗಿದೆ. ಹಿ.ಶ.8ರಲ್ಲಿ ಈ ಸೂರಃ ಅವತೀರ್ಣಗೊಂಡ ಸಂದರ್ಭದಲ್ಲಿ ಕಪಟವಿಶ್ವಾಸಿಗಳು ಹಾಗೂ ಅಕ್ಕಪಕ್ಕದ ಯಹೂದಿಗಳು ಒಟ್ಟು ಸೇರಿ ಇಸ್ಲಾಮಿನ ವಿರುದ್ಧ ಕುತಂತ್ರಗಳನ್ನು ಹೂಡುತ್ತಿದ್ದರು. ಅವರು ಪ್ರವಾದಿಯವರನ್ನು(ಸ) ಮೋಸದಿಂದ ಹತ್ಯೆಗೈಯಲು ಪ್ರಯತ್ನಿಸಿದರು, ವಿಷ ನೀಡಿ ಹತ್ಯೆಗೈಯಲು ಪ್ರಯತ್ನಿಸಿದರು. ಪ್ರವಾದಿಯವರ(ಸ) ಮೇಲೆ ಜಾದೂ ಮಾಡಿಸಿದರು. ಪ್ರವಾದಿಯವರ(ಸ) ಪ್ರಿಯ ಪತ್ನಿಯ ಮೇಲೆ ಅಪವಾದ ಹೊರಿಸಿದರು. ಪ್ರವಾದಿ(ಸ), ಉಮರ್(ರ) ಹಾಗೂ ಅಬೂಬಕರ್(ರ)ರವರ ನಡುವೆ ಜಗಳ ಕಾಯಿಸಿದರು. ಹೀಗೆ ಕಪಟವಿಶ್ವಾಸಿಗಳು ಪ್ರತೀದಿನ ಒಂದಿಲ್ಲೊಂದು ಕುತಂತ್ರ ಹೂಡುತ್ತಿದ್ದರು. ಪ್ರವಾದಿ(ಸ) ಇಂತಹ ದುಷ್ಟರಿಂದ ಮದೀನಾವನ್ನು ಪರಿಶುದ್ಧಗೊಳಿಸಲು ಬಯಸುತ್ತಿದ್ದರು.

ಇಂತಹ ಪರಿಸ್ಥಿತಿಯಲ್ಲಿ ಪ್ರವಾದಿಯವರು(ಸ) ತಮ್ಮೋರ್ವ ಪತ್ನಿಗೆ ತಿಳಿಸಿದ್ದ ಆ ರಹಸ್ಯವು ಒಂದು ವೇಳೆ ಶತ್ರುಗಳಿಗೆ ತಿಳಿದು ಬಿಡುತ್ತಿದ್ದರೆ ಇಸ್ಲಾಮೀ ಆಂದೋಲನ ಹಾಗೂ ಮುಸ್ಲಿಮರಿಗೆ ದೊಡ್ಡ ನಷ್ಟ ಅನುಭವಿಸಬೇಕಾಗಿ ಬರುತ್ತಿತ್ತು. ಅದೇ ರೀತಿ ಶತ್ರುಗಳು ಧಾಳಿ ಮಾಡುವ ಸಂಭವವೂ ಎದುರಾಗುತ್ತಿತ್ತು. ಅವರ ಅನಿರೀಕ್ಷಿತ ದಾಳಿಯನ್ನು ತಡೆಯುವುದೂ ಮುಸ್ಲಿಮರ ಪಾಲಿಗೆ ಕಷ್ಟಕರವಾಗಬಹುದಿತ್ತು. ಬಳಿಕ ಅಲ್ಲಾಹನಿಗೆ ಮುಸ್ಲಿಮರ ಸಹಾಯಕ್ಕಾಗಿ ಜಿಬ್ರೀಲ್(ಅ)ರನ್ನು ಕಳುಹಿಸಬೇಕಾಗಿ ಬರುತ್ತಿತ್ತು. ರಹಸ್ಯ ಬಯಲಾದುದರಿಂದ ಈ ಎಲ್ಲಾ ಅನಾಹುತ ಸಂಭವಿಸಿತೆಂದು ಪ್ರವಾದಿಯವರಿಗೆ(ಸ) ತಿಳಿಯುತ್ತಿದ್ದರೆ ಅವರು(ಸ) ತಮ್ಮ ಪತ್ನಿಯರಿಗೆ ತಲಾಕ್ ನೀಡಿ ಬಿಡುತ್ತಿದ್ದರು.

ಅಲ್ಲಾಹನ ಅಪಾರವಾದ ಅನುಗ್ರಹದಿಂದ ಈರ್ವರು ಮಾತ್ರವಲ್ಲ, ಪ್ರವಾದಿಯವರ(ಸ) ಇತರ ಪತ್ನಿಯರಿಗೂ ಪ್ರವಾದಿಯವರ(ಸ) ರಹಸ್ಯವನ್ನು ಬಯಲುಗೊಳಿಸದಂತೆ ಎಚ್ಚರಿಕೆ ನೀಡಲಾಯಿತು.

ಆ ರಹಸ್ಯವನ್ನು ಓರ್ವ ಪತ್ನಿ ಇನ್ನೋರ್ವ ಪತ್ನಿಗೆ ತಿಳಿಸಿದಾಗ ಪ್ರವಾದಿಯವರು(ಸ) ಬಹಳ ದುಃಖಿತರಾದರು. ಒಂದು ತಿಂಗಳವರೆಗೆ ಯಾವ ಪತ್ನಿಯೊಂದಿಗೂ ಮಾತನಾಡುವುದಿಲ್ಲವೆಂದು ಪ್ರವಾದಿಯವರು(ಸ) ಶಪಥ ಮಾಡಿದರು. ಅಂದು ಕುದುರೆಯಿಂದ ಬಿದ್ದು ಪ್ರವಾದಿಯವರ(ಸ) ಕಾಲಿಗೆ ಏಟು ತಗಲಿದ್ದ ಸಂದರ್ಭವಾಗಿತ್ತು. ಹ. ಆಯಿಶಾ(ರ) ಮನೆಗೆ ತಾಗಿ

ಒಂದು ಮಾಳಿಗೆ ಕೋಣೆಯಿತ್ತು. ಪ್ರವಾದಿಯವರು(ಸ) ಅಲ್ಲಿಗೆ ಹೋಗಿ ಏಕಾಂಗಿಯಾಗಿ ಉಳಿದುಕೊಂಡರು.

ಅಲ್ಲಾಹನ ವಾಣಿಯು ಅದಾಗಲೇ ಅವತೀರ್ಣಗೊಂಡಿತ್ತು. ಸೂಕ್ತಗಳ ಒಂದೊಂದು ಅಕ್ಷರವು ಮುಸ್ಲಿಮರ ಮನದಲ್ಲಿ ಅಚ್ಚೊತ್ತಲ್ಪಟ್ಟಿತ್ತು. ಕಪಟವಿಶ್ವಾಸಿಗಳು ತಮ್ಮ ಕುತಂತ್ರವನ್ನು ಆರಂಭಿಸಿದರು. ಪ್ರವಾದಿಯವರು(ಸ) ತಮ್ಮ ಪತ್ನಿಯರಿಗೆ ತಲಾಕ್ ನೀಡಿದ್ದಾರೆಂದು ಸುಳ್ಳು ವದಂತಿಗಳನ್ನು ಹಬ್ಬಿಸಿ ಬಿಟ್ಟರು. ಈ ವದಂತಿಯು ಸಹಾಬಿಗಳಿಗೆ(ಸ) ಮುಟ್ಟಿದಾಗ ಅವರೆಲ್ಲರೂ ಆತಂಕಗೊಂಡರು. ಅದರ ಬಗ್ಗೆ ಚರ್ಚಿಸಲು ಮಸೀದಿಗಳಲ್ಲಿ ಸಭೆ ಸೇರಿದರು. ಈ ವಿಷಯವನ್ನು ತಿಳಿದ ಸತ್ಯವಿಶ್ವಾಸಿ ಮಾತೆಯರು ಆತಂಕದಿಂದ ಅಳತೊಡಗಿದರು. ಪ್ರವಾದಿಯವರ(ಸ) ಬಳಿ ಹೋಗಿ ಈ ಕುರಿತು ವಿಚಾರಿಸಲು ಸಹಾಬಿಗಳಿಗೆ ಧೈರ್ಯವಿರಲಿಲ್ಲ. ಉಮರ್(ರ) ಈ ವಿಷಯ ತಿಳಿದೊಡನೆ, ಹಫ್ಸಾ ನಾಶವಾದಳು ಎಂದರು.

ಉಮರ್(ರ)ರು ಧೈರ್ಯ ತಂದುಕೊಂಡು, ಪ್ರವಾದಿಯವರ(ಸ) ಬಳಿ ಹೋದರು. ಎರಡು ಬಾರಿ ಅನುಮತಿ ಕೇಳಿದಾಗ ಅನುಮತಿ ಸಿಗಲಿಲ್ಲ. ಮೂರನೇ ಬಾರಿಗೆ ಪ್ರವಾದಿಯುವರು(ಸ) ಅನುಮತಿ ನೀಡಿದರು. ಪ್ರವಾದಿಯವರು(ಸ) ಒಂದು ಚಾಪೆಯಲ್ಲಿ ಮಲಗಿದ್ದರು. ಅವರ ಶರೀರದ ಮೇಲೆ ಅದರ ಅಚ್ಚು ಬಿದ್ದಿತ್ತು. ಉಮರ್(ರ) ಕೋಣೆಯಲ್ಲಿ ಅತ್ತ-ಇತ್ತ ದೃಷ್ಟಿ ಹಾಯಿಸಿದಾಗ ಖಾಲಿಯಾದ ಮಣ್ಣಿನ ಕೆಲವು ಪಾತ್ರೆಗಳು ಹಾಗೂ ಮಡಕೆಯ ವಿನಾ ಅಲ್ಲಿ ಏನೂ ಇರಲಿಲ್ಲ. ತೇವವಾದ ಕಣ್ಣುಗಳೊಂದಿಗೆ ಉಮರ್(ರ)ರು ಪ್ರವಾದಿಯವರ(ಸ) ಬಳಿ ಬಂದು, ಓ ಪ್ರವಾದಿಗಳೇ(ಸ)! ನೀವು ನಿಮ್ಮ ಪತ್ನಿಯರಿಗೆ ತಲಾಕ್ ಹೇಳಿದ್ದೀರಾ? ಎಂದು ಪ್ರಶ್ನಿಸಿದರು.

ಪ್ರವಾದಿಯವರು(ಸ) "ಇಲ್ಲ" ಎಂದರು.

ಹಾಗಾದರೆ ಈ ಸಂತಸದ ಸುದ್ದಿಯನ್ನು ಮುಸ್ಲಿಮರಿಗೆ ತಿಳಿಸಲೇ ಎಂದು ಉಮರ್(ರ) ಕೇಳಿದಾಗ, ಪ್ರವಾದಿಯವರು(ಸ) ತಿಳಿಸಿರಿ ಎಂದರು. ಹರ್ಷೋಲ್ಲಾಸದಿಂದ ಉಮರ್(ರ)ರು ಉಚ್ಚ ಸ್ವರದಿಂದ ಅಲ್ಲಾಹು ಅಕ್ಬರ್ ಎಂದಾಗ ಮುಸ್ಲಿಮರಲ್ಲಿ ಸಂತಸದ ಅಲೆ ಎದ್ದಿತು.

ಅದು 29 ದಿನಗಳ ತಿಂಗಳಾಗಿತ್ತು. ಸತ್ಯವಿಶ್ವಾಸಿ ಮಾತೆಯರು ಒಂದೊಂದು ದಿನವನ್ನೂ ಕಾತರದಿಂದ ಎಣಿಸುತ್ತಿದ್ದರು. 29ನೇ ತಾರೀಕಿನಂದು ಮಾಳಿಗೆ ಕೋಣೆಯಿಂದ ಇಳಿದು ಬಂದ ಪ್ರವಾದಿಯವರು(ಸ) ಮೊತ್ತ ಮೊದಲನೆಯದಾಗಿ ಆಯಿಶಾ(ರ)ರ ಮನೆಗೆ ತೆರಳಿದರು. ಅದು ಆಯಿಶಾ(ರ) ಹಾಗೂ

ಪ್ರವಾದಿ(ಸ)ಯವರ ಇತರ ಪತ್ನಿಯರಿಗೆ ಅತ್ಯಂತ ಸಂತಸದ ದಿನವಾಗಿತ್ತು. ಆದರೆ ಆಯಿಶಾ(ರ)ರು, ಓ ಪ್ರವಾದಿಗಳೇ(ಸ)! ಇವತ್ತು 29 ತಾರೀಕಲ್ಲವೇ? ಎಂದು ಹೇಳಿದರು. "ಆಯಿಶಾ! 29 ದಿನಗಳ ತಿಂಗಳು ಇರುವುದಿಲ್ಲವೇ!" ಎಂದು ಹೇಳಿ ಪ್ರವಾದಿಯವರು(ಸ) ಮುಗುಳ್ನಕ್ಕರು.

ಪ್ರವಾದಿಯವರು(ಸ) ತಮ್ಮ ಪತ್ನಿಯರಿಂದ ಒಂದು ತಿಂಗಳ ಕಾಲ ದೂರವಿರುವೆನೆಂದು ಮಾಡಿಕೊಂಡಿದ್ದ ಶಪಥವು ಕೊನೆಗೊಂಡಿತ್ತು. ಇಸ್ಲಾಮಿನಲ್ಲಿ ಇದಕ್ಕೆ ಈಲಾ ಎನ್ನುತ್ತಾರೆ. ನಂತರದ ದಿನಗಳಲ್ಲಿ ದೊಡ್ಡ ದೊಡ್ಡ ವಿದ್ವಾಂಸರು ಈಲಾದ ಕುರಿತು ಹಲವಾರು ಸಮಸ್ಯೆಗಳಿಗೆ ಪರಿಹಾರ ಸೂಚಿಸಿದ್ದರಾದರೂ, ಆ ರಹಸ್ಯವು ಇಂದಿನವರೆಗೂ ಯಾರಿಗೂ ತಿಳಿಯಲಿಲ್ಲ. ಆ ರಹಸ್ಯವನ್ನು ಭೇದಿಸಲು ಯಾರೂ ಪ್ರಯತ್ನ ಪಡಲಿಲ್ಲ. ಸಹಾಬಿಗಳೂ(ರ) ಆ ರಹಸ್ಯವನ್ನು ಪತ್ತೆಹಚ್ಚಲು ಮುಂದಾಗಲಿಲ್ಲ. ಆದರೆ ಉಮರ್(ರ)ರ ಶಿಷ್ಯರು ಹಾಗೂ ಕೆಲವು ಸಮಸ್ಯೆಗಳ ಬಗ್ಗೆ ಆಯಿಶಾರೊಂದಿಗೆ(ರ) ಚರ್ಚೆ ನಡೆಸುತ್ತಿದ್ದ ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ)ರಿಗೆ ಹೇಗಾದರೂ ಮಾಡಿ ಆ ಈರ್ವರು ಪತ್ನಿಯರು ಯಾರೆಂದು ತಿಳಿಯಬೇಕೆಂಬ ಕುತೂಹಲ ಮನೆ ಮಾಡಿತ್ತು. ಅವರು(ರ) ಯಾವ ರೀತಿ ತನಿಖೆ ನಡೆಸಿದರೆಂದು ಸ್ವತಃ ಅವರೇ ಹೇಳುತ್ತಾರೆ, ಪ್ರವಾದಿಯವರ(ಸ) ರಹಸ್ಯವನ್ನು ತಿಳಿಸಿದ ಈರ್ವರು ಪತ್ನಿಯರು ಯಾರೆಂದು ಉಮರ್(ರ)ರವರಲ್ಲಿ ಯಾವ ರೀತಿ ಕೇಳಬೇಕೆಂದು ಯೋಚಿಸುತ್ತಲೇ ಕೆಲವು ದಿನಗಳು ಕಳೆದು ಹೋದವು. ಈ ಕುರಿತು ಅವರಲ್ಲಿ ಕೇಳಲು ನನಗೆ ಭಯವಾಗುತ್ತಿತ್ತು. ಕೊನೆಗೆ ಒಮ್ಮೆ ಉಮರ್(ರ)ರು ಹಜ್ಜ್‌ಗೆ ತೆರಳಿದ್ದ ವೇಳೆಯಲ್ಲಿ ನಾನೂ ಅವರ ಜೊತೆಗಿದ್ದೆ. ಹಿಂದಿರುಗುವ ವೇಳೆ ಒಂದೆಡೆ ವುಝೂ ಮಾಡುತ್ತಿದ್ದಾಗ ಆ ಕುರಿತು ವಿಚಾರಿಸುವುದಕ್ಕೆ ತಕ್ಕ ಸಮಯ ದೊರಕಿತು. ನಾನು ಕೇಳಿಯೇ ಬಿಟ್ಟೆ. ಆಗ ಅವರು(ರ), ಅವರೀರ್ವರು ಹಫ್ಸಾ(ರ) ಹಾಗೂ ಆಯಿಶಾ(ರ) ಎಂದು ಹೇಳಿದರು.

ಬಳಿಕ ಉಮರ್(ರ)ರು ಹೇಳಿದರು, ಕುರೈಶರಾದ ನಾವು ಸ್ತ್ರೀಯರ ಮೇಲೆ ಆಧಿಪತ್ಯ ಹೊಂದಿದವರಾಗಿದ್ದೆವು. ಮದೀನಾಕ್ಕೆ ಬಂದಾಗ ಸ್ತ್ರೀಯರು ಪುರುಷರ ಮೇಲೆ ಆಧಿಪತ್ಯ ಹೊಂದಿರುವುದನ್ನು ಕಂಡೆ. ಅವರಿಂದ ನಮ್ಮ ಸ್ತ್ರೀಯರೂ ಕಲಿತುಕೊಂಡರು (ಪತ್ನಿಯರ ಮೇಲೆ ಮೃದು ಧೋರಣೆಯನ್ನು ತಾಳಿರಿ ಎಂದು ಪ್ರವಾದಿಯವರು(ಸ) ಉಪದೇಶಿಸಿದ್ದಾರೆ. ಸ್ವತಃ ಇದಕ್ಕೆ ಮಾದರಿಯಾಗಿದ್ದಾರೆ). ಒಂದು ದಿನ ಏನೋ ಕಾರಣಕ್ಕಾಗಿ ನಾನು ಪತ್ನಿಯನ್ನು ಗದರಿಸಿದೆ. ಆಕೆ ನನ್ನ ಮೇಲೆ ರೇಗಿ ಬಿದ್ದಳು. ನನಗೆ ಬಹಳ ಬೇಸರವಾಯಿತು. ಕೋಪವೂ ಬಂತು. ಆಗ ಆಕೆ ಹೇಳಿದಳು, ನನ್ನ ಮಾತನ್ನು ಕೇಳಿ

ಕುಪಿತರಾಗುತ್ತಿರೇಕೆ? ಅಲ್ಲಾಹನಾಣೆ! ಪ್ರವಾದಿಪತ್ನಿಯರೂ ಅವರ(ಸ) ಮೇಲೆ ರೇಗಾಡುತ್ತಾರಲ್ಲವೇ? ಇದನ್ನು ಕೇಳಿದೊಡನೆ ನಾನು ಮನೆಯಿಂದ ಹೊರ ನಡೆದೆ. ನೇರವಾಗಿ ಹಫ್ಸಾಳ(ರ) ಮನೆಗೆ ತೆರಳಿ ಆಕೆಯಲ್ಲಿ ಈ ಕುರಿತು ವಿಚಾರಿಸಿದೆ, "ಮಗಳೇ! ನೀನು ಪ್ರವಾದಿಯವರ(ಸ) ಮೇಲೆ ರೇಗಾಡುತ್ತಲೂ, ಕಲಹ ಮಾಡುತ್ತಲೂ ಇರುತ್ತೀಯಾ?." ಆಕೆ ಹೌದೆಂದು ಉತ್ತರಿಸಿದಳು. ನಾನು ಮರು ಪ್ರಶ್ನಿಸಿದೆ, ನಿಮ್ಮಲ್ಲಿ ಯಾರಾದರೂ ಪ್ರವಾದಿಯವರಿಂದ(ಸ) ಮುನಿಸಿಕೊಳ್ಳುತ್ತಿರುವರೇ?. ಆಗ ಆಕೆ(ರ) ಹೌದೆಂದು ಒಪ್ಪಿಕೊಂಡಳು. ಆಗ ನಾನು, ಪ್ರವಾದಿಯವರು(ಸ) ಕುಪಿತಗೊಂಡರೆ ಅಲ್ಲಾಹನು ಕುಪಿತಗೊಳ್ಳುವನೆಂದು ನಿನಗೆ ತಿಳಿಯದೇ? ಅಲ್ಲಾಹನ ಕೋಪಕ್ಕೆ ಪಾತ್ರಳಾದವಳು ನಾಶವಾದಂತೆಯೇ ಸೈ. ನೋಡು ಇನ್ನು ಮುಂದೆ ಪ್ರವಾದಿಯವರ(ಸ) ಮೇಲೆ ರೇಗಾಡಬೇಡ. ಅವರಲ್ಲಿ ಯಾವುದೇ ವಸ್ತುವಿನ ಬೇಡಿಕೆಯನ್ನಿರಿಸಬೇಡ. ನಿನಗೆ ಏನೂ ಬೇಕಿದ್ದರೂ ನನ್ನ ಬಳಿ ಕೇಳಿ ಪಡೆದುಕೋ. ನಿನ್ನ ನೆರೆಯಾಕೆ ಆಯಿಶಾ(ರ)ಳನ್ನು ನೋಡಿ ಮೋಸ ಹೋಗಬೇಡ. ಆಕೆ ನಿನಗಿಂತ ಸುಂದರಿ ಹಾಗೂ ಪ್ರವಾದಿಗೆ(ಸ) ಪ್ರಿಯಳಾಗಿದ್ದಾಳೆ ಎಂದು ಎಚ್ಚರಿಸಿ ಅಲ್ಲಿಂದ ಹಿಂದಿರುಗಿದೆ.

ಬಳಿಕ ನನ್ನ ಸಂಬಂಧಿ ಹಾಗೂ ಪ್ರವಾದಿ ಪತ್ನಿಯಾದ ಉಮ್ಮು ಸಲಮ(ರ)ರ ಬಳಿ ಹೋದೆ, ನಾನು ಆ ಕುರಿತು ಅವರ ಬಳಿ ವಿಚಾರಿಸಿದೆ. ಅವರೆಂದರು, ಹೇ ಉಮರ್! ನೀವೊಂದು ವಿಚಿತ್ರ ಮನಷ್ಯರಾಗಿದ್ದೀರಿ. ಪ್ರತಿಯೊಂದು ವಿಚಾರದಲ್ಲೂ ಮಧ್ಯ ಪ್ರವೇಶಿಸುತ್ತೀರಿ. ಈಗ ಪ್ರವಾದಿ(ಸ) ಹಾಗೂ ಅವರ ಪತ್ನಿಯರ ವಿಚಾರದಲ್ಲೂ ಹಸ್ತಕ್ಷೇಪ ನಡೆಸುತ್ತಿದ್ದೀರಿ. ಅವರ ಆ ಮಾತುಗಳು ನನ್ನನ್ನು ನಿರುತ್ತರಿಗೊಳಿಸಿತು.

ನನಗೋರ್ವ ಅನ್ಸಾರಿ. ನೆರೆಯವರಿದ್ದರು. ನಾವೀರ್ವರೂ ಸರದಿಯಂತೆ ಎರಡು ದಿನಗಳಿಗೊಮ್ಮೆ ಪ್ರವಾದಿಯವರ ಬಳಿಗೆ ಹೋಗುತ್ತಿದ್ದೆವು. ಅವರು ಹೋದರೆ ಅಂದಿನ ವರ್ತಮಾನವನ್ನು ನನಗೆ ತಿಳಿಸುತ್ತಿದ್ದರು. ನಾನು ಹೋದರೆ ಅವರಿಗೆ ತಿಳಿಸುತ್ತಿದ್ದೆ. ಅಂದು ನಾವು ಗಝ್ಝಾನ್‌ನವರು ಯುದ್ಧ ಸನ್ನಾಹ ಮಾಡುತ್ತಿರುವ ಕುರಿತು ಚರ್ಚಿಸಿದ್ದೆವು. ಒಂದು ದಿನ ಅನ್ಸಾರಿ ಸ್ನೇಹಿತರು ರಾತ್ರಿ ವೇಳೆ ಬಾಗಿಲು ತಟ್ಟಿದರು. ನಾನು ಬಾಗಿಲು ತೆರೆದೆ. ಒಂದು ಘಟನೆ ನಡೆದಿದೆ ಎಂದು ಅವರು ಹೇಳಿದರು. ಏನು ಗಝ್ಝಾನ್‌ನವರು ಬಂದರೇ? ಎಂದು ನಾನು ಪ್ರಶ್ನಿಸಿದೆ. ಅದಕ್ಕಿಂತ ದೊಡ್ಡ ಘಟನೆ. ಪ್ರವಾದಿವರ್ಯರು(ಸ) ಪತ್ನಿಯರಿಗೆ ತಲಾಕ್ ಹೇಳಿದ್ದಾರೆ ಅವರು ಹೇಳಿದರು, "ಹಫ್ಸಾ ನಾಶವಾದಳು. ಭೀತಿಪಟ್ಟಂತೆಯೇ ಆಯಿತು." ನಾನು ಸ್ವಯಂ ಹೇಳಿಕೊಂಡೆ.

ಪ್ರಭಾತ ನಮಾಝ್ ಬಳಿಕ ನಾನು ಹಫ್ಸಾಳ ಬಳಿಗೆ ಹೋದೆ. ಆಕೆ ಅಳುತ್ತಿದ್ದಳು. ಪ್ರವಾದಿ(ಸ) ನಿಮಗೆ ತಲಾಕ್ ಹೇಳಿರುವರೇ? ನಾನು ಪ್ರಶ್ನಿಸಿದೆ. ಆಕೆ ಹೇಳಿದಳು: ನನಗೇನೂ ತಿಳಿಯದು. ಅವರು ಅದೋ ಮಹಡಿಯ ಕೋಣೆಯಲ್ಲಿದ್ದಾರೆ. ನಾನು ಅಲ್ಲಿಗೆ ಹೋದೆ. ಆದರೆ ಒಳಗೆ ಹೋಗಲು ಒಪ್ಪಿಗೆ ದೊರೆಯಲಿಲ್ಲ. ವೇದಿಕೆಯ ಬಳಿ ಹೋದಾಗ ಅಲ್ಲಿ ತುಂಬಾ ಮಂದಿ ಕುಳಿತಿದ್ದರು. ಕೆಲವರು ಅಳುತ್ತಿದ್ದರು. ನಾನು ಪುನಃ ಪ್ರವಾದಿಯವರ(ಸ) ಪರಿಚಾರಕನ ಬಳಿ ಹೋಗಿ ಅನುಮತಿ ಕೇಳಿದೆ. ಈ ಬಾರಿಯೂ ನನಗೆ ಅನುಮತಿ ಸಿಗಲಿಲ್ಲ. ಅಲ್ಲಿಂದ ಹಿಂತಿರುಗುವಾಗ ಪರಿಚಾರಕ ನನ್ನನ್ನು ಕರೆದ. ಅನುಮತಿ ನೀಡಿರುವರೆಂದು ತಿಳಿಸಿದ. ನಾನು ಒಳಗೆ ಹೋದೆ.

ನಂತರದ ಘಟನೆಯನ್ನು ನಾವು ಈಗಾಗಲೇ ತಿಳಿಸಿದ್ದೇವೆ. ರಹಸ್ಯವನ್ನು ಪರಸ್ಪರ ಬಯಲುಗೊಳಿಸಿದ ಆ ಇಬ್ಬರು ಪತ್ನಿಯರ ಹೆಸರು ನಮಗೆ ತಿಳಿಯಿತು. ಆದರೆ ಆ ರಹಸ್ಯವೇನು ಎಂಬುದು ನಮಗೆ ಇಂದಿನ ವರೆಗೂ ತಿಳಿದಿಲ್ಲ. ಈ ಘಟನೆ ನಡೆದ ಬಳಿಕ ಎರಡು ವರ್ಷದ ನಂತರ ಪ್ರವಾದಿಯವರು(ಸ) ನಿಧನರಾದರು. ಈ ಘಟನೆಯು ಆಯಿಶಾ(ರ)ರ ಪಾಲಿಗೆ ಕೊನೆಯ ತರಬೇತಿಯಾಗಿತ್ತು.

## ಪ್ರವಾದಿ(ಸ)ಯವರ ನಿಧನ:

ಆಯಿಶಾ(ರ)ರು ಏಳನೇ ವರ್ಷ ವಯಸ್ಸಿನಲ್ಲಿ ಪ್ರವಾದಿಯವರನ್ನು(ಸ) ವಿವಾಹವಾಗಿದ್ದರು. ತನ್ನ ಒಂಭತ್ತನೇ ವರ್ಷ ವಯಸ್ಸಿನಲ್ಲಿ ತವರು ಮನೆಗೆ ವಿದಾಯ ಕೋರಿದ್ದರು. ಬಳಿಕ ಒಂಭತ್ತು ವರ್ಷಗಳ ಕಾಲ ಪ್ರವಾದಿಯೊಂದಿಗೆ(ಸ) ನಡೆಸಿದ ಕೌಟುಂಬಿಕ ಜೀವನವನ್ನು ಈಗಾಗಲೇ ತಿಳಿಸಲಾಗಿದೆ. ಸಣ್ಣ ಪ್ರಾಯದಲ್ಲೇ ಪ್ರವಾದಿಯವರನ್ನು(ಸ) ವರಿಸಿದ್ದು ಆಯಿಶಾ(ರ)ರ ಸೌಭಾಗ್ಯವಾಗಿತ್ತು. ಪ್ರೌಢಾವಸ್ಥೆಗೆ ತಲುಪಿದೊಡನೆ ಅವರು(ರ) ಪ್ರವಾದಿ(ಸ)ಯವರಿಂದ ಪಡೆದ ತರಬೇತಿಯ ಭಾಗ್ಯವು ಬೇರಾವ ಪತ್ನಿಯರಿಗೂ ದೊರಕಲಿಲ್ಲ. ಆಯಿಶಾ(ರ)ರಿಗೆ ತರಬೇತಿ ನೀಡುವಲ್ಲಿ ಪ್ರವಾದಿಯವರೂ(ಸ) ಬಹಳ ಶ್ರಮಿಸಿದರು. ಆಯಿಶಾ(ರ)ರು ಹದಿನೆಂಟು ವರ್ಷ ವಯಸ್ಸಿನವರಾಗಿದ್ದಾಗ ಪ್ರವಾದಿಯವರು(ಸ) ಇಹಲೋಕ ತ್ಯಜಿಸಿದರು.

ಪ್ರವಾದಿಯವರ(ಸ) ನಿಧನದ ಎಲ್ಲಾ ವಿಚಾರವನ್ನು ಸ್ವತಃ ಆಯಿಶಾ(ರ)ರು ವಿವರಿಸಿದ್ದು ಈ ರೀತಿ ಇದೆ, "ಹಿ.ಶ. 11 ಸಫರ್ ತಿಂಗಳಾಗಿತ್ತು. ಒಂದು ದಿನ ಆಯಿಶಾ(ರ)ರು ತೀವ್ರ ತಲೆನೋವಿನಿಂದ ಬಳಲುತ್ತಿದ್ದರು. ಅಷ್ಟರಲ್ಲೇ ಪ್ರವಾದಿಯವರು(ಸ) ಆಯಿಶಾ(ರ)ರ ಮನೆಯೊಳಗೆ ಪ್ರವೇಶಿಸಿದರು.

ಆಯಿಶಾ(ರ)ರ ಅವಸ್ಥೆಯನ್ನು ಕಂಡು ಪ್ರವಾದಿಯವರು(ಸ) ತಮ್ಮ ತಲೆಯನ್ನು ಹಿಡಿದುಕೊಂಡು "ಅಯ್ಯೋ ನನ್ನ ತಲೆ" ಎಂದರು. ಅದೇ ವೇಳೆ ಪ್ರವಾದಿಯವರಿಗೂ(ಸ) ತೀವ್ರ ತಲೆ ನೋವು ಕಾಡಿತು. ಅಂದು ಮೈಮೂನ(ರ)ರ ಸರದಿಯಾಗಿತ್ತು. ಆದುದರಿಂದ ಪ್ರವಾದಿಯವರು(ಸ) ಅವರ ಮನೆಗೆ ತೆರಳಿ ಮಲಗಿಬಿಟ್ಟರು. ಬಳಿಕ ನಾಳೆ ಯಾರ ಸರದಿ ಎಂದು ಕೇಳಿದರು. ಹೀಗೆ ಸರದಿಯಂತೆ ಅವರು(ಸ) ತಮ್ಮ ಪತ್ನಿಯರ ಮನೆಗೆ ಹೋಗುತ್ತಿದ್ದರು. ಇದರ ಮಧ್ಯದಲ್ಲೇ ಆಯಿಶಾ(ರ)ರು ಒಂದು ಕನಸು ಕಂಡಿತು. ಕನಸಿನಲ್ಲಿ ಮೂರು ಚಂದ್ರಗಳು ಆಕಾಶದಿಂದ ಉದುರಿ ಆಯಿಶಾ(ರ)ರ ಮನೆಯಲ್ಲಿ ಬಂದು ಬಿದ್ದುವು. ಅವರು(ರ) ಅಬೂಬಕರ್(ರ)ರ ಬಳಿ ಕನಸಿನ ಮರ್ಮ ಕೇಳಿದರು. ಆದರೆ ಅಬೂಬಕರ್(ರ) ಉತ್ತರಿಸದೆ ಮೌನ ವಹಿಸಿದರು.

ಪ್ರವಾದಿಯವರು(ಸ) ಆಯಿಶಾ(ರ)ರನ್ನು ಎಷ್ಟೊಂದು ಪ್ರೀತಿಸುತ್ತಿದ್ದರು ಮತ್ತು ಯಾಕೆ ಅವರನ್ನು ಪ್ರೀತಿಸುತ್ತಿದ್ದರೆಂಬುದು ಪ್ರವಾದಿವರ್ಯರ(ಸ) ಎಲ್ಲಾ ಪತ್ನಿಯರಿಗೆ ತಿಳಿದಿದ್ದ ವಿಚಾರ. ಆಯಿಶಾ(ರ)ರ ಸ್ಮರಣ ಶಕ್ತಿ ಎಲ್ಲಾ ಪ್ರವಾದಿಯವರ ಎಲ್ಲ ಪತ್ನಿಯರಿಗಿಂತಲೂ ಬಹಳ ಉತ್ತಮವಾಗಿತ್ತು. ಆಯಿಶಾ(ರ)ರು ಪ್ರವಾದಿಯವರ(ಸ) ಒಂದೊಂದು ವಿಷಯವನ್ನು ನೆನಪಿಡುವ ರೀತಿಯ ಕಾರಣದಿಂದಲೇ ಆಗಾಗ್ಗೆ, ನನ್ನ ನಾಳಿನ ಸರದಿ ಯಾರ ಮನೆಯಲ್ಲಿ ಎಂದು ಕೇಳುತ್ತಿದ್ದರು ಎಂಬುದು ಎಲ್ಲಾ ಪತ್ನಿಯರಿಗೂ ತಿಳಿಯಿತು. ಕಾರಣ ಪ್ರವಾದಿಯವರು(ಸ) ರೋಗಗ್ರಸ್ತರಾದ ಎಲ್ಲಾ ಸ್ಥಿತಿಗತಿಯೂ ಸಂಪೂರ್ಣವಾಗಿ ಸುರಕ್ಷಿತವಾಗಿರಬೇಕೆಂಬುದು ಅವರ(ಸ) ನಿಲುವಾಗಿತ್ತು. ಇದನ್ನು ಅರಿತ ಇತರ ಪತ್ನಿಯರು ಪ್ರವಾದಿಯವರು(ಸ) ಆಯಿಶಾ(ರ)ರ ಮನೆಯಲ್ಲೇ ಇರಲೆಂದು ಅನುಮತಿ ನೀಡಿದರು. ಬಳಿಕ ನಿಧನದ ವರೆಗೂ ಪ್ರವಾದಿಯವರು(ಸ) ಆಯಿಶಾ(ರ)ರ ಮನೆಯಲ್ಲೇ ಇದ್ದರು. ಪ್ರವಾದಿವರ್ಯರ(ಸ) ಎಲ್ಲಾ ಪತ್ನಿಯರೂ ಆಯಿಶಾ(ರ)ರ ಮನೆಗೇ ಬಂದು ಪ್ರವಾದಿಯವರ(ಸ) ಯೋಗ ಕ್ಷೇಮ ವಿಚಾರಿಸುತ್ತಿದ್ದರು.

ಪ್ರವಾದಿಯವರ(ಸ) ಕಾಯಿಲೆಯು ಉಲ್ಬಣವಾಯಿತು. ಮಸೀದಿಗೆ ಹೋಗಲೂ ಅವರಿಂದ ಸಾಧ್ಯವಾಗಲಿಲ್ಲ. ಬೆಳಗ್ಗಿನ ನಮಾಝಿನ ವೇಳೆ ಸಹಾಬಿಗಳೆಲ್ಲರೂ ಪ್ರವಾದಿಯವರನ್ನು(ಸ) ಕಾಯುತ್ತಿದ್ದರು. ಎಷ್ಟೇ ಪ್ರಯತ್ನಿಸಿದರೂ ಪ್ರವಾದಿಯವರಿಗೆ(ಸ) ಎದ್ದೇಳಲೂ ಸಾಧ್ಯವಾಗದಾಗ ನಮಾಝಿನ ನೇತೃತ್ವ ವಹಿಸುವಂತೆ ಅಬೂಬಕರ್(ರ)ರಿಗೆ ಆದೇಶಿಸಿದರು. ಆಯಿಶಾ(ರ)ರು ಹೇಳುತ್ತಾರೆ, "ನನಗೆ ನನ್ನ ತಂದೆಯ ಸ್ವಭಾವ ಚೆನ್ನಾಗಿ ತಿಳಿದಿದೆ. ಅವರ ಹೃದಯವು ಬಹಳ ಮೃದುವಾಗಿದೆ. ಪ್ರವಾದಿಯವರ(ಸ) ಸ್ಥಾನದಲ್ಲಿ ತಾನು

ನಿಂತು ನಮಾಝಿನ ನೇತೃತ್ವ ವಹಿಸುವಾಗ ಪ್ರವಾದಿಯವರ(ಸ) ಅನುಪಸ್ಥಿತಿಯಿಂದ ಅವರು ಅತ್ತು ಬಿಡುವರು ಹಾಗೂ ನಮಾಝ್ ನಿರ್ವಹಿಸಲು ಅವರಿಂದಾಗದು. ನಾನು ಪ್ರವಾದಿಯವರ(ಸ) ಬಳಿ "ನಮಾಝ್ ನಿರ್ವಹಿಸಲು ಬೇರೆಯವರಿಗೆ ಆದೇಶಿಸಿರಿ" ಎಂದೆ. ಆದರೆ ಪುನಃ ಪ್ರವಾದಿಯವರು(ಸ) ಅದೇ ರೀತಿ ಆದೇಶಿಸಿದಾಗ ಆಯಿಶಾ(ರ)ರು ಪ್ರವಾದಿಯವರಲ್ಲಿ(ಸ) ಹೇಳುವಂತೆ ಹಫ್ಸಾ(ರ)ರಲ್ಲಿ ಕೇಳಿಕೊಂಡರು. ಹಫ್ಸಾ(ರ)ರೂ ಪ್ರವಾದಿಯವರಲ್ಲಿ(ಸ) ನಿವೇದಿಸಿಕೊಂಡರೂ ಪ್ರವಾದಿಯವರು(ಸ) ಅಬೂಬಕರ್(ರ)ರೇ ನಮಾಝ್‌ನ ನೇತೃತ್ವ ವಹಿಸಬೇಕೆಂದರು.

ರೋಗಶಯ್ಯೆಯಲ್ಲಿದ್ದಾಗ ಪ್ರವಾದಿಯವರಿಗೆ(ಸ) ಆಯಿಶಾ(ರ)ರ ಬಳಿ ಒಂದೆಡೆ ಇಡಲು ನೀಡಿದ್ದ ಸ್ವಲ್ಪ ಹಣದ ವಿಚಾರ ಜ್ಞಾಪಕಕ್ಕೆ ಬಂತು. ಅವರು(ಸ) ಆಯಿಶಾ(ರ)ರಲ್ಲಿ ಕೇಳಿದರು, "ಆ ಹಣವೆಲ್ಲಿ, ಅದನ್ನು ದಾನಮಾಡಿ ಬಿಡು. ಅಲ್ಲಾಹನಿಗೆ ನಂಬಲರ್ಹನಲ್ಲದವನಾಗಿ ಭೇಟಿಯಾಗಲು ನಾನು ಬಯಸುವುದಿಲ್ಲ" ಎಂದರು.

ನಿಧನ ಹೊಂದುವ ಕೆಲ ಕ್ಷಣಗಳ ಮೊದಲು ಪ್ರವಾದಿಯವರು(ಸ) ಹ. ಆಯಿಶಾ(ರ)ರ ತೊಡೆ ಮೇಲೆ ತಲೆಯಿಟ್ಟು ಮಲಗಿದ್ದರು. ಅಷ್ಟರಲ್ಲೇ ಆಯಿಶಾ(ರ)ರ ಸಹೋದರರಾದ ಹ. ಅಬ್ದುರ್ರಹ್ಮಾನ್ ಮಿಸ್ವಾಕ್ ತೆಗೆದುಕೊಂಡು ಆಯಿಶಾ(ರ)ರ ಮನೆಗೆ ಬಂದರು. ಪ್ರವಾದಿಯವರು(ಸ) ಮಿಸ್ವಾಕ್‌ನೆಡೆಗೆ ದೃಷ್ಟಿ ಹಾಯಿಸಿದಾಗ ಹ. ಆಯಿಶಾ(ರ)ರಿಗೆ ಪ್ರವಾದಿಯವರ(ಸ) ಸನ್ನೆಯ ಅರಿವಾಯಿತು. ಆಯಿಶಾ(ರ)ರು ಸಹೋದರನಿಂದ ಮಿಸ್ವಾಕ್ ಪಡೆದು ತನ್ನ ಹಲ್ಲಿನಿಂದ ಜಗಿದು ಮೆತ್ತನೆಗೊಳಿಸಿ ಪ್ರವಾದಿಯವರಿಗೆ(ಸ) ನೀಡಿದರು. ಆರೋಗ್ಯವಂತ ವ್ಯಕ್ತಿಯಂತೆ ಪ್ರವಾದಿಯವರು(ಸ) ಮಿಸ್ವಾಕ್ ಮಾಡಿದರು.

ಹ. ಆಯಿಶಾ(ರ) ಹಾಗೂ ಪ್ರವಾದಿವರ್ಯರ(ಸ) ಇತರೆಲ್ಲಾ ಪತ್ನಿಯರು ಪ್ರವಾದಿಯವರ(ಸ) ಆರೋಗ್ಯಕ್ಕಾಗಿ ಪ್ರಾರ್ಥಿಸುತ್ತಿದ್ದರು. ಹ. ಆಯಿಶಾ(ರ)ರು ದುಆ ಮಾಡುತ್ತಾ ಪ್ರವಾದಿಯವರ(ಸ) ಮೇಲೆ ಊದುತ್ತಿದ್ದರು. ಆಗ ಪ್ರವಾದಿಯವರ(ಸ) ಕೈ ಆಯಿಶಾ(ರ)ರ ಕೈಯಲ್ಲಿತ್ತು. ಆ ಕೂಡಲೇ ಪ್ರವಾದಿಯವರು(ಸ) ಕೈಯನ್ನು ಎಳೆದುಕೊಂಡು, "ಓ ಅಲ್ಲಾಹನೇ ನೀನು ನನ್ನ ಅತ್ಯಂತ ದೊಡ್ಡ ಸಂಗಾತಿಯಾಗಿರುವಿ" ಎಂದರು. ಒಮ್ಮೆಲೆ ಬೆಚ್ಚಿ ಬಿದ್ದ ಆಯಿಶಾ(ರ)ರಿಗೆ ಪ್ರವಾದಿಯವರ(ಸ) ಮಾತಿನ ಮರ್ಮ ಅರಿವಾಯಿತು. ಪ್ರವಾದಿಯವರು(ಸ) ಈಗ ನಮ್ಮೆಲ್ಲರ ಸಾಂಗತ್ಯವನ್ನು ಬಿಟ್ಟು ಕೇವಲ ಅಲ್ಲಾಹನನ್ನು ಸಂಗಾತಿಯನ್ನಾಗಿ ಮಾಡುತ್ತಿದ್ದಾರೆ. ಆಯಿಶಾ(ರ)ರು, "ಓ ಪ್ರವಾದಿವರ್ಯರೇ(ಸ)!

ಅತೀವ ವೇದನೆಯಾಗುತ್ತಿದೆ" ಎಂದಾಗ ಪ್ರವಾದಿಯವರು(ಸ), "ಪುಣ್ಯಾವ
ಇದಕ್ಕೇ ಸಂಬಂಧಿಸಿದೆ" ಎಂದರು.

ಹ. ಆಯಿಶಾ(ರ)ರು ಸ್ವಲ್ಪ ಸಾವರಿಸಿಕೊಂಡು ಕುಳಿತುಕೊಂಡರು
ಆಯಿಶಾ(ರ)ರಿಗೆ ಪ್ರವಾದಿಯವರ(ಸ) ಶರೀರದ ಭಾರವು ಹೆಚ್ಚಾದಂತ
ಭಾಸವಾಯಿತು. ಪ್ರವಾದಿಯವರ(ಸ) ತಲೆಯನ್ನು ದಿಂಬಿನ ಮೇಲಿರಿಸಿದರು
ಕೆಳಗೆ ಮಲಗಿಸಿದೊಡನೆ ಪ್ರವಾದಿಯವರು(ಸ) ಕೊನೆಯುಸಿರೆಳೆದರು. ಹ
ಆಯಿಶಾ(ರ)ರು ಅಳ ತೊಡಗಿದರು. ಪ್ರವಾದಿಯವರು(ಸ) ಇಹಲೋಕ
ತ್ಯಜಿಸಿದರೆಂದು ಎಲ್ಲರಿಗೂ ತಿಳಿಯಿತು. ಬಳಿಕ ಹ. ಆಯಿಶಾ(ರ)ರ ಮನೆಯಲ್ಲಿ
ಪ್ರವಾದಿಯವರನ್ನು(ಸ) 'ದಫನ್' ಮಾಡಲಾಯಿತು. ಹ. ಅಬೂಬಕರ್(ರ)ರು
ಮಗಳ ಬಳಿ ಬಂದು, "ಆಯಿಶಾ ಇದು ನಿನ್ನ ಕನಸಿನ ಮೊದಲ ಚಂದ್ರವಾಗಿತ್ತು
ಇನ್ನು ಎರಡು ಚಂದ್ರಗಳಿಗಿಂತ ಶ್ರೇಷ್ಠವಾದುದು" ಎಂದರು.

ಪ್ರವಾದಿಯವರಿಂದಾಗಿ(ಸ) ಹ. ಆಯಿಶಾ(ರ)ರಿಗೆ ದೊರೆತ ಗೌರವ
ಘನತೆಯನ್ನು ಅವರು(ರ) ಸದಾ ಸ್ಮರಿಸುತ್ತಿದ್ದರು. ಇದಕ್ಕೆ ಸಂಬಂಧಿಸಿದಂತೆ
ಆಯಿಶಾ(ರ)ರು ಹೇಳುತ್ತಾರೆ, "ಪ್ರವಾದಿಯವರು(ಸ) ಕೊನೆಯ ಕ್ಷಣಗಳಲ್ಲಿ
ನನ್ನ ಬಾಯಿಯಲ್ಲಿ ಜಗಿದ ಮಿಸ್ವಾಕನ್ನು ತಮ್ಮ(ಸ) ಬಾಯಿಗಿರಿಸಿದರು
(ಮಿಸ್ವಾಕ್‌ನೆಡೆಗೆ ಸನ್ನೆ ಮಾಡುತ್ತಾ) ರೋಗಾಶಯ್ಯೆಯಲ್ಲಿ ನನ್ನದೇ
ಮನೆಯಲ್ಲಿದ್ದರು, ನನ್ನ ಮನೆಯಲ್ಲೇ ನಿಧನರಾದರು, ನನ್ನ ಮನೆಯಲ್ಲೇ
ದಫನ ಆದರು."

ಇದು ಆಯಿಶಾ(ರ) ಸೌಭಾಗ್ಯವಾಗಿತ್ತು. ಹಲವು ಬಾರಿ ಆಯಿಶಾ(ರ)ರ
ಹಾಸಿಗೆ ಮೇಲೆ ದಿವ್ಯವಾಣಿ ಅವತೀರ್ಣಗೊಂಡಿತು. ಹ. ಆಯಿಶಾ(ರ)ರ
ಸ್ಥಾನಮಾನದಲ್ಲಿ ಇಂತಹ ದಿವ್ಯವಾಣಿಗಳು ಅವತೀರ್ಣವಾಯಿತು. ಅದರಿಂದ
ಮುಸ್ಲಿಮ್ ವಿದ್ವಾಂಸರು ದೊಡ್ಡ ದೊಡ್ಡ ಧರ್ಮವಿಧಿಗಳನ್ನು ಪಡೆದುಕೊಂಡರು.
ಹ. ಆಯಿಶಾ(ರ)ರ ಪಾವಿತ್ರ್ಯತೆ ಬಗ್ಗೆ ಅಲ್ಲಾಹನು ಸಾಕ್ಷ್ಯ ನೀಡಿದನು. ಹ.
ಆಯಿಶಾ(ರ)ರು ಜಿಬ್ರೀಲ್(ಅ)ರನ್ನು ತಮ್ಮ ಕಣ್ಣುಗಳಿಂದ ನೋಡಿದರು (ಪ್ರತ್ಯಕ್ಷ
ನೋಡಿದರು). ಅವರು(ರ) ಪ್ರವಾದಿಯವರ(ಸ) ಪ್ರಿಯ ಪತ್ನಿಯಾಗಿದ್ದರು.
ಪ್ರವಾದಿಯವರ(ಸ) ಸಾಂಗತ್ಯದಲ್ಲಿ ಅತ್ಯಂತ ಹೆಚ್ಚು ತರಬೇತಿ ಪಡೆದಿದ್ದರು.
ವಿಶ್ವದ ಎಲ್ಲಾ ಸ್ತ್ರೀಯರಿಗೆ ಮಾದರಿಯಾಗಲು ಸ್ವತಃ ಅಲ್ಲಾಹನು
ಆಯಿಶಾ(ರ)ರನ್ನು ಆರಿಸಿದ್ದನು.

ಕುರ್‌ಆನಿನಲ್ಲಿ ಅಲ್ಲಾಹನ ಸತ್ಯವಿಶ್ವಾಸಿ ಮಾತೆಯರ ಕುರಿತು ಈ ರೀತಿ
ಹೇಳುತ್ತಾನೆ, "ಪ್ರವಾದಿವರ್ಯರ(ಸ) ಮನೆಯವರಾದ ನಿಮ್ಮಿಂದ ಮಾಲಿನ್ಯವನ್ನು
ದೂರೀಕರಿಸಿ ನಿಮ್ಮನ್ನು ಸಂಪೂರ್ಣವಾಗಿ ಶುದ್ಧಿಗೊಳಿಸಲು ಅಲ್ಲಾಹ್ ಇಚ್ಛಿಸುತ್ತಾನೆ.

ನಿಮ್ಮ ಮನೆಗಳಲ್ಲಿ ಓದಿ ಹೇಳಲಾಗುತ್ತಿರುವ ಅಲ್ಲಾಹನ ಸೂಕ್ತಗಳನ್ನೂ ಯುಕ್ತಿಪೂರ್ಣ ಮಾತುಗಳನ್ನೂ ಚೆನ್ನಾಗಿ ನೆನಪಿಡಿರಿ. ನಿಶ್ಚಯವಾಗಿಯೂ ಅಲ್ಲಾಹ್ ಸೂಕ್ಷ್ಮಜ್ಞನೂ ವಿವರಪೂರ್ಣನೂ ಆಗಿರುತ್ತಾನೆ." (ಕುರ್‌ಆನ್ 33: 33-34)

ಅಲ್ಲಾಹನು ತನ್ನ ಉದ್ದೇಶವನ್ನು ಮುಂದಿರಿಸಿದಾಗ ಎಲ್ಲಾ ಸತ್ಯವಿಶ್ವಾಸಿ ಮಾತೆಯರೂ(ರ) ಅಲ್ಲಾಹನ ಸಂಪ್ರೀತಿಗಳಿಸಲು ಜೀವನ ಪರ್ಯಂತ ಪ್ರಯತ್ನಿಸಿದರು ಹಾಗೂ ಅದರಲ್ಲಿ ಕಿಂಚಿತ್ತೂ ಕೊರತೆಯಾಗದಂತೆ ಜಾಗರೂಕತೆ ವಹಿಸಿದರು. ಆದರೆ ಹ. ಆಯಿಶಾ(ರ)ರು ಇತರರಿಗಿಂತ ಬಹಳ ಮುಂದೆ ಇದ್ದರು.

## ಪ್ರವಾದಿಯವರ(ಸ) ನಿಧನದ ಬಳಿಕ:

### ಮೊದಲ ತ್ಯಾಗ

ಸಾಮಾನ್ಯವಾಗಿ ಪತ್ನಿಯು-ಪತಿಯ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸುತ್ತಾಳೆ. ಆದರೆ ಪತಿಯ ನಿಧನದ ಬಳಿಕ ಆತನ ಎಲ್ಲಾ ತರಬೇತಿಗಳನ್ನು ಮರೆತು ಬಿಡುತ್ತಾಳೆ. ವಿಶೇಷವಾಗಿ ಖರ್ಚು ವೆಚ್ಚಗಳ ಬಗ್ಗೆ ಆಕೆ ಹೆಚ್ಚು ಚಿಂತಾಕ್ರಾಂತಳಾಗುತ್ತಾಳೆ. ಈ ವಿಧವಾ ಜೀವನವನ್ನು ಸವೆಸುವುದು ಹೇಗೆ ಎಂದು ಚಿಂತಿಸುತ್ತಾಳೆ. ಅದೂ ಆಕೆಗೆ ತನ್ನ ಪುನರ್ ವಿವಾಹ ಸಾಧ್ಯವಿಲ್ಲ ಎಂದು ಅರಿವಾದೊಡನೆ ಇನ್ನು ಜೀವನ ನಡೆಸುವುದು ಹೇಗೆ ಎಂದು ಮನದಲ್ಲೇ ಕೊರಗುತ್ತಾಳೆ. ಆದರೆ ಸತ್ಯವಿಶ್ವಾಸಿನಿಯರ ಮಾತೆಯರಾಗಿದ್ದ ಪ್ರವಾದಿಪತ್ನಿಯರಿಗೆ ಪ್ರವಾದಿಯವರ(ಸ) ನಿಧನದ ನಂತರ ಇಂತಹ ಆಲೋಚನೆಗಳು ಎಂದೆಂದಿಗೂ ಬಂದಿರಲಿಲ್ಲ. ಪ್ರವಾದಿಯವರು(ಸ) ನೀಡಿದ ತರಬೇತಿ ಯನ್ನು ಅವರು(ರ) ಚಾಚೂ ತಪ್ಪದೆ ಪಾಲಿಸಿದರು. ಸತ್ಯವಿಶ್ವಾಸಿನಿ ಮಾತೆಯರೆಲ್ಲರೂ ಮಾದರಿ ಸ್ತ್ರೀಯರಾಗಿದ್ದರು. ಅದರಲ್ಲೂ ಆಯಿಶಾ(ರ) ಮಾದರಿ ಯೋಗ್ಯರಾಗಿದ್ದರು.

ಪ್ರವಾದಿಯವರ(ಸ) ನಿಧನದ ವೇಳೆ ಮನೆಯಲ್ಲಿದ್ದ ಕೆಲವು ಚಿನ್ನದ ನಾಣ್ಯಗಳನ್ನು ದಾನವಾಗಿ ನೀಡಲಾಗಿತ್ತು. ಅಂದು ಆಯಿಶಾ(ರ)ರ ಮನೆಯಲ್ಲಿ ಅಲ್ಲಾಹನ ನಾಮದ ಹೊರತು ಏನೂ ಇರಲಿಲ್ಲ. ಪ್ರವಾದಿಯವರ(ಸ) ನಿಧನದ ಬಳಿಕ ಅಬೂಬಕರ್(ರ)ರು ಖಲೀಫರಾಗಿ ಆಯ್ಕೆಯಾದರು. ಅವರ(ರ) ಮುಂದಿರಿಸಲಾದ ಮೊಟ್ಟ ಮೊದಲ ಪ್ರಕರಣ ಪ್ರವಾದಿಯವರ(ಸ) ಆಸ್ತಿಯ ವಿಭಜನೆಯಾಗಿತ್ತು. ಕೆಲವು ತೋಟಗಳಿದ್ದವು, ಆದರೆ ಅದರ ಆದಾಯವನ್ನು ಧರ್ಮದ ಕಾರ್ಯದಲ್ಲಿ ಹಾಗೂ ಅನಾಥರು, ನಿರ್ಗತಿಕರಿಗಾಗಿ ವ್ಯಯಿಸಲಾಗುತ್ತಿತ್ತು.

ಈ ಕೆಲವು ತೋಟಗಳನ್ನು ಪರಸ್ಪರ ಹಂಚಿಕೊಳ್ಳಬೇಕೆಂದು ಪ್ರವಾದಿ ಪತ್ನಿಯರ ಬಯಕೆಯಾಗಿತ್ತು. ಆಗ ಆಯಿಶಾ(ರ)ರು ಪ್ರವಾದಿಯವರ(ಸ) ಮಾತನ್ನು ಎಲ್ಲರಿಗೂ ನೆನಪಿಸಿದರು, "ಪ್ರವಾದಿಯವರಿಗೆ(ಸ) ಯಾರೂ ವಾರೀಸುದಾರರಿಲ್ಲವೆಂದೂ, ಹಾಗೂ ತನ್ನ ಆಸ್ತಿಯೆಲ್ಲಾ ದಾನವಾಗಿ ನೀಡಬೇಕೆಂದೂ ಜೀವಂತವಿರುವಾಗಲೇ ಹೇಳಿದ್ದರು. ಹ. ಆಯಿಶಾ(ರ)ರ ಮಾತನ್ನು ಕೇಳಿದೊಡನೆ ಎಲ್ಲರೂ ಈ ವಾರೀಸುದಾರಿಕೆಯಿಂದ ಹಿಂಜರಿದರು ಹಾಗೂ ಈ ತೋಟಗಳ ಆದಾಯವನ್ನು ಇಸ್ಲಾಮೀ ಖಜಾನೆಯಲ್ಲಿ ಜಮೆ ಮಾಡುವಂತೆ ಹಾಗೂ ಯಾವ ರೀತಿ ಪ್ರವಾದಿಯವರು(ಸ) ಖರ್ಚು ಮಾಡುತ್ತಿದ್ದರೋ ಅದನ್ನೇ ಅನುಸರಿಸುವಂತೆ ಅಬೂಬಕರ್(ರ)ರಿಗೆ ಸೂಚಿಸಿದರು.

ಇದುವೇ ಸತ್ಯವಿಶ್ವಾಸಿ ಮಾತೆಯರ ತ್ಯಾಗಮಯ ಜೀವನವಾಗಿದೆ. ಅದರಲ್ಲೂ ಈ ವಿಚಾರದಲ್ಲಿ ಮೊಟ್ಟ ಮೊದಲ ಶ್ರೇಯಸ್ಸು ಆಯಿಶಾ(ರ)ರಿಗೆ ಸಲ್ಲುತ್ತದೆ.

**ಎರಡನೇ ತ್ಯಾಗ:**

ಅಬೂಬಕರ್(ರ)ರು ಪ್ರವಾದಿಯವರ(ಸ) ನಿಧನದ ಬಳಿಕ ಎರಡು ವರ್ಷಗಳ ಕಾಲ ಜೀವಂತವಿದ್ದರು. ಅವರು(ರ)ರ ತಮ್ಮ ಆಸ್ತಿಯ ಸ್ವಲ್ಪ ಭಾಗವನ್ನು ಮಗಳಾದ ಆಯಿಶಾ(ರ)ರಿಗೆ ನೀಡಿದರು. ತಮ್ಮ ನಿಧನದ ವೇಳೆ ಅಬೂಬಕರ್(ರ)ರು ಆಯಿಶಾ(ರ)ರನ್ನು ಬಳಿ ಕರೆದು, "ಪ್ರಿಯ ಮಗಳೇ! ನೀನು ಆ ಆಸ್ತಿಯನ್ನು ನಿನ್ನ ಸಹೋದರ ಸಹೋದರಿಯರಿಗೆ ನೀಡುತ್ತೀ?" ಎಂದರು ಪ್ರಶ್ನಿಸಿದರು. "ಖಂಡಿತವಾಗಿಯೂ ನೀಡುತ್ತೇನೆ" ಎಂದುತ್ತರಿಸಿದರು. ಆಯಿಶಾ(ರ) ಬಳಿಕ ಆ ಆಸ್ತಿಯನ್ನು ಸಹೋದರ-ಸಹೋದರಿಯರಿಗೆ ನೀಡಿದರು.

**ಅನಾಥರಾದ ಆಯಿಶಾ(ರ):**

ಅದರ ಬಳಿಕ ಸಿದ್ದೀಕ್(ರ) ಹಾಗೂ [ಆಯಿಶಾ(ರ)] ನಡುವೆ ನಡೆದ ಸಂಭಾಷಣೆ:

ಹ. ಸಿದ್ದೀಕ್(ರ): ಪ್ರವಾದಿಯವರ(ಸ) ಕಫನ್‌ನಲ್ಲಿ ಎಷ್ಟು ಬಟ್ಟೆಗಳಿದ್ದವು?

ಹ. ಆಯಿಶಾ(ರ): 3 ಬಟ್ಟೆಗಳು.

ಹ. ಸಿದ್ದೀಕ್(ರ): ಪ್ರವಾದಿಯವರು(ಸ) ನಿಧನರಾದ ದಿನ?

ಹ. ಆಯಿಶಾ(ರ): ಸೋಮವಾರ

ಹ. ಸಿದ್ದೀಕ್(ರ): ಇವತ್ತು ಯಾವ ದಿನ?

ಹ. ಆಯಿಶಾ(ರ): ಸೋಮವಾರ

ಹ. ಸಿದ್ದೀಕ್(ರ): ಹಾಗಾದರೆ ಇಂದು ನನ್ನ ಅಂತಿಮ ಪಯಣವು ನಿರ್ಣಯವಾಗಿದೆ.

ಈ ಸಂಭಾಷಣೆಯ ಬಳಿಕ ಅಬೂಬಕರ್(ರ)ರು ತಮ್ಮ ಚದ್ದರವನ್ನು ನೋಡಿದರು. ಅದರ ಮೇಲೆ ಕೇಸರಿಯ ಕೆಲವು ಕಲೆಗಳಿದ್ದವು. ಅದನ್ನು ತೊಳೆದು ಅದರಿಂದಲೇ ನನಗೆ ಕಫನ್ ಹೊದಿಸಿರಿ ಎಂದು ಮಗಳ(ರ) ಬಳಿ ಹೇಳಿದರು. ಆಯಿಶಾ(ರ)ರು, "ಇದು ಹಳೆಯದಾಗಿದೆ" ಎಂದರು. ಆಗ ಅಬೂಬಕರ್(ರ)ರು ಹೇಳಿದರು, "ಹೊಸ ಬಟ್ಟೆಯ ಆವಶ್ಯಕತೆ ಮೃತನಿಗಿಂತ ಹೆಚ್ಚು ಜೀವಂತವಿರುವವನಿಗಿರುತ್ತದೆ."

ನಾನು ಇಲ್ಲಿ ಅಬೂಬಕರ್(ರ)ರ ಚಾರಿತ್ರ್ಯದ ಕುರಿತು ವಿಸ್ತಾರವಾಗಿ ವಿವರಿಸಲಿಲ್ಲ. ಇಲ್ಲವಾದಲ್ಲಿ ಅವರ ಕೊನೆಯ ಮಾತುಗಳನ್ನು ಇಂದಿನ ಆಧುನಿಕ ಜಗತ್ತಿನ ದಾನಶೂರರಿಗೆ ಇಸ್ಲಾಮಿನ ಇಂತಹ ಆದರ್ಶದ ಕುರಿತು ತಿಳಿಸುತ್ತಿದ್ದೆ. ಆದರೆ ನನಗಿಲ್ಲಿ ಆಯಿಶಾ(ರ)ರ ಚಿತ್ರಣವನ್ನು ನಿಮ್ಮ ಮುಂದಿರಿಸಬೇಕಾದುದರಿಂದ ಅದನ್ನು ವಿವರಿಸಲಾಗಿಲ್ಲ.

ಅಬೂಬಕರ್(ರ)ರೂ ಸೋಮವಾರದಂದೇ ನಿಧನರಾದರು. ಆಯಿಶಾ(ರ)ರು ಅನಾಥರಾದರು. ಅಬೂಬಕರ್(ರ)ರನ್ನೂ ಆಯಿಶಾ(ರ)ರ ಮನೆಯಲ್ಲೇ ದಫನ ಮಾಡಲಾಯಿತು. ಪ್ರವಾದಿಯವರ(ಸ) ಗೋರಿಯ ಪಕ್ಕದಲ್ಲೇ ತಂದೆಯ ಗೋರಿಯನ್ನು ಕಂಡು ಆಯಿಶಾ(ರ)ರಿಗೆ ಅಂದು ಮೂರು ಚಂದ್ರಗಳು ಆಕಾಶದಿಂದ ಉದುರಿ ತನ್ನ ಮನೆಯಲ್ಲಿ ಬಿದ್ದ ಕನಸು ಪುನಃ ನೆನಪಾಯಿತು. ಇದು ಎರಡನೇ ಚಂದ್ರ ಎಂದು ಮನದಲ್ಲೇ ಅಂದುಕೊಂಡರು.

**ಮೂರನೇ ಚಂದ್ರ:**

ಅಬೂಬಕರ್(ರ)ರ ಬಳಿಕ ಹ. ಉಮರ್(ರ)ರು ಖಲೀಫರಾಗಿ ಆಯ್ಕೆಯಾದರು. ಅವರು(ರ) ಎಲ್ಲಾ ಮುಸ್ಲಿಮರ ಪಿಂಚಣಿಯನ್ನು ನಿಶ್ಚಯಿಸಿದರು. ಸತ್ಯವಿಶ್ವಾಸಿ ಮಾತೆಯರಿಗೆ ಹತ್ತು-ಹತ್ತು ಸಾವಿರ ದಿರ್ಹಮ್ ಪಿಂಚಣಿ ನಿಗದಿಯಾಯಿತು. ಆದರೆ ಅದರಲ್ಲಿ ಹ. ಆಯಿಶಾ(ರ)ರಿಗೆ ವಾರ್ಷಿಕವಾಗಿ 12 ಸಾವಿರ ದಿರ್ಹಮ್ ಪಿಂಚಣಿಯನ್ನು ನಿಶ್ಚಯಿಸಲಾಯಿತು. ಯಾಕೆ ಈ

ರೀತಿ ಮಾಡಲಾಯಿತು ಎಂದು ಪ್ರಶ್ನಿಸಲಾದಾಗ, "ಆಯಿಶಾ(ರ)ರು ಪ್ರವಾದಿಯವರಿಗೆ(ಸ) ಅತ್ಯಂತ ಪ್ರಿಯರಾಗಿದ್ದರು" ಎಂದು ಉತ್ತರಿಸಿದರು.

ಉಮರ್(ರ)ರು ಇದೇ ಕಾರಣದಿಂದ ಉಡುಗೊರೆಗಳನ್ನು ವಿತರಿಸುವ ಸಂದರ್ಭದಲ್ಲೂ ಹ. ಆಯಿಶಾ(ರ)ರಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಿದ್ದರು. ಮಾಂಸವನ್ನು ವಿತರಿಸುವ ಸಂದರ್ಭದಲ್ಲಿ ತಲೆ ಹಾಗೂ ಕಾಲಿನ ಭಾಗವನ್ನು ಹ. ಆಯಿಶಾ(ರ)ರ ಮನೆಗೆ ಕಳುಹಿಸಿ ಕೊಡುತ್ತಿದ್ದರು.

ಒಮ್ಮೆ ಯುದ್ಧ ನಿಧಿಯಲ್ಲಿ ಮುತ್ತಿನಿಂದ ತುಂಬಿದ ಒಂದು ಪೆಟ್ಟಿಗೆ ಸಿಕ್ಕಿತ್ತು. ಅದರಲ್ಲಿ ಮುತ್ತುಗಳು ಸ್ವಲ್ಪವೇ ಇದ್ದುದನ್ನು ಕಂಡ ಉಮರ್(ರ)ರು, ಅದನ್ನು ಸತ್ಯವಿಶ್ವಾಸಿ ಮಾತೆಯಲ್ಲಿ ವಿತರಿಸುವುದು ಉಚಿತವಲ್ಲ ಎಂದು ಕೊಂಡರು. ಮುಸ್ಲಿಮರನ್ನುದ್ದೇಶಿಸಿ, "ಒಂದು ವೇಳೆ ನೀವು ಬಯಸಿದರೆ ಈ ಮುತ್ತುಗಳನ್ನು ಆಯಿಶಾ(ರ)ರಿಗೆ ನೀಡುತ್ತೇನೆಂದು ಹೇಳುತ್ತಾ, ಪ್ರವಾದಿಯವರಿಗೆ(ಸ) ಆಯಿಶಾ(ರ)ರು ಅತ್ಯಂತ ಪ್ರಿಯರಾಗಿದ್ದರೆಂಬ ಮಾತನ್ನು ಪುನಃ ನೆನಪಿಸಿದರು. ಎಲ್ಲರೂ ಸಂತಸದಿಂದ ಇದಕ್ಕೆ ಸಮ್ಮತಿಸಿದರು. ಮುತ್ತುಗಳ ಆ ಪೆಟ್ಟಿಗೆಯನ್ನು ಆಯಿಶಾ(ರ)ರ ಮನೆಗೆ ಕಳುಹಿಸಿ ಕೊಡಲಾಯಿತು. ಆದರೆ ಆಯಿಶಾ(ರ)ರಿಗೆ ಉಮರ್(ರ)ರ ಈ ಆದ್ಯತೆಯು ಇಷ್ಟವಾಗಲಿಲ್ಲ. ಮುತ್ತುಗಳ ಆ ಪೆಟ್ಟಿಗೆಯನ್ನು ಅವರ(ರ) ಬಳಿ ತರಲಾದಾಗ ಅವರು ಹೇಳಿದರು, "ಓ ಅಲ್ಲಾಹನೇ! ಉಮರ್(ರ)ರ ಉಡುಗೊರೆಗಾಗಿ ನನ್ನನ್ನು ಜೀವಂತವಾಗಿರಿಸಬೇಡ."

ಉಮರ್(ರ)ರೂ ಅಬೂಬಕರ್(ರ)ರಂತೆಯೇ ಆಡಳಿತ ನಡೆಸಿದರು. ಮರಣಾಸನ್ನ ರಾದಾಗ ತನ್ನ ಮಗನನ್ನು ಬಳಿ ಕರೆದು, "ತನ್ನ ಆಪ್ತರ ಪಕ್ಕದಲ್ಲೇ ತನ್ನನ್ನು ದಫನ್ ಮಾಡಬೇಕೆಂದು ಉಮರ್(ರ)ನ ಇಚ್ಛೆಯಾಗಿದೆ" ಎಂದು ಆಯಿಶಾ(ರ)ರ ಬಳಿ ಹೇಳುವಂತೆ ತನ್ನ ಮಗನನ್ನು ಅಲ್ಲಿಗೆ ಕಳುಹಿಸಿದರು.

ಆಯಿಶಾ(ರ)ರ ಆ ಕೋಣೆಯಲ್ಲಿ ಇನ್ನು ಒಂದೇ ಗೋರಿಯಷ್ಟು ಜಾಗ ಉಳಿದಿತ್ತು. ಅದನ್ನು ಹ. ಆಯಿಶಾ(ರ)ರು ತನಗಾಗಿ ಇರಿಸಿದ್ದರು. ಆದರೆ ಇಸ್ಲಾಮಿನ ಖಲೀಫರ ವಿನಂತಿ ಮೇರೆಗೆ ಅದನ್ನು ಸಂತಸದಲ್ಲಿ ಅವರಿಗಾಗಿ ತ್ಯಾಗ ಮಾಡಿದರು.

ಹ. ಉಮರ್(ರ)ರನ್ನೂ ಅದೇ ಕೋಣೆಯಲ್ಲಿ ದಫನ ಮಾಡಲಾಯಿತು. ಹ. ಆಯಿಶಾ(ರ)ರ ಕನಸಿನ ಮೂರನೇ ಚಂದ್ರವೂ ಅದೇ ಕೋಣೆಯಲ್ಲಿ ಬಂದು ಬಿದ್ದಿತ್ತು.

## ಮೂರನೇ ಖಲೀಫಾರ ಆಡಳಿತದ ಕಾಲದಲ್ಲಿ:

ಉಮರ್(ರ)ರ ನಿಧನದ ಬಳಿಕ ಉಸ್ಮಾನ್(ರ)ರು ಖಲೀಫರಾಗಿ ಆಯ್ಕೆಯಾದರು. ಹ. ಉಸ್ಮಾನ್(ರ)ರು ಸೌಮ್ಯ ಸ್ವಭಾವಿಯಾಗಿದ್ದು ಇಡೀ ಕುಟುಂಬದ ಜವಾಬ್ದಾರಿಯು ಇವರ ಮೇಲೆಯೇ ಇತ್ತು. ಅಲ್ಲಾಹನು ಅವರಿಗೆ(ರ) ಸಂಪತ್ಸೌಕರ್ಯಗಳನ್ನು ದಯಪಾಲಿಸಿದ್ದನು. ಈ ಸಂಪತ್ತನ್ನು ಅವರು(ರ) ಕುಟುಂಬಿಕರ ಹಾಗೂ ಸಂಬಂಧಿಕರ ಮೇಲೆ ಅತೀ ಹೆಚ್ಚು ವಿನಿಯೋಗಿಸುತ್ತಿದ್ದರು. ಉಸ್ಮಾನ್(ರ)ರು ಬೈತುಲ್ ಮಾಲ್‌ನ ಹಣದಿಂದ ನಮಗೆ ಸಹಾಯ ಮಾಡುತ್ತಾರೆ ಎಂಬ ಆಶಂಕೆ ಜನರಲ್ಲಿ ಮೂಡಿದಾಗ ಅವರೆಲ್ಲರೂ ಉಸ್ಮಾನ್(ರ)ರ ಬಳಿ ಈ ಕುರಿತು ವಿಚಾರಿಸಿದರು. ಆಗ ಉಸ್ಮಾನ್(ರ)ರು, "ನಾನು ನಿಮಗೆ ಸಹಾಯ ಮಾಡಿದುದು ಬೈತುಲ್‌ಮಾಲ್‌ನ ಹಣದಿಂದ ಅಲ್ಲ, ನನ್ನ ಸ್ವಂತ ಸಂಪತ್ತಿನಿಂದ" ಎಂದರು. ಹ. ಅಲೀ(ರ), ತಲ್ಹಾ(ರ), ಝುಬೈರ್(ರ)ರಂತಹ ಸಹಾಬಿಗಳು ಈ ಸಂಗತಿಯನ್ನು ಸಾರ್ವಜನಿಕರ ಮುಂದೆ ವ್ಯಕ್ತಪಡಿಸಿದಾಗ ಅವರ ಆಶಂಕೆಗಳು ದೂರವಾದುವು.

ಕೆಲವು ದಿನಗಳ ಬಳಿಕ ಜಟಿಲ ಸಮಸ್ಯೆಗಳು ಉದ್ಭವಿಸಿದವು. ಹ. ಉಸ್ಮಾನ್(ರ)ರು ತನ್ನ ಮನೆ ಮಂದಿ ಹಾಗೂ ಸಂಬಂಧಿಕರಿಗೆ ಉನ್ನತ ಹುದ್ದೆಗಳನ್ನು ನೀಡಲು ಆರಂಭಿಸಿದರು. ಹ. ಅಮ್ರ್ ಬಿನ್ ಆಸ್(ರ)ರಂತಹ ಚಾಣಾಕ್ಷ ಗವರ್ನರ್‌ರನ್ನು ಮಿಸ್ರ್‌ನಿಂದ ವಾಪಾಸು ಕರೆಯಿಸಿ ಅವರ(ರ) ಸ್ಥಾನದಲ್ಲಿ ತನ್ನ ಸೋದರ ಸಂಬಂಧಿ ಅಬ್ದುರ್ರಹ್ಮಾನ್ ಬಿನ್ ಅಬೀ ಸಿರ್ಹ್‌ರನ್ನು ಗವರ್ನರ್ ಆಗಿ ನೇಮಿಸಿದರು. ಕೂಫಾದಿಂದ ಹಿರಿಯ ಹಾಗೂ ಇರಾನನ್ನು ಗೆದ್ದ ಪರಾಕ್ರಮಿ ಸಹಾಬಿ ಸಅದ್ ಬಿನ್ ಅಬೀ ವಕ್ಕಾಸ್(ರ)ರ ಸ್ಥಾನದಲ್ಲಿ ಸಈದ್ ಬಿನ್ ಆಸ್‌ರನ್ನು ಗವರ್ನರ್ ಆಗಿ ನೇಮಿಸಿದರು. ಈ ರೀತಿ ಹಲವಾರು ಬದಲಾವಣೆಗಳನ್ನು ಮಾಡಿದರು.

ಆ ಸಹಾಬಿಗಳು ಹುದ್ದೆಯ ಆಕಾಂಕ್ಷೆಯುಳ್ಳವರಾಗಿರಲಿಲ್ಲದಿದ್ದರೂ, ಅವರ ಸ್ಥಾನದಲ್ಲಿ ಖಲೀಫರು ತಮ್ಮ ಸಂಬಂಧಿಕರನ್ನು ನೇಮಿಸಿದ್ದರಿಂದ ಆಕ್ಷೇಪವೆತ್ತಿದರು. ಅಲೀ(ರ), ತಲ್ಹಾ(ರ), ಝುಬೈರ್(ರ)ರು ಉಸ್ಮಾನ್(ರ)ರಿಗೆ ಎಷ್ಟೇ ತಿಳಿ ಹೇಳಿದರೂ ಪ್ರಯೋಜನವಾಗಲಿಲ್ಲ.

ಅದೇ ಕಾಲದಲ್ಲಿ ಓರ್ವ ಯಹೂದಿಯು ಇಸ್ಲಾಮ್ ಸ್ವೀಕರಿಸಿದನು. ಇಬ್ನು ಸಬಾ ಎಂದೇ ಪ್ರಖ್ಯಾತನಾದ ಆ ವ್ಯಕ್ತಿಯು ಕಪಟವಿಶ್ವಾಸಿಯಾಗಿದ್ದ. ಮುಸ್ಲಿಮರೊಳಗೆ ಒಡಕನ್ನುಂಟು ಮಾಡುವ ಉದ್ದೇಶದಿಂದಲೇ ಆತ ಮುಸ್ಲಿಮನಾಗಿದ್ದ. ಚಾಣಾಕ್ಷನಾಗಿದ್ದ ಇಬ್ನು ಸಬಾ ಹ. ಉಸ್ಮಾನ್(ರ)ರ

ಸಂಬಂಧಿಕರಿಗೆ ಹುದ್ದೆ ನೀಡುವ ನೀತಿಯನ್ನು ಅರಿತಿದ್ದ. ಮುಸ್ಲಿಮರ ನಡುವೆ ಒಡಕುಂಟು ಮಾಡಲು ಇದು ಸದವಕಾಶ ಎಂದರಿತ ಆತ ಕುತಂತ್ರಗಳನ್ನು ಹೂಡ ತೊಡಗಿದ. ಆತ ಮದೀನಾದಿಂದ ದೂರವೇ ಉಳಿದ. ಪ್ರವಾದಿಯವರ(ಸ) ಖಿಲಾಫತ್‌ನ ನೈಜ ಹಕ್ಕುದಾರರು ಅಲೀ(ರ)ಯಾಗಿದ್ದಾರೆ. ಪ್ರವಾದಿಯವರು(ಸ) ತಮ್ಮ ವಸಿಯ್ಯತ್‌ನಲ್ಲೂ ಇದನ್ನೇ ಬರೆದಿದ್ದರೆಂದು ಸುಳ್ಳು ವದಂತಿಗಳನ್ನು ಎಲ್ಲೆಡೆಯೂ ಹಬ್ಬಿದ್ದ. ಮದೀನಾ ಬಿಟ್ಟು ಈಜಿಪ್ಟ್, ಬಸ್ರಾ, ಕೂಫಾಕ್ಕೆ ಹೋದ ಕಡೆಗಳೆಲ್ಲಾ ಇದೇ ವದಂತಿಯನ್ನು ಹರಿಯಬಿಟ್ಟನು.

ಈಜಿಪ್ಟ್‌ನಲ್ಲಿ ಅಮ್ರ್ ಬಿನ್ ಆಸ್(ರ)ರ ಸ್ಥಾನದಲ್ಲಿ ಇಬ್ನು ಅಬೀ ಸಿರ್ಹ್‌ರನ್ನು ಗವರ್ನರ್ ಆಗಿ ನೇಮಿಸಲಾದಾಗ ಇಬ್ನು ಸಬಾ ಪ್ರವಾದಿಯವರ(ಸ) ಮಹೋನ್ನತ ಸಹಾಬಿ ಎಲ್ಲಿ, ಈ ಅಬೀ ಸಿರ್ಹ್ ಎಲ್ಲಿ ಎಂದನು. ಇದು ಒಡಕುಂಟು ಮಾಡುವ ಆತನ ಕುತಂತ್ರವಾಗಿತ್ತು. ನಿರ್ವಹಣೆಯಲ್ಲಿ ಆಗುತ್ತಿರುವ ಲೋಪದೋಷ(ನಷ್ಟ)ವನ್ನು ಈಜಿಪ್ಟ್‌ನ ಜನತೆ ಅರಿಯ ತೊಡಗಿದರು. ಇದನ್ನು ನಾವು ಉಸ್ಮಾನ್(ರ) ಹಾಗೂ ಅಮ್ರ್ ಬಿನ್ ಆಸ್(ರ)ರ ಸಂಭಾಷಣೆಯಿಂದ ತಿಳಿದುಕೊಳ್ಳಬಹುದು. ಇಬ್ನು ಅಬೀ ಸಿರ್ಹ್‌ರು ಮೊದಲ ವರ್ಷದಲ್ಲಿ ಅಧಿಕವಾಗಿರುವ ಆದಾಯವನ್ನು ತೋರಿಸಿದಾಗ ಉಸ್ಮಾನ್(ರ)ರು ಮಾಜಿ ಗವರ್ನರ್ ಆಗಿದ್ದ ಅಮ್ರ್ ಬಿನ್ ಆಸ್(ರ)ರನ್ನುದ್ದೇಶಿಸಿ, "ನೋಡಿರಿ, ಹಸು ಹೆಚ್ಚು ಹಾಲನ್ನು ನೀಡಿದೆ. ಅಂದರೆ ಇಬ್ನು ಅಬೀ ಸಿರ್ಹ್‌ರು ಆದಾಯವನ್ನು ಹೆಚ್ಚಿಸಿದ್ದಾರೆ" ಎಂದರು. ಅದಕ್ಕುತ್ತರಿಸಿದ ಅಮ್ರ್ ಬಿನ್ ಆಸ್(ರ)ರು,

"ಆದರೆ ಕರುಗಳು ಹಸಿವೆಯಿಂದ ಬಳಲುತ್ತಿದೆ" ಎಂದರು. ಅದರರ್ಥ ಜನರಿಂದ ಬಲವಂತವಾಗಿ ವಸೂಲಿ ಮಾಡಲಾಗಿದೆ ಎಂದಾಗಿದೆ.

ಅಮ್ರ್ ಬಿನ್ ಆಸ್(ರ)ರ ಚಾಣಾಕ್ಷತನವನ್ನು ಸ್ವತಃ ಪ್ರವಾದಿಯವರು(ಸ) ಪ್ರಶಂಸಿಸಿದ್ದರು. ಅಮ್ರ್ ಬಿನ್ ಆಸ್(ರ) ನಡೆದ ವಿಚಾರವನ್ನು ಈಜಿಪ್ಟ್‌ನ ಜನತೆಗೆ ತಿಳಿಸಿದಾಗ ಅಮ್ರ್ ಬಿನ್ ಆಸ್(ರ)ರು ಜನರ ಒಳಿತನ್ನು ಅತೀವವಾಗಿ ಬಯಸುತ್ತಿದ್ದರು ಹಾಗೂ ಇಬ್ನು ಸಿರ್ಹ್‌ರು ಪ್ರಜೆಗಳಿಗೆ ತೊಂದರೆಯಾದರೂ ಸರಿ ಹೆಚ್ಚಿನ ಲಾಭ ಪಡೆಯಲು ಪ್ರಯತ್ನಿಸುತ್ತಿದ್ದರು ಎಂದು ಅಲ್ಲಿನ ಜನರಿಗೆ ಮನವರಿಕೆಯಾಯಿತು.

ಇದೇ ರೀತಿ ಕೂಫಾದಲ್ಲಿ ಸಈದ್ ಬಿನ್ ಆಸ್‌ರು ಹಲವಾರು ಬಾರಿ ಮಾಡಿದ್ದರು. ಉಸ್ಮಾನ್(ರ)ರು ಅವರ ಬಗ್ಗೆ ವಿಚಾರಿಸಿದಾಗ, ಅದಕ್ಕುತ್ತರವಾಗಿ ಜನರು ಕೂಫಾದಲ್ಲಿ ಸಈದ್‌ರು ಪ್ರತಿಷ್ಠೆಯ ಗುಣಗಾನ ಮಾಡುತ್ತಾರೆ ಎಂದರು. ಅಂದರೆ ಸಾಮಾನ್ಯವಾಗಿ ರಾತ್ರಿ ವೇಳೆ ಅವರ ಮನೆಗಳಲ್ಲಿ ಪಂಗಡಗಳ

ಸರದಾರರು ಒಟ್ಟು ಸೇರುತ್ತಾರೆ ಹಾಗೂ ಎಲ್ಲರೂ ತಮ್ಮ ತಮ್ಮ ಕುಟುಂಬದ ಪ್ರತಿಷ್ಠೆಯ ಬಗ್ಗೆ ಗುಣಗಾನ ಮಾಡುತ್ತಿರುತ್ತಾರೆ. ಈ ವೇಳೆಯಲ್ಲಿ ಸಈದ್‌ರು ತಾವು ಕುರೈಶ್ ವಂಶಜನೆಂದು ಹೆಮ್ಮೆ ಪಡುತ್ತಾರೆ. ಈ ರೀತಿ ಅಜ್ಞಾನವು ಪುನಃ ಮರುಕಳಿಸುತ್ತಿದೆ. ಯಾವ ರೀತಿ ಕುಟುಂಬದ ಬಗ್ಗೆ ಹೆಮ್ಮೆ ಪಡುವುದನ್ನು ಪ್ರವಾದಿಯವರ(ಸ) ತರಬೇತಿಯೂ ಅದುಮಿ ಬಿಟ್ಟಿತೋ, ಇಂದು ಅದು ಪುನಃ ಜೀವಂತಗೊಂಡಿದೆ ಎಂದು ಜನರು ವಿಷಾದ ವ್ಯಕ್ತಪಡಿಸಿದರು.

ಇಬ್ನು ಸಬಾ ಇದನ್ನೆಲ್ಲಾ ನೋಡಿ ಸೂಕ್ಷ್ಮವಾಗಿ ಎಲ್ಲವನ್ನೂ ಗ್ರಹಿಸುತ್ತಿದ್ದರು. ಕೂಫಾಕ್ಕೆ ತಲುಪಿದ ಆತ ಪ್ರವಾದಿ(ಸ) ಹಾಗೂ ಅಲೀ(ರ)ಯವರು ಹಾಶಿಮ್ ಗೋತ್ರಕ್ಕೆ ಸೇರಿದವರು, ಈ ನಿಟ್ಟಿನಲ್ಲಿ ಖಿಲಾಫತ್‌ನ ಆಡಳಿತದ ನೈಜ ಹಕ್ಕುದಾರರು ಅಲೀ(ರ) ಆಗಿದ್ದಾರೆ. ಅಲೀ(ರ)ರು ಪ್ರವಾದಿಯವರ(ಸ) ಅಳಿಯ ಮಾತ್ರವಲ್ಲದೆ ಪ್ರವಾದಿಯವರು(ಸ) ಅವರ ಸದ್ಗುಣಗಳ ಬಗ್ಗೆ ಇಂತಿಂತಹ ಅತ್ಯುತ್ತಮ ವಿಚಾರಗಳನ್ನು ಹೇಳಿದ್ದಾರೆಂದು ಇಬ್ನು ಸಬಾ ಪ್ರಚಾರ ಮಾಡಿದನು.

ಒಂದೆಡೆ ಹೊಸ ಗವರ್ನರ್‌ಗಳ ಲೋಪ ದೋಷಗಳು, ಇನ್ನೊಂದೆಡೆ ಇಬ್ನು ಸಬಾನ ಕುತಂತ್ರ, ಪ್ರಚಾರಗಳು ಹೊಸ ಸಮಸ್ಯೆಯನ್ನು ಸೃಷ್ಟಿಸಿತು. ಹಜ್ಜ್‌ನ ಸಂದರ್ಭ ದಲ್ಲಿ ಈಜಿಪ್ಟ್, ಕೂಫಾ ಹಾಗೂ ಬಸ್ರಾದಿಂದ ಸಾವಿರಾರು ಜನರು ಹಜ್ಜ್‌ನ ನೆಪವೊಡ್ಡಿ ಅಲ್ಲಿಗೆ ಆಗಮಿಸಿದ್ದರು. ಆದರೆ ಮದೀನಾಕ್ಕೆ ತೆರಳಿ ಹ. ಉಸ್ಮಾನ್(ರ)ರ ವಿರುದ್ಧ ಧ್ವನಿ ಎತ್ತುವುದು ಅವರ ಮುಖ್ಯ ಉದ್ದೇಶವಾಗಿತ್ತು. ಅವರೆಲ್ಲರೂ ಒಟ್ಟು ಸೇರಿ ಮದೀನಾದ ಬಳಿಯಲ್ಲೇ ಠಿಕಾಣಿ ಹೂಡಿದರು. ಮದೀನಾದ ಸಹಾಬಿಗಳಿಗೆ ಈ ವಿಚಾರ ತಿಳಿದಾಗ ಅವರೆಲ್ಲರೂ ಹೋಗಿ ಆ ಜನರನ್ನು ಭೇಟಿಯಾದರು. ಅಲೀ(ರ)ಯವರು ಅವರಿಗೆ ತಿಳಿ ಹೇಳಿದರು, ಇಬ್ನು ಸಿರ್ಹ್‌ರನ್ನು ಗವರ್ನರ್ ಹುದ್ದೆಯಿಂದ ತೆಗೆದು ಮುಹಮ್ಮದ್ ಬಿನ್ ಅಬೂಬಕರ್(ರ)ರನ್ನು ನೇಮಿಸುವುದಾಗಿ ನಿರ್ಧರಿಸಲಾಯಿತು. ಹೀಗೆ ನಾಲ್ದೆಸೆಯಿಂದಲೂ ಆಗಮಿಸಿದ್ದ ಜನರೆಲ್ಲ ಹಿಂದಿರುಗಿದರು. ಗವರ್ನರ್ ಪಟ್ಟದೊಂದಿಗೆ ಮುಹಮ್ಮದ್ ಬಿನ್ ಅಬೂಬಕರ್(ರ) ಅವರ ಜೊತೆಗಿದ್ದರು. ದಾರಿ ಮಧ್ಯೆ ಅವರು ಓರ್ವ ವ್ಯಕ್ತಿಯನ್ನು ಹಿಡಿದು ತಪಾಸಣೆ ನಡೆಸಿದಾಗ ಆತನ ಬಳಿಯಿಂದ ಒಂದು ಪತ್ರ ಸಿಕ್ಕಿತು. ಪತ್ರವು ಈಜಿಪ್ಟ್‌ನ ಗವರ್ನರ್‌ನ ಹೆಸರಲ್ಲಿತ್ತು. ಅದರಲ್ಲಿ ಮುಹಮ್ಮದ್ ಬಿನ್ ಅಬೂಬಕರ್(ರ) ಹಾಗೂ ಅವರ ಸಂಗಾತಿಗಳನ್ನು ಕೊಂದುಬಿಡಿರಿ. ಅವರೆಲ್ಲರೂ ಬಂಡುಕೋರರಾಗಿದ್ದಾರೆ ಎಂದು ಬರೆಯಲಾಗಿತ್ತು. ಆ ಪತ್ರದ ಮೇಲೆ ಉಸ್ಮಾನ್(ರ)ರ ಮುದ್ರೆ ಹಾಕಲಾಗಿತ್ತು. ಮುಹಮ್ಮದ್

ಬಿನ್ ಅಬೂಬಕರ್(ರ)ರು ಆ ಪತ್ರದೊಂದಿಗೆ ಹಿಂದಿರುಗಿದರು. ಎಲ್ಲಾ ಸಹಾಬಿಗಳ ಸಮಕ್ಷಮ ಆ ಪತ್ರವನ್ನು ಉಸ್ಮಾನ್(ರ)ರ ಮುಂದಿರಿಸಿದರು ಇದನ್ನು ನೋಡಿದೊಡನೆ ಕಿವಿಗಳ ಮೇಲೆ ಕೈಯಿರಿಸಿದ ಉಸ್ಮಾನ್(ರ)ರು "ಅಲ್ಲಾಹನಾಣೆ, ಈ ಪತ್ರ ನಾನು ಬರೆದಿಲ್ಲ" ಎಂದರು.

ಹ. ಉಸ್ಮಾನ್(ರ)ರ ಮಾತನ್ನು ಕೇಳಿದ ಜನರು ಎರಡು ಬೇಡಿಕೆಗಳನ್ನಿಟ್ಟರು. ನಿಮ್ಮ ಕಾರ್ಯದರ್ಶಿಯನ್ನು ನಮಗೊಪ್ಪಿಸಿರಿ. ಈ ದುಷ್ಕೃತ್ಯ ಆತನದ್ದೇ ಆಗಿದೆ, ಇಲ್ಲವಾದಲ್ಲಿ ನೀವು ಖಿಲಾಫತನ್ನು ಬಿಟ್ಟು ಬಿಡಿರಿ.

ಹ. ಉಸ್ಮಾನ್(ರ)ರು ಖಿಲಾಫತ್‌ನ ಕಾರ್ಯವನ್ನು ಬಿಟ್ಟು ಬಿಡಲು ನಿರಾಕರಿಸಿದರು. ಕಾರಣ ಹ. ಆಯಿಶಾ(ರ)ರ ಒಂದು ವರದಿಯ ಪ್ರಕಾರ ಪ್ರವಾದಿಯವರು(ಸ) ಈ ರೀತಿ ಹೇಳಿದ್ದರು, "ಒಂದು ವೇಳೆ ಅಲ್ಲಾಹನು ನಿಮಗೆ ಖಿಲಾಫತನ್ನು ದಯಪಾಲಿಸಿದರೆ ನೀವದನ್ನು ನಿಮ್ಮ ಇಚ್ಛೆಯಂತೆ ಬಿಟ್ಟು ಬಿಡಬೇಡಿರಿ."

ಇನ್ನು ಕಾರ್ಯದರ್ಶಿಯ ವಿಚಾರ. ಒಂದು ವೇಳೆ ಅವರನ್ನು ಜನರಿಗೆ ಒಪ್ಪಿಸಿ ಬಿಟ್ಟರೆ ಅವರು ಕೊಂದೇ ಬಿಡುವರು ಎಂದು ಹ. ಉಸ್ಮಾನ್(ರ)ರು ಅರಿತಿದ್ದರು. ಅಲ್ಲದೆ ಅವರ ವಿರುದ್ಧ ಯಾವ ಆಧಾರಗಳೂ ದೊರಕದ್ದರಿಂದ ಕೇವಲ ಅನುಮಾನದ ಆಧಾರದಲ್ಲಿ ಓರ್ವ ಅಮಾಯಕ ಬಲಿಯಾಗಬಹುದು ಎಂದು ಹ. ಉಸ್ಮಾನ್(ರ) ಆತಂಕಗೊಂಡರು. ಆ ಕಾರ್ಯದರ್ಶಿಯ ಹೆಸರು 'ಮರ್‌ವಾನ್' ಎಂದಾಗಿತ್ತು. ಅವರು ಉಸ್ಮಾನ್(ರ)ರ ಸೋದರ ಸಂಬಂಧಿ. ಮರ್‌ವಾನ್ ಓರ್ವ ಅತೀ ಬುದ್ಧಿವಂತ ಹಾಗೂ ಕ್ಷೋಭೆ ಹುಟ್ಟಿಸುವವನೆಂದು ಜನರ ಅಭಿಪ್ರಾಯ. ಆದುದರಿಂದ ಈ ಎಲ್ಲಾ ಕೆಡುಕು ಆತನಿಂದಲೇ ಸಂಭವಿಸಿದೆ ಎಂಬುದು ಎಲ್ಲರ ಭಾವನೆಯಾಗಿತ್ತು.

ಹ. ಉಸ್ಮಾನ್(ರ)ರು ಎರಡೂ ಬೇಡಿಕೆಗಳನ್ನು ತಿರಸ್ಕರಿಸಿದರು. ಹಿರಿಯ ಸಹಾಬಿಗಳೆಲ್ಲಾ(ರ) ದಾರಿ ತೋಚದೆ ಮೌನ ವಹಿಸಿದರು. ಮುಹಮ್ಮದ್ ಬಿನ್ ಅಬೂಬಕರ್(ರ) ಹಾಗೂ ಅವರ ಸಂಗಡಿಗರು ಉದ್ವೇಗಕ್ಕೊಳಗಾದರು. ಅವರು ಹ. ಉಸ್ಮಾನ್(ರ)ರ ಮನೆಯನ್ನು ಸುತ್ತುವರಿದರು. ಆ ಎರಡು ಬೇಡಿಕೆಗಳಲ್ಲಿ ಒಂದನ್ನು ಸ್ವೀಕರಿಸುವಂತೆ ಆಗ್ರಹಿಸಿದರು.

ಮುಹಮ್ಮದ್ ಬಿನ್ ಅಬೂಬಕರ್(ರ) ಆಯಿಶಾ(ರ)ರ ಮಲ ಸಹೋದರರಾಗಿದ್ದರು. ಹ. ಅಬೂಬಕರ್(ರ)ರ ನಿಧನದ ಬಳಿಕ ಅವರ ತಾಯಿಯನ್ನು ಅಲೀ(ರ)ರು ವಿವಾಹವಾದರು. ಅಂದಿನಿಂದ ಮುಹಮ್ಮದ್ ಬಿನ್ ಅಬೂಬಕರ್(ರ)ರು ಅಲೀ(ರ)ರ ಪೋಷಣೆಯಲ್ಲಿ ಬೆಳೆದರು. ಪತ್ರದ

ಕುತಂತ್ರದಿಂದಾಗಿ ಅವರು ತುಂಬಾ ಕುಪಿತರಾದರು. ಆಯಿಶಾ(ರ)ರು ಸಹೋದರ ಮುಹಮ್ಮದ್(ರ)ರಿಗೆ ಎಷ್ಟೇ ತಿಳಿ ಹೇಳಿದರೂ ಅವರು ಒಪ್ಪಲಿಲ್ಲ.

ಹಜ್ಜ್‌ನ ದಿನಗಳು ಸಮೀಪಿಸುತ್ತಿದ್ದುವು. ಹ. ಆಯಿಶಾ(ರ)ರು ಪ್ರತೀ ವರ್ಷ ಹಜ್ಜ್ ನಿರ್ವಹಿಸುತ್ತಿದ್ದರು. ಈ ವರ್ಷ ಸಹೋದರನ ಜೊತೆ ಹೋಗಲು ಬಯಸಿದರು. ಸಹೋದರ ಮುಹಮ್ಮದ್(ರ)ರು ಬಂಡುಕೋರರಿಂದ ದೂರ ಉಳಿಯಲಿ ಹಾಗೂ ಈ ಬಂಡಾಯದ ಆರೋಪ ಸಹೋದರನ ಮೇಲೆ ಬೀಳದಿರಲಿ ಎಂಬುದು ಆಯಿಶಾ(ರ)ರ ಉದ್ದೇಶವಾಗಿತ್ತು. ಆದರೆ ಮುಹಮ್ಮದ್‌ರು(ರ) ಇದನ್ನು ನಿರಾಕರಿಸಿದರು. ಹ. ಆಯಿಶಾ(ರ) ತನ್ನ ಸವತಿಯರೊಂದಿಗೆ ಹಜ್ಜ್‌ಗಾಗಿ ಹೊರಟರು, ಇತ್ತ ಮುಹಮ್ಮದ(ರ)ರು ತಮ್ಮ ಸಂಗಾತಿಗಳು ಹಾಗೂ ಸಬಾಈ ಮನಃಸ್ಥಿತಿಯ ಜನರೊಂದಿಗೆ ಸೇರಿ ಖಲೀಫಾರ ಮನೆಯನ್ನು ಸುತ್ತುವರಿದಿದ್ದರು. ಹೊರಗಿನಿಂದ ಒಳಹೋಗುವುದನ್ನು, ಒಳಗಿಂದ ಹೊರಬರುವುದನ್ನು, ಊಟ-ತಿಂಡಿ ಕಳುಹಿಸುವುದನ್ನು ಎಲ್ಲವನ್ನೂ ತಡೆಯಲಾಯಿತು.

ಈ ವಿಷಯು ಪ್ರಸಿದ್ಧ ಸಹಾಬಿಗಳಿಗೆ ತಿಳಿದಾಗ ಅವರೆಲ್ಲರೂ ಆತಂಕಗೊಂಡರು. ಈ ಬಂಡುಕೋರರ ವಿರುದ್ಧ ಸೆಣಸಾಡಲು ಖಲೀಫಾರ ಬಳಿ ಅನುಮತಿ ಕೇಳಿದರು. ಆದರೆ ಹ. ಉಸ್ಮಾನ್(ರ)ರು ಅನುಮತಿ ನಿರಾಕರಿಸಿದರು. ಎರಡು ಮುಸ್ಲಿಮ್ ಗುಂಪುಗಳು ಪರಸ್ಪರ ಕಾದಾಡುವುದು ಮತ್ತು ಅವರ ಶಕ್ತಿ ಕುಂದುವುದು ಅವರಿಗೆ ಇಷ್ಟವಿರಲಿಲ್ಲ.

ದಾರಿ ಕಾಣದೆ ಹಿರಿಯ ಸಹಾಬಿಗಳೆಲ್ಲಾ ಸುಮ್ಮನೆ ಕುಳಿತುಕೊಂಡರು. ಖಲೀಫಾರ ರಕ್ಷಣೆಗಾಗಿ ತಮ್ಮ ಯುವಕರನ್ನು ಕಳುಹಿಸಿದರು. ಅಲೀ(ಅ)ಯವರು ತಮ್ಮ ಪುತ್ರ ಹಸನ್(ರ)ರನ್ನು ಕಳುಹಿಸಿದರು. ಬಂಡುಕೋರರು ಮನೆಗೆ ನುಗ್ಗಲು ತಂತ್ರ ಹೂಡುತ್ತಿದ್ದರು. ಆದರೆ ಅವರ ಈ ಕುತಂತ್ರವನ್ನು ಹಸನ್(ರ) ಹಾಗೂ ಇತರ ಯುವಕರು ವಿಫಲಗೊಳಿಸಿದರು. ಎರಡೂ ಕಡೆಯಿಂದ ಸಣ್ಣಮಟ್ಟದ ಸಂಘರ್ಷವೂ ನಡೆಯಿತು. ಹಸನ್(ರ)ರ ಸಂಗಡಿಗರು ಕೆಲವೇ ಮಂದಿ ಇದ್ದರೂ, ಆ ಬಂಡುಕೋರರನ್ನು ಮನೆಯೊಳಗೆ ನುಗ್ಗಲು ಬಿಡಲಿಲ್ಲ, ಇದನ್ನು ಗಮನಿಸಿದ ಮುಹಮ್ಮದ್ ಬಿನ್ ಅಬೂಬಕರ್(ರ) ಹಾಗೂ ಕೆಲವು ಮಂದಿ ಮನೆಯ ಹಿಂಬಾಗಿಲಿನಿಂದ ಮನೆಯೊಳಗೆ ನುಗ್ಗಿಬಿಟ್ಟರು. ಅಲ್ಲಿ ಉಸ್ಮಾನ್(ರ)ರು ಕುರ್‌ಆನ್ ಪಾರಾಯಣದಲ್ಲಿ ತಲ್ಲೀನರಾಗಿದ್ದರು. ಖಲೀಫಾರ ಮೇಲೆ ತಲವಾರಿನ ಮೊದಲ ದಾಳಿ ಮುಹಮ್ಮದ್ ಬಿನ್ ಅಬೂಬಕರ್(ರ)ರದ್ದೇ ಆಗಿತ್ತು ಎಂದು ಹೇಳಲಾಗುತ್ತದೆ. ಬಳಿಕ ಬಂಡುಕೋರರೆಲ್ಲಾ ಒಟ್ಟಿಗೆ ಸೇರಿ

ಉಸ್ಮಾನ್(ರ)ರನ್ನು ವಧಿಸಿದರು. ಮೂರನೇ ಖಲೀಫ ಹ. ಉಸ್ಮಾನ್(ರ) ಹುತಾತ್ಮರಾದರು. (ಇನ್ನಾಲಿಲ್ಲಾಹ್)

ಉಸ್ಮಾನ್(ರ)ರ ಬಳಿಕ ಖಲೀಫರ ಆಯ್ಕೆಯ ಸಮಸ್ಯೆ ಉದ್ಭವಿಸಿತು:

ಇವರಲ್ಲಿ ತಲ್ಹಾ(ರ), ಝುಬೈರ್(ರ) ಹಾಗೂ ಅಲೀ(ರ)ಯವರ ಹೆಸರುಗಳು ಪ್ರಸ್ತಾಪಕ್ಕೆ ಬಂದವು. ಈ ಪರಿಸ್ಥಿತಿಯನ್ನು ಅರಿತ ಪ್ರಸಿದ್ಧ ಸಹಾಬಿ ಸಅದ್ ಬಿನ್ ಅಬೀ ವಕ್ಕಾಸ್(ರ)ರು ತಮ್ಮ ಮನೆಯಲ್ಲೇ ಉಳಕೊಂಡರು. ಮನೆಯಿಂದ ಹೊರಗೆ ಬರಲೇ ಇಲ್ಲ. ಹ. ಅಲೀ(ರ)ಯವರ ಬೆಂಬಲಿಗರಲ್ಲಿ ಮುಹಮ್ಮದ್ ಬಿನ್ ಅಬೂಬಕರ್(ರ) ಹಾಗೂ ಬಂಡುಕೋರರ ಗುಂಪೂ ಸೇರಿಕೊಂಡಿತ್ತು. ಹೀಗೆ ಅಲೀ(ರ)ರ ಬೆಂಬಲಿಗರ ಸಂಖ್ಯೆ ಅಧಿಕವಾಗಿತ್ತು. ಅವರೆಲ್ಲರೂ ಅಲೀ(ರ)ಯವರ ಬಳಿ ಬಂದು ಖಿಲಾಫತ್‌ನ ಜವಾಬ್ದಾರಿಯನ್ನು ವಹಿಸಿಕೊಳ್ಳುವಂತೆ ಸೂಚಿಸಿದರು. ಆರಂಭದಲ್ಲಿ ನಿರಾಕರಿಸಿದ ಅಲೀ(ರ)ಯವರು ಎಲ್ಲರ ಒತ್ತಾಯದ ಮೇರೆಗೆ ತಲ್ಹಾ(ರ) ಹಾಗೂ ಝುಬೈರ್(ರ)ರು ಪ್ರತಿಜ್ಞೆ ಮಾಡುವ ತನಕ ನಾನು ಈ ಜವಾಬ್ದಾರಿಯನ್ನು ವಹಿಸಿಕೊಳ್ಳಲಾರೆ ಎಂದರು. ಬಂಡುಕೋರರು ಅವರೀರ್ವರನ್ನು ಕರೆ ತಂದು ಪ್ರತಿಜ್ಞೆ ಮಾಡಿಸಿದರು. ಈ ವಿಚಾರ ಮದೀನಾದ ಜನತೆಗೆ ತಿಳಿದಾಗ ಅವರೂ ಕೂಡ ಅಲೀ(ರ)ಯವರನ್ನು ಖಲೀಫರಾಗಿ ಅಂಗೀಕರಿಸಿದರು.

ಹ. ಅಲೀ(ರ)ಯವರು ಖಲೀಫರಾದಾಗ ಅವರ ಮುಂದೆ ಬಂದ ಮೊದಲ ಪ್ರಕರಣ, ಉಸ್ಮಾನ್(ರ)ರ ಕೊಲೆಗಾರರಿಗೆ ಶಿಕ್ಷೆ ವಿಧಿಸುವುದರ ಕುರಿತಾಗಿತ್ತು. ಆಗ ಅಲೀ(ರ)ಯವರು ಖಿಲಾಫತ್‌ನ ನಿರ್ವಹಣೆ ಸರಿ ಹೊಂದಿದ ಬಳಿಕ ಆ ವಿಷಯದ ಕಡೆ ಗಮನಹರಿಸೋಣ ಎಂದರು. ಆದರೆ ಶಿಕ್ಷೆಗಾಗಿ ಒತ್ತಾಯಿಸಿದಾಗ ಬಂಡುಕೋರರು ಭಯಭೀತರಾದರು. ದಂಡನೆಗೆ ಒತ್ತಾಯಿಸುತ್ತಿರುವವರ ಹಾಗೂ ಅಲೀ(ರ)ಯವರ ನಡುವೆ ಸಂಧಾನವಾಗದಿರಲೆಂದು ಅವರು ಬಯಸುತ್ತಿದ್ದರು. ಶಿಕ್ಷೆಗಾಗಿ ಬೇಡಿಕೆ ಇಡುತ್ತಿರುವವರನ್ನು ಬೆಂಬಲಿಸುತ್ತಿರುವ ನಾಯಕರನ್ನು ಹತ್ಯೆ ಮಾಡಲು ಯೋಚಿಸಿದರು. ಅವರ ಗುರಿಯು ಹ. ತಲ್ಹಾ(ರ) ಹಾಗೂ ಝುಬೈರ್(ರ)ರ ಕಡೆಗಿತ್ತು. ಇದಕ್ಕಾಗಿ ಅವರು ಸತತ ಸಿದ್ಧತೆ ನಡೆಸುತ್ತಿದ್ದರು. ಆ ಹಿರಿಯ ಸಹಾಬಿಗಳು ಮದೀನಾದಿಂದ ಹೊರಡುವುದೇ ಒಳಿತು ಎಂದು ಭಾವಿಸಿದರು. ರಾತೋರಾತ್ರಿ ಅವರು ಮದೀನಾದಿಂದ ಹೊರ ನಡೆದರು.

ಹಜ್ಜ್ ನಿರ್ವಹಿಸಿ ಹಿಂದಿರುಗುತ್ತಿದ್ದ ವೇಳೆ ಹ. ಉಸ್ಮಾನ್(ರ)ರು ಹುತಾತ್ಮರಾದ ಸುದ್ಧಿ ಕೇಳಿ ಆಯಿಶಾ(ರ) ದುಃಖಿತರಾದರು. ಮುಂದೆ

ಸಾಗಿದಾಗ ತಲ್ಹಾ(ರ) ಹಾಗೂ ಝುಬೈರ್(ರ)ರು ಎದುರಾದರು. ಅವರೊಡನೆ ಕ್ಷೇಮ ವಿಚಾರಿಸಿದಾಗ ಅವರು, "ನಾವು ಆಯೋಗ್ಯರಿಂದ ಬೇಸತ್ತು ಮದೀನಾದಿಂದ ಪಲಾಯನ ಮಾಡಿ ಬಂದಿದ್ದೇವೆ. ಜನರನ್ನು ಅಸಹಾಯಕರಾಗಿ ಬಿಟ್ಟು ಬಂದಿದ್ದೇವೆ. ಅವರಲ್ಲಿ ಸತ್ಯವನ್ನು ಸತ್ಯವೆಂದು ಹೇಳುವ ಹಾಗೂ ಸುಳ್ಳನ್ನು ನಿರಾಕರಿಸುವ ಸಾಮರ್ಥ್ಯವೂ ಇರಲಿಲ್ಲ. ಏಕೆಂದರೆ ಅವರು ತಮ್ಮನ್ನು ತಾವು ರಕ್ಷಿಸಿಕೊಳ್ಳಲಾರರು.

ಹ. ಆಯಿಶಾ(ರ) ಹೇಳಿದರು, "ಪರಸ್ಪರ ಸಮಾಲೋಚನೆ ನಡೆಸಿ ಪರಿಹಾರ ಕಂಡುಕೊಳ್ಳಿರಿ." ಬಳಿಕ ಅವರು ಮಕ್ಕಾದ ಕಡೆ ಪಯಣ ಬೆಳೆಸಿದರು. ಅಲ್ಲಿ ಜನರು ಆಯಿಶಾ(ರ)ರ ಬಳಿ ಒಟ್ಟು ಸೇರತೊಡಗಿದರು. ಹ. ಆಯಿಶಾ(ರ)ರು ಸೂರಃ ಹುಜರಾತ್‌ನ ಈ ಸೂಕ್ತವನ್ನು ಪಠಿಸಿದರು.

**"ಸತ್ಯವಿಶ್ವಾಸಿಗಳಲ್ಲಿ ಎರಡು ಗುಂಪುಗಳು ಪರಸ್ಪರ ಜಗಳಾಡಿದರೆ, ಅವರ ನಡುವೆ ಸಂಧಾನ ಮಾಡಿಸಿರಿ. ಅವರಲ್ಲಿ ಒಂದು ಗುಂಪು ಇನ್ನೊಂದು ಗುಂಪಿನ ಮೇಲೆ ಅತಿರೇಕವೆಸಗಿದರೆ, ಅತಿರೇಕವೆಸಗಿದವರು ಅಲ್ಲಾಹನ ಆದೇಶದೆಡೆಗೆ ಮರಳಿ ಬರುವ ವರೆಗೂ ಅವರ ವಿರುದ್ಧ ಹೋರಾಡಿರಿ. ತರುವಾಯ ಅವರು ಮರಳಿ ಬಂದರೆ, ಅವರ ಮಧ್ಯೆ ನ್ಯಾಯಪೂರ್ಣ ಸಂಧಾನ ಮಾಡಿಸಿಬಿಡಿರಿ ಮತ್ತು ನ್ಯಾಯವನ್ನು ಪಾಲಿಸಿರಿ. ಅಲ್ಲಾಹನು ನ್ಯಾಯ ಪರಿಪಾಲಕರನ್ನು ಪ್ರೀತಿಸುತ್ತಾನೆ." (ಕುರ್‌ಆನ್ 49:9)**

ಅದು ಹಜ್ಜ್‌ನ ಕಾಲವಾಗಿತ್ತು. ಸಂಧಾನದ ಉದ್ದೇಶದಿಂದ ಮುಸ್ಲಿಮರನ್ನು ಕರೆಯಲಾಯಿತು. ಆರು ಸಾವಿರ ಜನರು ಒಟ್ಟು ಸೇರಿದರು. ಮದೀನಾದೆಡೆಗೆ ಸಾಗುವಂತೆ ಆಯಿಶಾ(ರ)ರು ಸೂಚಿಸಿದರು. ಬಸ್ರಾದೆಡೆಗೆ ನಡೆದರೆ ಅಲ್ಲಿ ಬೃಹತ್ ಗುಂಪು ಜಮಾಯಿಸಬಹುದೆಂದು ಅಭಿಪ್ರಾಯಪಟ್ಟರು. ಬಂಡುಕೋರರು ಹಾಗೂ ಸಬಾದವರು ಮದೀನಾದಲ್ಲಿದ್ದಾರೆ, ಆದುದರಿಂದ ನಾವು ಮದೀನಾದೆಡೆಗೆ ನಡೆಯೋಣ ಎಂದು ಆಯಿಶಾ(ರ)ರು ಹೇಳಿದರು. ಆದರೆ, ಬಳಿಕ ಎಲ್ಲರ ಒಮ್ಮತಾಭಿಪ್ರಾಯದಂತೆ ಬಸ್ರಾದ ಕಡೆ ಪಯಣ ಬೆಳೆಸಿದರು. ಅವರಿಗೆ ವಿದಾಯ ಕೋರಲು ಸ್ವಲ್ಪ ದೂರದ ವರೆಗೆ ಬಂದ ಇತರ ಪ್ರವಾದಿಪತ್ನಿಯರು ಬಳಿಕ ಹಿಂದಿರುಗಿದರು.

ಈ ಗುಂಪು ಸಾಗುತ್ತಿದ್ದಂತೆ ಜನರ ಸಂಖ್ಯೆಯು ವೃದ್ಧಿಸತೊಡಗಿತು. ದಾರಿ ಮಧ್ಯೆ ಹವ್ವಾಬ್ ಎಂಬ ಒಂದು ಸ್ಥಳದ ತೀರದಲ್ಲಿ ಒಂದು ಕೆರೆಯಿತ್ತು. ಆ ಕೆರೆಯ ಸಮೀಪ ಹಲವು ನಾಯಿಗಳು ನಿಂತಿದ್ದವು. ಬೃಹತ್ ದಂಡನ್ನು ನೋಡಿ ಅವುಗಳು ಬೊಗಳ ತೊಡಗಿದವು. ನಾಯಿಗಳ ಬೊಗಳುವಿಕೆಯನ್ನು ಕೇಳಿದ ಆಯಿಶಾ(ರ)ರು ಬೆಚ್ಚಿಬಿದ್ದರು. ಕೆರೆ ನೋಡಿದೊಡನೆ ಆಯಿಶಾ(ರ)ರಿಗೆ

ಪ್ರವಾದಿ(ಸ)ರ ಭವಿಷ್ಯವಾಣಿ ನೆನಪಾಯಿತು. ಸ್ವತಃ ಆಯಿಶಾ(ರ)ರು ಹೇಳುತ್ತಾರೆ "ಹವ್ವಾಬ್ ತಲುಪಿದೊಡನೆ ನಾಯಿಗಳು ಬೊಗಳುವುದನ್ನು ನಾನು ಕಂಡೆ ನಾನು ಈಗ ಇಲ್ಲಿಂದ ವಾಪಸಾಗುತ್ತೇನೆಂದೆ. ಏಕೆಂದರೆ ಒಮ್ಮೆ ಪ್ರವಾದಿಯವರು(ಸ) ನನ್ನ ಹಾಗೂ ಇತರ ಸತ್ಯವಿಶ್ವಾಸಿ ಮಾತೆಯರನ್ನುದ್ದೇಶಿಸಿ ಈ ರೀತಿ ಹೇಳಿದ್ದರು, "ನಿಮ್ಮಲ್ಲಿ ಯಾರ ಮೇಲೆ ಹವ್ವಾಬ್‌ನ ನಾಯಿಗಳು ಬೊಗಳುತ್ತವೆಂದು ಅಲ್ಲಾಹನೇ ಬಲ್ಲ." ಇದನ್ನು ಕೇಳಿದ ಝುಬೈರ್(ರ)ರು ನನ್ನನ್ನುದ್ದೇಶಿಸಿ, "ನೀವು ಇಲ್ಲಿಂದ ಹಿಂದಿರುಗುತ್ತೀರಾ? ನಿಮ್ಮ ಕಾರಣದಿಂದ ಅಲ್ಲಾಹನು ಜನರ ನಡುವೆ ಸಂಧಾನ ಮಾಡಬಯಸಿದ್ದರೆ..." ಎಂದರು.

ತತ್‌ಕ್ಷಣ, ಮುನ್ನಡೆಯಿರಿ, ಅಲೀ(ರ)ಯವರ ಸೈನ್ಯ ಬರುತ್ತಿದೆ ಎಂಬ ಗುಲ್ಲು ಗದ್ದಲವೆಬ್ಬಿತು. ತಂಡವು ಮುನ್ನಡೆಯಿತು. ಎಲ್ಲರೂ ಬಸ್ರಾ ತಲುಪಿದರು ಅವರ ಹಿಂದಿನಿಂದ ಬಂದ ಅಲೀ(ರ)ಯವರ ಬೆಂಬಲಿಗರೂ ಬಸ್ರಾ ತಲುಪಿದರು, ಹಸನ್(ರ) ಹಾಗೂ ಅಮ್ಮಾರ್ ಬಿನ್ ಯಾಸಿರ್(ರ)ರೂ ಅವರ ಜೊತೆಗಿದ್ದರು. ಅವರೆಲ್ಲರೂ ತಲುಪಿದೊಡನೆ ಬಸ್ರಾದಲ್ಲೆಡೆ ತರತರದ ಮಾತುಗಳು ಕೇಳ ತೊಡಗಿದವು. ಕೆಲವರು, ಎರಡೂ ತಂಡದ ಜನರನ್ನು ಸಂಧಾನದೆಡೆಗೆ ಆಹ್ವಾನಿಸುತ್ತಿದ್ದರು. ಇನ್ನು ಕೆಲವರು ಬಂಡುಕೋರರು ಹಾಗೂ ಉಸ್ಮಾನ್(ರ)ರ ಕೊಲೆಗಾರರಿಗೆ ಶಿಕ್ಷೆ ವಿಧಿಸುವಂತೆ ಹೇಳುತ್ತಿದ್ದರು. ಮತ್ತೆ ಕೆಲವರು ಅಲೀ(ರ)ರಿಗೆ ಸಹಾಯ ಮಾಡುವ ಹುಮ್ಮಸ್ಸಿನಲ್ಲಿದ್ದರು.

ಎರಡೂ ಕಡೆಗಳಿಂದ ಆದ ಪ್ರಚಾರವು ಇನ್ನೂ ದೀರ್ಘವಾಗಿದೆ. ಉಸ್ಮಾನ್(ರ)ರ ಕಾರ್ಯದರ್ಶಿಯಾಗಿದ್ದ ಮರ್‌ವಾನ್ ಹಾಗೂ ಆತನ ಮನೆಮಂದಿ, ಉಸ್ಮಾನ್(ರ)ರ ಕೊಲೆಗಡುಕರನ್ನು ಶಿಕ್ಷಿಸಬೇಕೆಂದು ಆಗ್ರಹಿಸುತ್ತಿದ್ದ ಗುಂಪಿನಲ್ಲಿ ಸೇರಿಕೊಳ್ಳುವುದು ಒಳಿತು ಎಂದುಕೊಂಡರು. ಎರಡೂ ಕಡೆಯ ಹಿರಿಯರಲ್ಲಿ ಸಂಧಾನವಾಗದಿರಲೆಂದು ಸಬಾಈ ಗಳು ಬಯಸುತ್ತಿದ್ದರು. ಇದೇ ರೀತಿ ಎರಡೂ ಗುಂಪುಗಳು ಜಗಳವಾಡಿ ದುರ್ಬಲ ಗೊಳ್ಳಲಿ ಹಾಗೂ ಉಸ್ಮಾನ್(ರ)ರ ಶಹಾದತ್‌ನ ಕಾರಣದಿಂದ ಹ. ಅಲೀ(ರ)ಯವರ ವಿರುದ್ಧ ಪ್ರಚಾರ ಮಾಡುತ್ತಿದ್ದ ಸಿರಿಯಾದ ಗವರ್ನರ್ ಮುಆವಿಯಾರಿಗೆ ಅಧಿಕಾರ ಸಿಗಲಿ ಎಂಬುದು ಮರ್‌ವಾನ್ ಹಾಗೂ ಆತನ ಬೆಂಬಲಿಗರ ಬಯಕೆಯಾಗಿತ್ತು. ಮರ್‌ವಾನ್ ಹಾಗೂ ಮುಆವಿಯಾ ಉಮಯ್ಯಾ ಕುಟುಂಬಕ್ಕೆ ಸೇರಿದವರಾಗಿದ್ದರು.

ಪ್ರಚಾರದ ಪರಿಣಾಮ ಮೂವತ್ತು ಸಾವಿರ ಮಂದಿ ಹ. ಆಯಿಶಾ(ರ), ತಲ್ಹಾ(ರ) ಹಾಗೂ ಝುಬೈರ್(ರ)ರ ಪರವಾಗಿ ನಿಂತರು. ಅಲೀ(ರ)ರೂ

ಅವರ ಕಡೆ ಸಾಗಿದರು. ಈ ವೇಳೆ ಅಲೀ(ರ)ಯವರ ಸೈನ್ಯದಲ್ಲಿ ಇಪ್ಪತ್ತು ಸಾವಿರ ಸೈನಿಕರಿದ್ದರು.

ಅಲೀ(ರ), ಆಯಿಶಾ(ರ), ಝುಬೈರ್, ಅಮ್ಮಾರ್ ಬಿನ್ ಯಾಸಿರ್(ರ)ರು ಹಿರಿಯರಾಗಿದ್ದರು ಹಾಗೂ ಪರಸ್ಪರರ ಸ್ಥಾನಮಾನಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು. ಸಂಧಾನಕ್ಕಾಗಿ ಅವರೆಲ್ಲರೂ ಪರಸ್ಪರ ಸಮಾಲೋಚನೆ ನಡೆಸುತ್ತಿದ್ದರು. ಇದನ್ನು ಕಂಡ ಉಸ್ಮಾನ್(ರ)ರ ಹಂತಕರು ಆತಂಕ್ಕೊಳಗಾದರು. ಸಬಾಈಗಳು ಅಲೀ(ರ)ಯವರ ಜೊತೆಗಿದ್ದರು.

ಒಂದು ರಾತ್ರಿ ಎರಡೂ ಕಡೆಯವರು ಗಾಢ ನಿದ್ರೆಯಲ್ಲಿದ್ದಾಗ ಸಬಾಈಗಳು ಹ. ಆಯಿಶಾ(ರ)ರ ಬೆಂಬಲಿಗರ ಮೇಲೆ ದಾಳಿ ನಡೆಸಿದರು. ಹ. ಅಲೀ(ರ)ಯವರಿಗೆ ಈ ವಿಷಯ ತಿಳಿದಾಗ ಅವರನ್ನು ತಡೆಯಲು ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಅಲ್ಲಿ ಕಲಹಗಳುಂಟಾದವು. ಬೆಳಗ್ಗೆದ್ದ ಆಯಿಶಾ(ರ)ರು ಕಲಹಕ್ಕೆ ಕಾರಣ ಕೇಳಿದಾಗ ಜನರು, "ನೀವು(ರ) ಇಲ್ಲಿಂದ ಹೊರಡಿರಿ. ನಿಮ್ಮನ್ನು ನೋಡಿಯಾದರೂ ಜನರು ಕಲಹದಿಂದ ದೂರ ಉಳಿಯಬಹುದು" ಎಂದರು. ಆಯಿಶಾ(ರ)ರು ಕಬ್ಬಿಣದಿಂದ ತಯಾರಿಸಿದ್ದ ಒಂಟೆಯ ಅಂಬಾರಿಯಲ್ಲಿ ಕುಳಿತು ಯುದ್ಧ ರಂಗದೆಡೆಗೆ ನಡೆದರು. ತಲ್ಹಾ(ರ), ಝುಬೈರ್(ರ)ರನ್ನು ತನ್ನ ಬಳಿಗೆ ಕರೆಯಿಸಿಕೊಂಡರು. ಅವರೀರ್ವರೂ ಕುದುರೆ ಮೇಲೆ ಸವಾರಿಯಾಗಿದ್ದರು. ಬಳಿಕ ಅವರು ಮೂವರು ಸೇರಿ ಅಲೀ(ರ)ಯವರ ಬಳಿಗೆ ಹೋದರು. ಆಗ ಅಲೀ(ರ)ಯವರು ತಲ್ಹಾ(ರ) ಹಾಗೂ ಝುಬೈರ್(ರ)ರನ್ನು ಉದ್ದೇಶಿಸಿ, ಒಂದು ದಿನ ನೀವಿಬ್ಬರೂ ಅಲೀ(ರ)ರ ವಿರುದ್ಧ ಬಂಡಾಯವೇಳುತ್ತೀರಿ ಎಂದಿದ್ದ ಪ್ರವಾದಿಯವರ(ಸ) ಮಾತನ್ನು, ಅಲೀ(ರ) ಸ್ಮರಿಸಿದರು. ತಲ್ಹಾ(ರ) ಹಾಗೂ ಝುಬೈರ್(ರ)ರಿಗೆ ಆ ಮಾತುಗಳು ನೆನಪಾದವು ಹಾಗೂ ಅವರೀರ್ವರು ತಮ್ಮ ಕುದುರೆಗಳನ್ನು ಬೇರೆ ದಿಕ್ಕಿಗೆ ತಿರುಗಿಸಿ ಹೊರಟರು. ಇದನ್ನು ಕಂಡ ಓರ್ವ ಸಬಾಈ ಝುಬೈರ್(ರ)ರನ್ನು ಹಿಂಬಾಲಿಸಿದ. ದಾರಿ ಮಧ್ಯೆ ಝುಬೈರ್(ರ)ರು ನಮಾಝಿಗಾಗಿ ಒಂದೆಡೆ ತಂಗಿದರು. ಅವರು ಸಾಷ್ಟಾಂಗವೆರಗಿದ ಸಂದರ್ಭ ನೋಡಿ ಸಬಾಈ ಖಡ್ಗ ಬೀಸಿದ. ಆ ಸಹಾಬಿಯ ರುಂಡವು ಶರೀರದಿಂದ ಬೇರ್ಪಟ್ಟಿತು. ತಲೆ (ರುಂಡ) ಹಾಗೂ ಝುಬೈರ್(ರ)ರ ಖಡ್ಗದೊಂದಿಗೆ ಆ ಸಬಾಈ ಅಲೀ(ರ)ಯವರ ಮುಂದೆ ಹಾಜರಾದ. ಇದನ್ನು ಕಂಡು ಅಲೀ(ರ)ಯವರ ಕಣ್ಣುಗಳು ತೇವಗೊಂಡವು. ಆಗ ಅಲೀ(ರ) ಆತನನ್ನುದ್ದೇಶಿ, "ಪ್ರವಾದಿವರ್ಯರ(ಸ) ಮೇಲೆ ನಿರಂತರ ದಾಳಿ ನಡೆಸಿದ, ದಾಳಿಕೋರರ

ಕತ್ತುಗಳನ್ನು ಕೊಯ್ದ ಖಡ್ಗವಾಗಿದೆ ಇದು" ಎನ್ನುತ್ತಾ ಆ ಹಂತಕನಿಗೆ ನರಕದ ಎಚ್ಚರಿಕೆ ನೀಡಿದರು.

ತಲ್ಹಾ(ರ)ರನ್ನು ಕಂಡ ಮರ್‌ವಾನ್ ಒಂದು ವೇಳೆ ಇವರು ಇಂದು ಹೊರಟು ಬಿಟ್ಟರೆ ಬನೂ ಉಮಯ್ಯಾರಿಗೆ ರಂಗಸುಗಮವಾಗಲಾರದು (ಅಧಿಕಾರಕ್ಕೆ ಬರಲಾರರು) ಆತನು ಸಂದರ್ಭ ನೋಡಿ ವಿಷ ಲೇಪಿತ ಬಾಣ ಬಿಟ್ಟನು. ತಲ್ಹಾ(ರ)ರ ಮೊಣಕಾಲಿಗೆ ತಗುಲಿದ ಬಾಣದಿಂದ ವಿಷ ಹರಡಿ ಆ ಪ್ರಸಿದ್ಧ ಸಹಾಬಿಯೂ ಇಹಲೋಕ ತ್ಯಜಿಸಿದರು.

ಇನ್ನು ಉಳಿದವರು ಆಯಿಶಾ(ರ). ಅವರ(ರ) ಒಂಟೆಯು ಮೈದಾನದ ಮಧ್ಯೆ ಭಾಗದಲ್ಲಿ ನಿಂತುಕೊಂಡಿತ್ತು. ಸಬಾಈ ಹಾಗೂ ಬಂಡುಕೋರರು ಅವರೆಡೆಗೆ ನಡೆದರು. ಇದನ್ನು ಕಂಡ ಆಯಿಶಾ(ರ)ರ ಬೆಂಬಲಿಗರು ಅವರ(ರ) ರಕ್ಷಣೆಗಾಗಿ ತಮ್ಮ ಪ್ರಾಣಗಳನ್ನು ಅರ್ಪಿಸಲು ಸಿದ್ಧರಾದರು. ಹ. ಆಯಿಶಾ(ರ)ರ ಸೋದರಿ ಪುತ್ರ ಅಬ್ದುಲ್ಲಾ ಬಿನ್ ಝುಬೈರ್(ರ) ಆಯಿಶಾ(ರ)ರ ಒಂಟೆಯ ಮುಂದೆ ನಿಂತು ಅವರೆಡೆಗೆ ಧಾವಿಸುತ್ತಿದ್ದವರ ರುಂಡ-ಮುಂಡಗಳನ್ನು ಬೇರ್ಪಡಿಸ ತೊಡಗಿದರು.

ಹ. ಝುಬೈರ್(ರ)ರು ಆಯಿಶಾ(ರ)ರನ್ನುದ್ದೇಶಿಸಿ, "ಓ ನಮ್ಮ ಮಾತೆ! ನಮ್ಮ ಪ್ರಿಯ ಪ್ರವಾದಿಯ(ಸ) ಪತ್ನಿ, ನಾವು ನಿಮ್ಮ ಒಂಟೆಯ ರಕ್ಷಕರಾಗಿದ್ದೇವೆ. ನಮಗೆ ಮರಣವು ಜೇನಿಗಿಂತಲೂ ಅಧಿಕ ಪಟ್ಟು ಸಿಹಿಯಾಗಿದೆ" ಎಂದರು.

ನಾಲ್ದೆಸೆಯುಲ್ಲೂ ದೇಹಗಳ ಭಾಗಗಳು ತುಂಡು ತುಂಡಾಗಿ ಬೀಳತೊಡಗಿದವು. ಇದನ್ನು ಕಂಡ ಹ. ಅಲೀ(ರ)ರು ಜನ ಜಂಗುಳಿಯನ್ನು ಚೇರಿಕೊಂಡು ಆಯಿಶಾ(ರ)ರ ಒಂಟೆಯಿದ್ದಲ್ಲಿಗೆ ಬಂದು, ಅದನ್ನು ತನ್ನ ರಕ್ಷಣೆಯಲ್ಲಿರಿಸಿದರು. ಎಲ್ಲಿಯವರೆಗೆ ಇಲ್ಲಿ ಒಂಟೆಯು ನಿಂತಿರುತ್ತದೋ ಅಲ್ಲಿಯುವರೆಗೆ ಜೀವಗಳು ಉರುಳುತ್ತಿರುವುದು ಎಂದು ಕೆಲವರು ಅಂದುಕೊಂಡರು. ಅವರು ಮುನ್ನುಗ್ಗಿ ದಾಳಿ ಮಾಡಿ ಒಂಟೆಯ ಹಿಂದಿನ ಕಾಲಿನ ಖಂಡ ಸ್ನಾಯುವನ್ನು ಕತ್ತರಿಸಿಬಿಟ್ಟರು. ನೋವಿನಿಂದ ಒಂಟೆಯು ಧಕ್ಕನೆ ನೆಲಕುರುಳಿತು. ಅಲೀ(ರ)ಯವರ ಜೊತೆ ಅಮ್ಮಾರ್ ಬಿನ್ ಯಾಸಿರ್(ರ) ಹಾಗೂ ಮುಹಮ್ಮದ್ ಬಿನ್ ಅಬೂಬಕರ್(ರ)ರೂ ಇದ್ದರು. ಅವರೆಲ್ಲರೂ ಅಂಬಾರಿಯನ್ನು ಹಿಡಿದುಕೊಂಡರು. ಆಯಿಶಾ(ರ)ರಿಗೆ ಗಾಯವಾಗಿದೆಯೇ ಎಂದು ಪರೀಕ್ಷಿಸಲು ಮುಹಮ್ಮದ್ ಬಿನ್ ಅಬೂಬಕರ್(ರ)ರು ಅಂಬಾರಿಯ ಒಳಗೆ ತಮ್ಮ ಕೈಯಾಡಿಸಿದರು. ಅಂಬಾರಿಯ ಒಳಗೆ ಕೈಗಳನ್ನು ನೋಡಿದ ಆಯಿಶಾ(ರ)ರ, "ಯಾವ ಪಿಶಾಚಿಯ ಕೈಗಳಿವು" ಎಂದರು. ಆಗ, "ನಾನು

ನಿಮ್ಮ ಸಹೋದರ ಮುಹಮ್ಮದ್ ಬಿನ್ ಅಬೂಬಕರ್(ರ) ಸಹೋದರಿ, ಗಾಯಗಳಾಗಿಲ್ಲ ತಾನೇ" ಎಂದರು. ಅಷ್ಟರಲ್ಲೇ ಅಲೀ(ರ)ಯವರೂ ಅಲ್ಲಿಗೆ ತಲುಪಿದರು. ಅವರು(ರ) ಕ್ಷೇಮ ವಿಚಾರಿಸಿದಾಗ ಆಯಿಶಾ(ರ)ರು, "ಕ್ಷೇಮದಿಂದಿದ್ದೇನೆ?" ಎಂದರು.

ಆ ಬಳಿಕ ಅಲೀ(ರ)ಯವರು ಮುಹಮ್ಮದ್ ಬಿನ್ ಅಬೂಬಕರ್(ರ)ರ ಜೊತೆ ಆಯಿಶಾ(ರ)ರನ್ನು ಮಕ್ಕಾಕ್ಕೆ ಕಳುಹಿಸಿದವರು. ಜೊತೆಗೆ ರಕ್ಷಣೆಯ ನಿಟ್ಟಿನಲ್ಲಿ ಕೆಲವು ಜನರನ್ನೂ ಕಳುಹಿಸಿ ಕೊಡಲಾಯಿತು. ಹ. ಹಸನ್(ರ)ರು ದೂರದವರೆಗೆ ಅವರ ಜೊತೆ ನಡೆದರು. ಹ. ಆಯಿಶಾ(ರ)ರು ಮಕ್ಕಾದಿಂದ ಮದೀನಾಕ್ಕೆ ಬಂದರು. ಬಳಿಕ ಅಲ್ಲೇ ಉಳಿದುಕೊಂಡರು. ಅವರಿಗೆ ಹವ್ವಾಬ್‌ನ ನಾಯಿಗಳು ಬೊಗಳಿದ ಸನ್ನಿವೇಶ ನೆನಪಾದಾಗಲೆಲ್ಲಾ ಬಹಳ ವಿಷಾದ ವ್ಯಕ್ತಪಡಿಸುತ್ತಿದ್ದರು. ತಾನು ತಪ್ಪು ಮಾಡಿದ್ದೇನೆಂದು ಅವರಿಗೆ ಅರಿವಾಗಿತ್ತು. ಈ ತಪ್ಪಿಗಾಗಿ ಅವರು ಜೀವನ ಪರ್ಯಂತ ಪಶ್ಚಾತ್ತಾಪ ಪಟ್ಟರು. ಆಯಿಶಾ(ರ)ರು ಕುರ್‌ಆನ್ ಪಾರಾಯಣ ಮಾಡುತ್ತಿದ್ದ ಸಂದರ್ಭದಲ್ಲಿ ಈ ಸೂಕ್ತವನ್ನು ಓದಿದಾಗ, "ಓ ಪ್ರವಾದಿ ಪತ್ನಿಯರೇ! ನೀವು ನಿಮ್ಮ ಮನೆಗಳಲ್ಲೇ ಇದ್ದು ಬಿಡಿರಿ" ಅವರ(ರ) ಸೆರಗು ಒದ್ದೆಯಾಗುವಷ್ಟು ಅತ್ತು ಬಿಡುತ್ತಿದ್ದರು.

## ಹ. ಆಯಿಶಾ(ರ)ರ ನಿಧನ

ಈ ಘಟನೆಯ ಬಳಿಕ ಹ. ಆಯಿಶಾ(ರ)ರು ತನ್ನ ಜೀವನವನ್ನು ಬಹಳ ಮೌನವಾಗಿ ಕಳೆದರು. ಇದೇ ವೇಳೆಯಲ್ಲಿ ಕುರ್‌ಆನ್ ಹಾಗೂ ಹದೀಸ್‌ನ ಬೋಧನೆಯನ್ನು ಜನರಿಗೆ ತಿಳಿಸುವುದರಲ್ಲಿ ನಿರತರಾಗಿ ಬಿಡುತ್ತಿದ್ದರು. ಇದರ ವಿವರಣೆಯನ್ನು ಮುಂದೆ ನೀಡಲಾಗುವುದು.

ಅಲೀ(ರ)ಯವರು ನಾಲ್ಕು ವರ್ಷಗಳ ಕಾಲ ಖಲೀಫರಾಗಿ ಆಡಳಿತ ನಡೆಸಿದರು. ಬಳಿಕ ಹ. ಮುಆವಿಯಾ(ರ)ರು ಇಸ್ಲಾಮೀ ಆಡಳಿತದ ಚುಕ್ಕಾಣಿ ಹಿಡಿದರು. ಅವರು ಇಪ್ಪತ್ತು ವರ್ಷಗಳ ಕಾಲ ಆಡಳಿತ ನಡೆಸಿದರು. ಅವರ(ರ) ಅಧಿಕಾರಾವಧಿಯಲ್ಲೇ ಆಯಿಶಾ(ರ)ರು ನಿಧನರಾದರು. ನಿಧನದ ವೇಳೆ ಆಯಿಶಾ(ರ)ರಿಗೆ 66 ವರ್ಷ ವಯಸ್ಸಾಗಿತ್ತು. ಹಿ.ಶ. 58 ರಮಝಾನ್ ತಿಂಗಳಲ್ಲಿ ಆಯಿಶಾ(ರ)ರ ಆರೋಗ್ಯ ಹದಗೆಟ್ಟಿತು. ಅದೇ ತಿಂಗಳ 17ನೇ ತಾರೀಕಿನಂದು ಇಹಲೋಕ ತ್ಯಜಿಸಿದರು. ಹ. ಉಮ್ಮು ಸಲಮ(ರ)ರು ಹೇಳುತ್ತಾರೆ, "ಸ್ವರ್ಗವು ಅವರಿಗೆ ವಾಜಿಬ್ (ಕಡ್ಡಾಯ) ಆಗಿದೆ.ಏಕೆಂದರೆ ಅವರು ಪ್ರವಾದಿ(ಸ)ರ ಪ್ರಿಯ ಪತ್ನಿಯಾಗಿದ್ದಾರೆ."

ಆಯಿಶಾ(ರ)ರ ನಿಧನದ ವಾರ್ತೆ ಕೇಳಿದೊಡನೆ ಮದೀನಾದಲ್ಲಿ ಒಂದು

ದೊಡ್ಡ ಜನಸಮೂಹವೇ ಸೇರಿಕೊಂಡಿತು. ರಾತ್ರಿ ವೇಳೆಯಲ್ಲಿ ಜನಾಝ್‌ವನ ಕೊಂಡೊಯ್ಯಲಾಯಿತು. ರಾತ್ರಿ ವೇಳೆ ಮದೀನಾದಲ್ಲಿ ಅಷ್ಟು ಬೃಹತ ಸಮೂಹವನ್ನು ನಾವು ಇಷ್ಟರವರೆಗೆ ಕಂಡಿರಲಿಲ್ಲವೆಂಬುದು ಜನರ ಅನಿಸಿ ಅಬೂ ಹುರೈರಾ(ರ)ರು ಜನಾಝ ನಮಾಝ್ ನಿರ್ವಹಿಸಿದರು. ಜನ್ನತುಲ ಬಕೀಅ್‌ನಲ್ಲಿ ಇತರ ಪ್ರವಾದಿ ಪತ್ನಿಯರ ಗೋರಿಯ ಬಳಿಯಲ್ಲೆ ಆಯಿಶಾ(ರ)ರಿಗೂ ಗೋರಿ ತೋಡಲಾಯಿತು. ಆಯಿಶಾ(ರ) ಸಹೋದರ ಸಹೋದರಿಯ ಪುತ್ರರು ಗೋರಿಯನ್ನು ತೋಡಿದರು. ಮುಸ್ಲಿಮರು ಕಂಬ ತುಂಬಿದ ಕಣ್ಣುಗಳೊಂದಿಗೆ ತಮ್ಮ ತಾಯಿಯನ್ನು ದಫನ ಮಾಡಿದರು ತದನಂತರ ಜನರು ಮದೀನಾ ನಿವಾಸಿಗಳ ಬಳಿ, "ಹ. ಆಯಿಶಾ(ರ) ನಿಧನಕ್ಕೆ ಯಾರ್ಯಾರು ದುಃಖತಪ್ತರಾಗಿದ್ದೀರಿ" ಎಂದು ಕೇಳಿದರು. ಮದೀನ ನಿವಾಸಿಗಳು ಉತ್ತರಿಸಿದರು. "ಅವರು ಯಾರ್ಯಾರ ತಾಯಿಯಾಗಿದ್ದರೊ ಅವರೆಲ್ಲರೂ ದುಃಖತಪ್ತರಾಗಿದ್ದಾರೆ."

ಹ. ಆಯಿಶಾ(ರ)ರ ಬಳಿ ಒಂದು ಅರಣ್ಯವಿತ್ತು. ಅವರ ನಿಧನ ಬಳಿಕ ಆ ಅರಣ್ಯ ಆಯಿಶಾ(ರ)ರ ಸೋದರಿ ಅಸ್ಮಾ(ರ)ರಿಗೆ ದೊರಕಿತು ಅಸ್ಮಾ(ರ)ರು ಒಂದು ಲಕ್ಷ ದಿರ್ಹಮ್‌ಗೆ ಆ ಕಾಡನ್ನು ಮುಆವಿಯಾ(ರ)ರಿ ಮಾರಿದರು. ಬಳಿಕ ಆ ಎಲ್ಲಾ ಹಣವನ್ನು ದಾನ ಮಾಡಿ ಬಿಟ್ಟರು (ಇನ್ನಾಲಿಲ್ಲಾಹ್...)

**ಧಾರ್ಮಿಕ ಶಿಕ್ಷಣದ ಪ್ರಚಾರ:**

ಪ್ರವಾದಿವರ್ಯರು(ಸ) ತಮ್ಮ ವಿದಾಯ ಹಜ್ಜ್‌ನ ಸಂದರ್ಭದಲ್ಲಿ ಮಾಡಿ ವಿದಾಯ ಭಾಷಣದಲ್ಲಿ ಹಲವಾರು ಉಪದೇಶಗಳನ್ನು ನೀಡಿದ್ದರು. ಅದರಲ್ಲಿ ನೀಡಲಾದ ಒಂದು ಪ್ರಧಾನವಾದ ಉಪದೇಶ ಹೀಗಿದೆ– "ಈ ಸಂದರ್ಭದಲ್ಲಿ ಇಲ್ಲಿ ಹಾಜರಿರುವವರು, ಇಲ್ಲಿ ಹಾಜರಿಲ್ಲದ ಜನರಿಗೆ ಧರ್ಮದ ಜ್ಞಾನವನ್ನು ತಲುಪಿಸಬೇಕು. ಅಲ್ಲಾಹನ ಕಡೆಯಿಂದ ಅವತೀರ್ಣಗೊಂಡ ಕುರ್‌ಆನ್ ಹಾಗೂ ನಾನು ಹೇಳಿದ, ಕಲಿಸಿದ, ಮಾಡಿ ತೋರಿಸಿದ ಎಲ್ಲಾ ವಿಚಾರಗಳನ್ನು ಇತರರಿಗೆ ತಲುಪಿಸುವ ಜವಾಬ್ದಾರಿ ನಿಮ್ಮದಾಗಿದೆ."

ಈ ವಿದಾಯ ಭಾಷಣದ ಬಳಿಕ ಕೆಲವೇ ದಿನಗಳಲ್ಲಿ ಪ್ರವಾದಿವರ್ಯರು(ಸ) ನಿಧನರಾದರು. ಪ್ರವಾದಿಯವರ(ಸ) ನಿಧನದ ಬಳಿಕ ಸಹಾಬಿಗಳು ಎಲ್ಲಾ ಪ್ರದೇಶಗಳಲ್ಲಿ ಹಬ್ಬಿದರು. ಅವರು ಎಲ್ಲೆಲ್ಲಾ ತಲುಪಿದರೋ ಅಲ್ಲಲ್ಲಿ ಇಸ್ಲಾಮ್ ಧರ್ಮವನ್ನು ಉಪದೇಶಿಸಿ ತರಬೇತಿ ನೀಡಲು ಆರಂಭಿಸಿದರು. ಅವರ ಜೊತೆ ಅವರ ಪತ್ನಿಯರೂ ತೆರಳಿದರು. ಅವರು

ಇಲ್ಲಿ ಸ್ತ್ರೀಯರಲ್ಲಿ ಸಂದೇಶ ಪ್ರಚಾರ ಕಾರ್ಯವನ್ನು ಮಾಡಿದರು. ಪ್ರವಾದಿ ಪತ್ನಿಯರು ಮದೀನಾದಲ್ಲೇ ಉಳಿದುಕೊಂಡರು. ಆ ಪರಿಶುದ್ಧ ವ್ಯಕ್ತಿತ್ವಗಳ ಪೈಕಿ ಆಯಿಶಾ(ರ)ರು ಬಹಳ ಬುದ್ಧಿವಂತರು ಹಾಗೂ ಅವರ(ಸ) ಸ್ಮರಣಶಕ್ತಿಯು ಅತ್ಯದ್ಭುತವಾಗಿದ್ದುದರಿಂದ ಹಾಗೂ ಧರ್ಮಜ್ಞಾನವನ್ನು ಗಳಿಸುವ ಅತೀವವಾದ ಆಸಕ್ತಿಯಿಂದಾಗಿಯೇ ಅವರು ಶೀಘ್ರವಾಗಿ ಪ್ರವಾದಿವರ್ಯರ(ಸ) ತರಬೇತಿಯನ್ನು ಮೈಗೂಡಿಸಿಕೊಂಡರು. ಪ್ರವಾದಿವರ್ಯರ(ಸ) ಸಂದೇಶವು ಆಯಿಶಾ(ರ)ರ ಜ್ಞಾನವನ್ನು ವೃದ್ಧಿಸಿತು. ಹ. ಆಯಿಶಾ(ರ)ರು ಕುರ್‌ಆನ್ ಹಾಗೂ ಹದೀಸ್‌ನ ಜ್ಞಾನದಲ್ಲಿ ಸೂರ್ಯ-ಚಂದ್ರರಂತೆ ಪ್ರಕಾಶಿಸಿದರು. ದೊಡ್ಡ ದೊಡ್ಡ ಸಹಾಬಿಗಳಿಗೆ(ಸ) ಅವರ(ರ) ಮೇಲೆ ವಿಶ್ವಾಸವಿತ್ತು. ಇಸ್ಲಾಮಿನ ಪ್ರಥಮ ಖಲೀಫರಾದ ಹ. ಅಬೂಬಕರ್(ರ)ರೂ ಆಯಿಶಾ(ರ)ರ ಬಳಿ ವಿಷಯಗಳನ್ನು, ಸಲಹೆಗಳನ್ನು ಕೇಳುತ್ತಿದ್ದರು. ಹ. ಆಯಿಶಾ(ರ)ರ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಿದ ಎಲ್ಲಾ ಸಹಾಬಿಗಳ ಅನಿಸಿಕೆಗಳನ್ನು ಇಲ್ಲಿ ಉಲ್ಲೇಖಿಸಲು ಸಾಧ್ಯವಿಲ್ಲ. ಕೆಲವೊಂದು ಹಿರಿಯರ ಮಾತುಗಳನ್ನು ಉಲ್ಲೇಖಿಸುತ್ತೇವೆ. ಅದರಲ್ಲಿ ಕೆಲವು ಸಹಾಬಿಗಳೂ ಸೇರಿದ್ದಾರೆ. ಪ್ರಿಯ ಪ್ರವಾದಿಯವರ(ಸ) ಆಪ್ತ ಶಿಷ್ಯರೂ ಹಾಗೂ ಕೆಲವು ಇಮಾಮರೂ ಇದ್ದಾರೆ.

✦ ಹ. ಅಬೂ ಮೂಸಾ ಅಶ್‌ಅರಿ(ರ) ಹೇಳುತ್ತಾರೆ, "ನಾವು ಆಯಿಶಾ(ರ)ರ ಬಳಿ ಕೇಳಿ, ನಮಗೆ ಅವರಿಂದ ಪೂರ್ಣ ಪರಿಹಾರ ಸಿಗದೇ ಇದ್ದಂತಹ ಒಂದೇ ಒಂದು ಸಂಕಷ್ಟವೂ ನಮಗೆ ಅಂದರೆ ಪ್ರವಾದಿವರ್ಯರ(ಸ) ಸಹಾಬಿಗಳಿಗೆ ಎಂದಿಗೂ ಎದುರಾಗಲಿಲ್ಲ.

ಅಂದರೆ ನಮಗೆ ತಿಳಿದಿರದಂತಹ ಅತ್ಯಂತ ಕ್ಲಿಷ್ಟಕರ ಪ್ರಶ್ನೆಗಳನ್ನು ಕೇಳಿದರೂ ಅವರು(ರ) ಅತ್ಯುತ್ತಮ ರೀತಿಯಲ್ಲಿ ಅರ್ಥೈಸುತ್ತಿದ್ದರು".

✦ ಪ್ರಸಿದ್ಧ ಹಿರಿಯ ತಾಬಿಈಯಾಗಿದ್ದ ಇಮಾಮ್ ಝುಹ್ರೀ(ರ) ಪ್ರಸಿದ್ಧ ಸಹಾಬಿಗಳಿಂದ ಧರ್ಮದ ಜ್ಞಾನವನ್ನು ಗಳಿಸಿದ್ದರು. ಹ. ಆಯಿಶಾ(ರ)ರಿಂದಲೂ ಶಿಕ್ಷಣ ಪಡೆದರು.

ಇಮಾಮ್ ಝುಹ್ರೀ(ರ) ಹೇಳುತ್ತಾರೆ, "ಹ. ಆಯಿಶಾ(ರ)ರು ಎಲ್ಲಾ ಜನರಲ್ಲಿ ಪ್ರಸಿದ್ಧ ವಿದ್ವಾಂಸರಾಗಿದ್ದರು. ದೊಡ್ಡ ದೊಡ್ಡ ಸಹಾಬಿಗಳೂ ಅವರಲ್ಲಿ ವಿಷಯಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು."

ಇಮಾಮ್ ಝುಹ್ರೀ(ರ) ಹೇಳುತ್ತಾರೆ, "ಒಂದು ವೇಳೆ ಎಲ್ಲಾ ಪುರುಷರ ಹಾಗೂ ಸತ್ಯವಿಶ್ವಾಸಿ ಮಾತೆಯರ ಜ್ಞಾನವನ್ನು ಒಂದೆಡೆ ಸೇರಿಸಿದರೆ, ಹ. ಆಯಿಶಾ(ರ)ರ ಜ್ಞಾನವು ಎಲ್ಲರಿಗಿಂತಲೂ ಅಧಿಕವಾಗಿದೆ."

✦ ಹ. ಆಯಿಶಾ(ರ)ರ ಶಿಷ್ಯರಲ್ಲೋರ್ವರಾಗಿದ್ದ ಹ. ಮಸ್ರೂಕ್ ತಾಬಿಈ(ರ) ಹೇಳುತ್ತಾರೆ, "ಅಲ್ಲಾಹನಾಣೆ, ದೊಡ್ಡ-ದೊಡ್ಡ ಸಹಾಬಿಗಳೂ ಹ. ಆಯಿಶಾ(ರ)ರ ಬಳಿ ಕಡ್ಡಾಯ ಕರ್ಮಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಕೇಳಿ ಪರಿಹಾರ ಕಂಡುಕೊಳ್ಳುತ್ತಿದ್ದುದನ್ನು ನಾನು ಕಂಡಿದ್ದೇನೆ."

✦ ಹ. ಆಯಿಶಾ(ರ)ರ ಸೋದರಿ ಪುತ್ರರಾಗಿದ್ದ ಅರ್‌ವಾ ಬಿನ್ ಝುಬೈರ್(ರ) ಅಂದಿನ ಪ್ರಸಿದ್ಧ ವಿದ್ವಾಂಸರಲ್ಲೋರ್ವರಾಗಿದ್ದರು. ಅರ್‌ವಾ ಬಿನ್ ಝುಬೈರ್(ರ) ಹೇಳುತ್ತಾರೆ, "ಧರ್ಮಸಮ್ಮತ-ಧರ್ಮ ಬಾಹಿರ ವಿಚಾರದಲ್ಲಿ, ಜ್ಞಾನ-ಕವಿತೆಯಲ್ಲಿ ಹಾಗೂ ವೈದ್ಯಕೀಯದಲ್ಲಿ ಸತ್ಯವಿಶ್ವಾಸಿಗಳ ಮಾತೆ ಹ. ಆಯಿಶಾ(ರ)ರಿಗಿಂತ ಉನ್ನತರಾದವರನ್ನು ನಾನು ಕಂಡಿಲ್ಲ."

✦ ಹ. ಅತಾ ಬಿನ್ ಅಬೀ ಅರ್ರಬಾಹ್ ತಾಬಿಈ(ರ) ಹಲವಾರು ಸಹಾಬಿಗಳಿಂದ ಧರ್ಮದ ಜ್ಞಾನವನ್ನು ಪಡೆದವರು. ಅವರು ಹೇಳುತ್ತಾರೆ, "ಹ. ಆಯಿಶಾ(ರ)ರು ಕುರ್‌ಆನಿನಲ್ಲಿರುವ ಧರ್ಮ ವಿಧಿಗಳನ್ನು ತಿಳಿಸುವುದರಲ್ಲಿ ಎಲ್ಲರಿಗಿಂತಲೂ ದೊಡ್ಡ ವಿದ್ವಾಂಸರಾಗಿದ್ದರು ಹಾಗೂ ಜನರಲ್ಲಿ ಅತ್ಯುತ್ತಮ ಸಲಹೆ ನೀಡುವವರಾಗಿದ್ದರು.

✦ ಹ. ಅಬ್ದುರ್ರಹ್ಮಾನ್ ಬಿನ್ ಔಫ್(ರ)ರ ಪುತ್ರ ಅಬೂ ಸಲಮ(ರ) ಪ್ರಸಿದ್ಧ ತಾಬಿಈಯಾಗಿದ್ದರು. ತನ್ನ ತಂದೆ ಹಾಗೂ ಇತರ ಸಹಾಬಿಗಳಿಂದ ಧಾರ್ಮಿಕ ಶಿಕ್ಷಣ ಗಳಿಸಿದ್ದರು. ಅವರು ಆಯಿಶಾ(ರ)ರ ಶಿಷ್ಯರಲ್ಲೋರ್ವರಾಗಿದ್ದರು. ಅವರು ಹೇಳುತ್ತಾರೆ, "ಪ್ರವಾದಿವರ್ಯರ(ಸ) ವಚನಗಳನ್ನು ತಿಳಿದಿರುವ ಹಾಗೂ ಅತ್ಯುತ್ತಮ ಸಲಹೆ ನೀಡುವವರಲ್ಲಿ ಹ. ಆಯಿಶಾ(ರ)ರಿಗಿಂತ ಅತ್ಯುತ್ತಮರನ್ನು ನಾನು ಕಂಡಿಲ್ಲ."

ಅಬೂ ಸಲಮ(ರ) ಹೇಳುತ್ತಾರೆ, "ಕುರ್‌ಆನಿನ ಸೂಕ್ತಗಳು ಯಾವ ಸಂದರ್ಭದಲ್ಲಿ ಅವತೀರ್ಣಗೊಂಡವು. ಅಲ್ಲಾಹನು ಹಾಗೂ ಆತನ ಸಂದೇಶವಾಹಕರು(ಸ) ಕಡ್ಡಾಯಗೊಳಿಸಿದ ಕರ್ಮಗಳು, ಕುರ್‌ಆನ್ ಹಾಗೂ ಹದೀಸ್‌ನ ವಿಚಾರಗಳು ಇವೆಲ್ಲವುಗಳನ್ನೂ ತಿಳಿದವರಲ್ಲಿ ಹ. ಆಯಿಶಾ(ರ)ರಿಗಿಂತ ಉನ್ನತರಾದವರನ್ನು ನಾನು ಕಂಡಿಲ್ಲ. ಕೊನೆಯದಾಗಿ ನಾನು ಹ. ಆಯಿಶಾ(ರ)ರ ಕುರಿತ ಪ್ರವಾದಿವರ್ಯರ(ಸ) ಅಭಿಪ್ರಾಯವನ್ನು ತಿಳಿಸುತ್ತೇನೆ, ಪ್ರವಾದಿವರ್ಯರು(ಸ) ಹೇಳಿರುವರು, "ಧರ್ಮದ ಒಂದು ಭಾಗವನ್ನು ಆ ಶ್ವೇತ ವರ್ಣದ ಸ್ತ್ರೀಯಿಂದ ಗಳಿಸಿರಿ."

## ಹ. ಆಯಿಶಾ(ರ)ರ ಬೋಧನೆಯ ಶೈಲಿ

**ಪ್ರಶ್ನೆಗೆ ಪ್ರಶ್ನೆಯಿಂದ ಉತ್ತರ:**

ಒಂದು ಉದಾಹರಣೆಯಿಂದ ಇದನ್ನು ಅರಿಯಿರಿ. ಓರ್ವ ವಿದ್ಯಾರ್ಥಿಯು ಶಿಕ್ಷಕನಲ್ಲಿ ಪೂರ್ವ–ಪಶ್ಚಿಮ ದಿಕ್ಕುಗಳನ್ನು ತೋರಿಸಿ ಕೊಡುವಂತೆ ಹೇಳುತ್ತಾನೆ. ವಿದ್ಯಾರ್ಥಿಯ ಪ್ರಶ್ನೆಗೆ ಉತ್ತರಿಸುವ ಒಂದು ರೀತಿ, ಸ್ವತಃ ಶಿಕ್ಷಕರು ಸಂಜ್ಞೆಯ ಮೂಲಕ "ಇದು ಪೂರ್ವ ದಿಕ್ಕು ಇದು ಪಶ್ಚಿಮ ದಿಕ್ಕು" ಎಂದು ತೋರಿಸುವುದು. ಅಥವಾ ಎರಡನೇ ರೀತಿ ಎಂದರೆ ಶಿಕ್ಷಕರು ವಿದ್ಯಾರ್ಥಿಗಳಲ್ಲಿ ಮರು ಪ್ರಶ್ನಿಸಿ ಸ್ವತಃ ವಿದ್ಯಾರ್ಥಿ ತನ್ನ ಉತ್ತರವನ್ನು ಹುಡುಕಲು ಚಿಂತನೆ ನಡೆಸುವುದಾಗಿದೆ. ಇದರಿಂದ ಆ ವಿದ್ಯಾರ್ಥಿಗೆ ತನ್ನಿಂತಾನೇ ಉತ್ತರ ಕಂಡುಕೊಳ್ಳಬಹುದು ಅಥವಾ ಆತ ಉತ್ತರವನ್ನು ಆಲಿಸುವ ಕಡೆ ಸಂಪೂರ್ಣ ಗಮನ ಹರಿಸಬಹುದು. ಅಂದರೆ ಶಿಕ್ಷಕರು, "ನೀನು ಮುಂಜಾನೆ ಸೂರ್ಯ ಉದಯಿಸಿದುದನ್ನು ನೋಡಲಿಲ್ಲವೇ?" ಆ ದಿಕ್ಕನ್ನು ಪೂರ್ವ ದಿಕ್ಕು ಎನ್ನುತ್ತಾರೆ. ಅದೇ ರೀತಿ ಸೂರ್ಯ ಮುಳುಗುವ ದಿಕ್ಕನ್ನು ಪಶ್ಚಿಮ ದಿಕ್ಕು ಎನ್ನುತ್ತಾರೆ ಎಂದು ಹೇಳುವರು.

ಈ ರೀತಿ ವಿದ್ಯಾರ್ಥಿಯು ಪೂರ್ವ ಪಶ್ಚಿಮ ದಿಕ್ಕುಗಳನ್ನು ತಿಳಿಯುತ್ತಾನೆ.

ಹ. ಆಯಿಶಾ(ರ)ರವರು ಆರಂಭದಲ್ಲಿ ಇದೇ ರೀತಿಯಲ್ಲಿ ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದರು. ಪ್ರಶ್ನೆಗಳಲ್ಲಿ ಪ್ರಶ್ನೆಗಳನ್ನು ಹುಟ್ಟು ಹಾಕಿ ಬಳಿಕ ಉತ್ತರಗಳನ್ನು ಹೇಳುತ್ತಿದ್ದರು. ಉದಾಹರಣೆಯನ್ನು ನೋಡೋಣ:

"ಒಮ್ಮೆ ಆಯಿಶಾ(ರ)ರ ಶಿಷ್ಯರು ಪ್ರವಾದಿವರ್ಯರ(ಸ) ಚಾರಿತ್ರ್ಯದ ಕುರಿತು ಹೇಳುವಂತೆ ಕೇಳಿಕೊಂಡರು? ಇದನ್ನು ಕೇಳಿದೊಡನೆ ಸ್ವತಃ ಆಯಿಶಾ(ರ)ರು ಮರು ಪ್ರಶ್ನೆ ಹಾಕಿದರು, "ನೀವು ಕುರ್‌ಆನ್ ಓದುವುದಿಲ್ಲವೇ?" ಚಾರಿತ್ರ್ಯದ ಬಗ್ಗೆ ಕುರ್‌ಆನಿನಲ್ಲಿರುವ ಎಲ್ಲಾ ಆದೇಶಗಳ ಕುರಿತು ಪ್ರಶ್ನೆ ಕೇಳಿದವರ ಮನಸ್ಸಿನಲ್ಲಿ ಬಂದಿರಬಹುದೆಂದು ನಮಗೆ ಅಂದಾಜಿಸಬಹುದಾಗಿದೆ. ಈ ರೀತಿ ಆಯಿಶಾ(ರ)ರು ಎಲ್ಲರ ಗಮನವನ್ನು ಕುರ್‌ಆನಿನೆಡೆಗೆ ಸೆಳೆದು, ಬಳಿಕ ಹೇಳಿದರು, "ಪ್ರವಾದಿವರ್ಯರ(ಸ) ಚಾರಿತ್ರ್ಯವು ಕುರ್‌ಆನಿನ ಆದೇಶಗಳಿಗನುಗುಣವಾಗಿತ್ತು."

ಓರ್ವ ಶಿಕ್ಷಕನು ವಿದ್ಯಾರ್ಥಿಗಳಿಗೆ ಈ ರೀತಿ ಬೋಧಿಸಿದರೆ, ಒಂದೆಡೆ ಪ್ರವಾದಿವರ್ಯರ(ಸ) ಚಾರಿತ್ರ್ಯವು ಹೊರಹೊಮ್ಮಿ ಬರುತ್ತದೆ, ಇನ್ನೊಂದೆಡೆ ಕುರ್‌ಆನಿನೊಂದಿಗಿನ ಆಸಕ್ತಿಯು ಬೆಳೆಯುತ್ತದೆ ಹಾಗೂ ವಿದ್ಯಾರ್ಥಿಗಳೂ ಇದನ್ನು ಅವಲಂಬಿಸಲು ಪ್ರಯತ್ನಿಸುತ್ತಾರೆ.

ಇದೇ ರೀತಿಯ ಇನ್ನೊಂದು ಘಟನೆಯನ್ನು ನೋಡೋಣ. ಶಿಷ್ಯರು, "ಅಮ್ಮಾ! ರಾತ್ರಿ ವೇಳೆ ಪ್ರವಾದಿವರ್ಯರ(ಸ) ಆರಾಧನೆಯ ಕ್ರಮ ಹೇಗಿತ್ತು?" ಎಂದು ಪ್ರಶ್ನಿಸಿದರು. ಆಗ ಆಯಿಶಾ(ರ)ರು, "ನೀವು ಮುಝ್ಝಮ್ಮಿಲ್ ಅಧ್ಯಾಯ ಓದಲಿಲ್ಲವೇ?" ಎಂದವವರು ಮರು ಪ್ರಶ್ನೆ ಹಾಕಿದರು.

ಶಿಷ್ಯರು ಪ್ರವಾದಿವರ್ಯರ(ಸ) ಚಾರಿತ್ರ್ಯದ ಬಗ್ಗೆ ಪ್ರಶ್ನಿಸಿದ್ದಾಗ ಆಯಿಶಾ(ರ)ರು ಕುರ್‌ಆನಿನಂತೆ ಎಂದುತ್ತರಿಸಿದ್ದರು. ಈ ಬಾರಿ ಕೇವಲ ಸೂರ ಮುಝ್ಝಮಿಲ್‌ನ ಕಡೆ ಬೊಟ್ಟು ಮಾಡಿದ್ದರು. ಈಗ ಶಿಷ್ಯರು ಸೂರಃ ಮುಝ್ಝಮ್ಮಿಲ್ ಹಾಗೂ ಅದರ ವ್ಯಾಖ್ಯಾನವನ್ನು ಓದಿ ಪ್ರವಾದಿವರ್ಯರ(ಸ) ಆರಾಧನೆಗಳ ಬಗ್ಗೆ ಅರಿತುಕೊಳ್ಳಬಹುದಾಗಿತ್ತು. ಇದರಿಂದ ಅಲ್ಲಾಹನು ತನ್ನ ಪ್ರವಾದಿಗೆ(ಸ) ರಾತ್ರಿ ಆರಾಧನೆಯ ಕುರಿತು ನೀಡಿರುವ ಆದೇಶಗಳನ್ನು ತಿಳಿಯಬಹುದಾಗಿದೆ.

ಇನ್ನೊಂದು ಸ್ವಾರಸ್ಯಕರ ಪ್ರಶ್ನೆ ಹಾಗೂ ಉತ್ತರ–

ಕೆಲವು ಶಿಷ್ಯರು ಕೇಳಿದರು, "ಓ ನಮ್ಮ ಮಾತೆ! ಹ. ಅಬ್ದುಲ್ಲಾ ಬಿನ್ ಉಮರ್(ರ), ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹಾಗೂ ಇನ್ನು ಕೆಲವು ಸಹಾಬಿಗಳ ವರದಿ ಪ್ರಕಾರ ಪ್ರವಾದಿವರ್ಯರು(ಸ) ಹೇಳಿದ್ದಾರೆ, "ಮೃತ ವ್ಯಕ್ತಿಯ ಮೇಲೆ ಆತನ ಮನೆಯವರು ಅಳುವುದರಿಂದ ಮೃತ ವ್ಯಕ್ತಿಯು ಶಿಕ್ಷೆಗೆ ಗುರಿಯಾಗುತ್ತಾನೆ." ಹ. ಆಯಿಶಾ(ರ)ರು ಮೊದಲು "ಮತ್ತು ಯಾರೂ ಯಾರ ಪಾಪಗಳ ಹೊರೆಯನ್ನು ಹೊರಲಾರರು" ಎಂಬ ಕುರ್‌ಆನಿನ ಸೂಕ್ತವನ್ನು ಪಠಿಸಿ, ಬಳಿಕ ಈ ರೀತಿ ಹೇಳಿದರು, "ಮೃತ ವ್ಯಕ್ತಿಯ ಮೇಲೆ ಆತನ ಜವಾಬ್ದಾರಿ ಏನು?" ಮೊದಲು ಕುರ್‌ಆನಿನ ಸೂಕ್ತ ಬಳಿಕ ಆಯಿಶಾ(ರ)ರ ಪ್ರಶ್ನೆಯು ಎಲ್ಲಾ ಶಿಷ್ಯರಿಗೆ ಒಂದು ಆಸಕ್ತಿದಾಯಕ ವಿಚಾರವಾಗಿ ಮಾರ್ಪಟ್ಟಿತು. ಪ್ರಶ್ನೆ ಕೇಳಿದವರಲ್ಲಿ ಅತ್ಯುತ್ತಮ ಸ್ಥಾನಮಾನದ ಸಹಾಬಿಗಳೂ ಇದ್ದರು. ಈಗ ಈ ವಿಚಾರ ಸ್ಪಷ್ಟವಾಗುವುದು ಹೇಗೆ? ಎಂದು ಪರಸ್ಪರ ಮಾತಾಡಿಕೊಂಡರು. ಆಗ ಆಯಿಶಾ(ರ)ರು ಹೇಳಿದರು, "ವಾಸ್ತವ ಘಟನೆ ಈ ರೀತಿ ಇದೆ. ಒಮ್ಮೆ ಪ್ರವಾದಿವರ್ಯರು(ಸ) ರಸ್ತೆಯಲ್ಲಿ ನಡೆದುಕೊಂಡು ಹೋಗುತ್ತಿದ್ದಾಗ ಓರ್ವ ಯಹೂದಿ ಮಹಿಳೆಯ ಜನಾಝ ಎದುರಾಯಿತು. ಆ ಮೃತ ಮಹಿಳೆಯ ಸಂಬಂಧಿಕರ ರೋದನವು ಮುಗಿಲುಮುಟ್ಟಿತ್ತು. ಮೈ ಪರಚಿಕೊಂಡು, ತಲೆ ಬಡಿದುಕೊಂಡು ಬೊಬ್ಬೆ ಹಾಕುತ್ತಿದ್ದರು. ಇದನ್ನು ಕಂಡ ಪ್ರವಾದಿವರ್ಯರು(ಸ), "ಇವರು ಅಳುತ್ತಿದ್ದಾರೆ ಹಾಗೂ ಆ ಮೃತ ಮಹಿಳೆಯು ಶಿಕ್ಷೆ ಅನುಭವಿಸುತ್ತಿದ್ದಾಳೆ" ಎಂದರು. ಮುಂದುವರಿಯುತ್ತಾ,

'ಪ್ರತಿಯೊರ್ವ ವ್ಯಕ್ತಿಯು ತನ್ನ ಕರ್ಮಗಳಿಗೆ ಸ್ವತಃ ತಾನೇ ಜವಾಬ್ದಾರನಾಗಿದ್ದಾನೆ" ಎಂದರು. ಆ ಮಹಿಳೆಯು ಮಾಡಿದ ಶಿರ್ಕ್‌ನಂತಹ ಮಹಾಪಾಪದಿಂದಾಗಿ ಆಕೆ ಶಿಕ್ಷೆಗೆ ಗುರಿಯಾದಳು ಎಂಬ ವಾಸ್ತವಿಕತೆ ಶಿಷ್ಯರಿಗೆ ಅರಿವಾಯಿತು.

ಒಮ್ಮೆ ಕೆಲವು ಶಿಷ್ಯರು ಈ ರೀತಿ ಕೇಳಿದರು, "ಓ ಸತ್ಯವಿಶ್ವಾಸಿಗಳ ಮಾತೆ! ಹ. ಅಬೂಹುರೈರಾ(ರ)ರ ವರದಿ ಪ್ರಕಾರ, ನಮಾಝ್ ನಿರ್ವಹಿಸುವ ಸಂದರ್ಭದಲ್ಲಿ ಪುರುಷನ ಮುಂಭಾಗದಿಂದ ಸ್ತ್ರೀ, ಕತ್ತೆ ಅಥವಾ ನಾಯಿ ಹಾದು ಹೋದರೆ ಪುರುಷನ ನಮಾಝ್ ಭಂಗವಾಗುತ್ತದೆ." ಇದನ್ನು ಕೇಳಿದ ಆಯಿಶಾ(ರ)ರು, "ಅಬೂ ಹುರೈರಾ(ರ)ರು ಸ್ತ್ರೀಯರನ್ನು ಕತ್ತೆ-ನಾಯಿಗಳಿಗೆ ಸಮಾನಗೊಳಿಸಿಬಿಟ್ಟರೇ?" ಎನ್ನುತ್ತಾ ಶಿಷ್ಯರನ್ನುದ್ದೇಶಿಸಿ, 'ಪ್ರವಾದಿವರ್ಯರು(ಸ) ನನ್ನ ಮನೆಯಲ್ಲಿ ನಮಾಝ್ ನಿರ್ವಹಿಸುತ್ತಿದ್ದರು. ನನ್ನ ಮನೆ ಬಹಳ ಸಣ್ಣದಾಗಿತ್ತು. ನಾನು ಮಲಗಿರುವ ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ನಮಾಝ್‌ನಲ್ಲಿ ಸಾಷ್ಟಾಂಗವೆರಗುವಾಗ ಕೈಯಾಡಿಸುತ್ತಿದ್ದರು. ನಾನು ಕಾಲುಗಳನ್ನು ಮಡಚಿಕೊಳ್ಳುತ್ತಿದ್ದೆ. ಅವರು ನಿಂತುಕೊಂಡಾಗ ನಾನು ಪುನಃ ಕಾಲುಗಳನ್ನು ಹರಡುತ್ತಿದ್ದೆ. ಕೆಲವೊಮ್ಮೆ ನಾನು ಮಗುಚಿ ಅವರ(ಸ) ಮುಂದಿನಿಂದಲೇ ಹಾದು ಹೋಗಿ ಬಿಡುತ್ತಿದ್ದೆ" ಎಂದರು. ಇವೆಲ್ಲವನ್ನೂ ಹ. ಆಯಿಶಾ(ರ)ರು ಕುರ್‌ಆನ್ ಹಾಗೂ ಪ್ರವಾದಿವರ್ಯರಿಂದ(ಸ) ಕಲಿತ ವಿಚಾರಗಳಾಗಿವೆ. ಕುರ್‌ಆನಿನಲ್ಲಿ ಹಲವಾರು ಕಡೆಗಳಲ್ಲಿ, "ನೀವು ನೋಡಲಿಲ್ಲವೇ" ಎಂದು ಉಲ್ಲೇಖಿಸಲಾಗಿದೆ.

ಪ್ರವಾದಿವರ್ಯರ(ಸ) ಸಾನಿಧ್ಯದಲ್ಲಿ ಒಂದು ಸ್ವಾರಸ್ಯಕರ ಘಟನೆ-

ಒಮ್ಮೆ ಓರ್ವ ವ್ಯಕ್ತಿ ಒಂಟೆ ಮೇಲೆ ಸವಾರಿ ನಡೆಸುತ್ತಾ ಬಂದು ಮಸ್ಜಿದೆ ನಬವಿಯ ಮುಂದೆ ಒಂಟೆಯಿಂದ ಕೆಳಗಿಳಿದನು. ಒಂಟೆಯನ್ನು ಕಟ್ಟದೆ ಹಾಗೇ ಬಿಟ್ಟು ಪ್ರವಾದಿವರ್ಯರ(ಸ) ಬಳಿ ಬಂದನು. "ಓ ಪ್ರವಾದಿಗಳೇ(ಸ)! ತವಕ್ಕಲ್ ಎಂದರೇನು?" ಎಂದು ಪ್ರಶ್ನಿಸಿದನು. ಆಗ ಪ್ರವಾದಿವರ್ಯರು(ಸ), "ಮೊದಲು ಒಂಟೆಯನ್ನು ಯಾವುದಾದರೂ ವಸ್ತುವಿನಿಂದ ಕಟ್ಟಿ ಬಳಿಕ ಬಂದು ಪ್ರಶ್ನಿಸಿ" ಎಂದರು. ಎಷ್ಟೊಂದು ಮನಮೋಹಕ ಸಂಜ್ಞೆಯಾಗಿದೆ. ಆ ಸಂಜ್ಞೆಯ ಒಳಗಡೆಯೇ ಉತ್ತರವಿದೆ. ಅಂದರೆ ಮೊದಲು ಅಲ್ಲಾಹನು ನೀಡಿರುವ ವಿವೇಚನಾ ಶಕ್ತಿಯನ್ನು ಸದುಪಯೋಗ ಪಡಿಸಿಕೊಂಡು ಅಲ್ಲಾಹನ ಮೇಲೆ ಭರವಸೆ ಇಡುವುದಾಗಿದೆ. ಹ. ಆಯಿಶಾ(ರ)ರು ಪ್ರವಾದಿವರ್ಯರ(ಸ) ತರಬೇತಿಯ ಈ ವಿಶಿಷ್ಟ

ವಿಧಾನವನ್ನು ಕಂಡು ಅದನ್ನು ಅನುಸರಿಸಲು ಪ್ರಯತ್ನಿಸುತ್ತಿದ್ದರು. ಬಳಿಕ ಆಯಿಶಾ(ರ)ರೂ ಇದೇ ವಿಧಾನವನ್ನು ಬಳಸುತ್ತಿದ್ದರು.

**ವಿಷಯದ ಆಳವನ್ನು ಅರಿಯುವುದು– ಅರ್ಥೈಸುವುದು:**

ವಿಷಯದ ಆಳವನ್ನು, ಅದರ ವಾಸ್ತವಿಕತೆಯನ್ನು ಅರಿಯುವುದು. ಹ. ಆಯಿಶಾ(ರ)ರು ತಮ್ಮ ಶಿಷ್ಯರಿಗೆ ಒಂದು ವಿಚಾರವನ್ನು ಸಂಪೂರ್ಣವಾಗಿ ಅರ್ಥೈಸಲು ಅದರ ಸಂದರ್ಭ–ಸಮಯವನ್ನು ತಿಳಿಸುತ್ತಿದ್ದರು. ಕುರ್‌ಆನಿನ ಈ ಸೂಕ್ತ ಯಾವ ಸಂದರ್ಭದಲ್ಲಿ, ಎಲ್ಲಿ ಅವತೀರ್ಣಗೊಂಡಿತು, ಪ್ರವಾದಿವರ್ಯರು(ಸ) ಈ ವಿಷಯವನ್ನು ಇಂತಿಂತಹ ಸಂದರ್ಭದಲ್ಲಿ ಇಂತಿಂತಹ ಕಡೆ ಹೇಳಿದ್ದರೆಂದು ತಿಳಿಸುತ್ತಿದ್ದರು. ಬಳಿಕ ಅಂದು ಪ್ರವಾದಿವರ್ಯರು(ಸ) ಈ ವಿಚಾರ ಹೇಳಿದಾಗ, ಅವರ ಬಳಿಯಿದ್ದ ಸಹಾಬಿವರ್ಯರನ್ನು(ರ) ಈ ಬಗ್ಗೆ ವಿಚಾರಿಸಿರಿ ಎಂದು ಆದೇಶಿಸಿದ್ದರು. ತದನಂತರ ಆ ವಿಷಯದ ತಾತ್ಪರ್ಯವನ್ನು ಹೇಳುತ್ತಿದ್ದರು. ಈ ಸಂಪೂರ್ಣ ವಿಧಾನವನ್ನು ಆಯಿಶಾ(ರ)ರು ಪ್ರವಾದಿವರ್ಯರಿಂದ(ಸ) ಕಲಿತಿದ್ದರು ಹಾಗೂ ಇದೇ ವಿಧಾನವನ್ನು ತನ್ನ ಬೋಧನೆಯಲ್ಲಿ ಅಳವಡಿಸಿ ಅದನ್ನು ಅನುಸರಿಸುವಂತೆ ಶಿಷ್ಯರಿಗೆ ಸೂಚಿಸುತ್ತಿದ್ದರು. ಈಗ ಪ್ರತಿಯೊಬ್ಬರ ಒಂದೆರಡು ಘಟನೆಗಳನ್ನು ನೋಡೋಣ.

✦ ಆಯಿಶಾ(ರ) ಹೇಳುತ್ತಾರೆ,

ಈ ಸೂಕ್ತವು ಅವತೀರ್ಣಗೊಂಡ ಸಂದರ್ಭದಲ್ಲಿ ನಾನು ಮಕ್ಕಾದಲ್ಲಿ ನನ್ನ ತಂದೆಯ ಮನೆಯಲ್ಲಿದ್ದೆ ಹಾಗೂ ಸಣ್ಣ ಪ್ರಾಯದವಳಾಗಿದ್ದೆ.

**"ಓ ಸತ್ಯವಿಶ್ವಾಸಿಗಳೇ, ನೀವು ಬಲಾತ್ಕಾರವಾಗಿ ಸ್ತ್ರೀಯರ ವಾರೀಸುದಾರರಾಗುವುದು ನಿಮಗೆ ಧರ್ಮಬದ್ಧವಲ್ಲ. ಅವರನ್ನು ಸತಾಯಿಸಿ, ನೀವು ಅವರಿಗೆ ಕೊಟ್ಟಿದ್ದ ವಿವಾಹಧನದ ಒಂದಂಶವನ್ನು ದಕ್ಕಿಸಿಕೊಳ್ಳಲು ಪ್ರಯತ್ನಿಸುವುದೂ ನಿಮಗೆ ಧರ್ಮಬದ್ಧವಲ್ಲ. ಆದರೆ, ಅವರು ಪ್ರತ್ಯಕ್ಷ ನೀಚ ಕಾರ್ಯವೆಸಗಿದಾಗ (ಅದರ ಹಕ್ಕು ನಿಮಗೆ ಇದ್ದೇ ಇದೆ.) ನೀವು ಅವರೊಂದಿಗೆ ಉತ್ತಮ ರೀತಿಯಿಂದ ಜೀವನ ನಡೆಸಿರಿ. ಅವರು ನಿಮಗೆ ಅಪ್ರಿಯರಾಗಿದ್ದರೆ ಒಂದು ವಸ್ತುವು ನಿಮಗೆ ಅಪ್ರಿಯವಾಗಿದ್ದರೂ ಅಲ್ಲಾಹನು ಅದರಲ್ಲೇ ಅತಿ ಹೆಚ್ಚು ಒಳಿತನ್ನಿರಿಸಿರಲೂ ಬಹುದು."**

**(ಕುರ್‌ಆನ್ 4:19)**

ಈ ಸೂಕ್ತದ ಕುರಿತು ಹ. ಆಯಿಶಾ(ರ)ರು ಹೇಳುತ್ತಾರೆ, ಈ ಸೂಕ್ತ ಪತಿಯು ಸ್ತ್ರೀಯ ಕೆಲ ಸಮಯಕ್ಕೆ ಮಾತ್ರ ಬಂದು ಹೋಗುವ ಅಥವಾ

ತನ್ನ ಪತಿಯ ಶುಶ್ರೂಷೆ ಮಾಡಲು ಅಶಕ್ತಳಾದ ವೃದ್ಧ ಪತ್ನಿಯ ಕುರಿತಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಒಂದು ವೇಳೆ ಪತ್ನಿಯು ವಿಚ್ಛೇದನೆ ಪಡೆಯಲು ಬಯಸದೆ, ಪತಿಯ ಜೊತೆ ಸಂಧಾನ ಮಾಡಿಕೊಂಡರೆ ಇದು ಬಹಳ ಉತ್ತಮ ನಿರ್ಧಾರವಾಗಿದೆ.

**"ಆಕ್ರಮಣಕಾರರು ಇನ್ನೂ ಹೋಗಿಲ್ಲವೆಂದು ಇವರು ಭಾವಿಸುತ್ತಾರೆ ಮತ್ತು ಅವರು ಪುನಃ ಆಕ್ರಮಣ ನಡೆಸಿ ಬಿಟ್ಟರೆ, ಆ ಸಂದರ್ಭದಲ್ಲಿ ಮರುಭೂಮಿಯಲ್ಲಿ ಎಲ್ಲಾದರೂ ಹಳ್ಳಿಗರ ನಡುವೆ ಇದ್ದುಕೊಂಡು ಅಲ್ಲಿಂದಲೇ ನಿಮ್ಮ ಸ್ಥಿತಿಗತಿಗಳನ್ನು ವಿಚಾರಿಸಿಕೊಂಡು ಇರಬಹುದೆಂದು ಅವರಿಗೆ ಅನಿಸುತ್ತದೆ. ಒಂದು ವೇಳೆ ಅವರು ನಿಮ್ಮ ನಡುವಿನಲ್ಲಿದ್ದರೂ ಯುದ್ಧದಲ್ಲಿ ಅತ್ಯಲ್ಪವೇ ಭಾಗವಹಿಸುವರು."**

**(ಕುರಾನ್ 33:20)**

ಹ. ಆಯಿಶಾ(ರ)ರು ಹೇಳುತ್ತಾರೆ, ಇದು ಕಂದಕ ಯುದ್ಧದ ಚಿತ್ರಣ. ಈ ಸಂದರ್ಭದಲ್ಲಿ ಇಡೀ ಅರಬ್ ರಾಷ್ಟ್ರವು ಮುಸ್ಲಿಮರ ಮೇಲೆರಗಿತ್ತು ಹಾಗೂ ಮುಸ್ಲಿಮರು ಬಹಳ ಆತಂಕಕ್ಕೊಳಗಾಗಿದ್ದರು.

✦ ಶಿಷ್ಯರು ಒಮ್ಮೆ ಆಯಿಶಾ(ರ)ರ ಬಳಿ ಪ್ರಶ್ನಿಸಿದರು. ಅಬೂ ಹುರೈರಾ(ರ)ರು ವರದಿ ಮಾಡುತ್ತಾರೆ, ಮೂರು ವಿಷಯಗಳು ಅಶುಭವಾಗಿವೆ– ಸ್ತ್ರೀ, ಕುದುರೆ ಹಾಗೂ ಮನೆ."

ಇದರ ಕುರಿತು ಹ. ಆಯಿಶಾ(ರ)ರು ಹೇಳುತ್ತಾರೆ, "ಪ್ರವಾದಿವರ್ಯರು(ಸ) ಅಂದು ಮಸ್ಜಿದೆ ನಬವಿಯಲ್ಲಿ ಪ್ರವಚನ ನೀಡುತ್ತಿದ್ದರು. ಅಬೂಹುರೈರಾ(ರ)ರು ಸ್ವಲ್ಪ ತಡವಾಗಿ ಅಲ್ಲಿಗೆ ತಲುಪಿದ್ದರಿಂದ ಪ್ರವಾದಿವರ್ಯರ(ಸ) ಪ್ರವಚನದ ಅಂತಿಮ ಭಾಗವನ್ನು ಮಾತ್ರ ಕೇಳಲು ಅವರಿಗೆ ಸಾಧ್ಯವಾಯಿತು. ಆದರೆ ಅವರ ಸಂಪೂರ್ಣ ವಿಷಯ ಈ ರೀತಿ ಇದೆ, "ಪ್ರವಾದಿವರ್ಯರು(ಸ) ಹೇಳಿದರು, "ಯಹೂದಿಯರು ಹೇಳುತ್ತಾರೆ, ಮೂರು ವಿಷಯಗಳಲ್ಲಿ ಅಶುಭವಿದೆ. ಸ್ತ್ರೀ, ಕುದುರೆ ಹಾಗೂ ಮನೆ."

✦ ಫಾತಿಮಾ(ರ) ಎಂಬೋರ್ವ ಸಹಾಬಿ ಮಹಿಳೆಯಿದ್ದರು. ಅವರ ಪತಿಯು ಅವರಿಗೆ ತಲಾಕ್ ನೀಡಿದರು. ಪತಿಯ ಮನೆಯಿಂದ ಬೇರೆ ಮನೆಗೆ ಹೋಗಲು ಪ್ರವಾದಿವರ್ಯರು(ಸ) ಫಾತಿಮಾ(ರ)ರಿಗೆ ಅನುಮತಿ ನೀಡಿದರು. ಹ. ಫಾತಿಮಾ(ರ)ರು ಈ ಘಟನೆಯನ್ನು ವಿವರಿಸುತ್ತಾ ಪ್ರವಾದಿವರ್ಯರ(ಸ) ಅನುಮತಿಯನ್ನು ಆದೇಶ ಎಂದು ತಿಳಿದುಬಿಟ್ಟರು ಹಾಗೂ ಒಂದು ಸಂದರ್ಭದಲ್ಲಿ ಇದರ ಕುರಿತು ಫತ್ವಾ ಹೊರಡಿಸಿದರು. ಈ ವಿಚಾರವನ್ನು ಕೇಳಿದ ಹ. ಆಯಿಶಾ(ರ)ರು ಹೇಳಿದರು, "ಫಾತಿಮಾ(ರ)ರ

ಪತಿಯ ಮನೆಯು ಅಸುರಕ್ಷಿತ ಹಾಗೂ ಭಯಾನಕವಾದುದರಿಂದ ಪ್ರವಾದಿವರ್ಯರು(ಸ) ಸುರಕ್ಷತೆಯ ನಿಟ್ಟಿನಲ್ಲಿ ಈ ಅನುಮತಿ ನೀಡಿದ್ದರು. (ಇಲ್ಲವಾದಲ್ಲಿ ವಿಚ್ಛೇದಿತ ಸ್ತ್ರೀ ಇದ್ದತ್‌ನ ಅವಧಿಯನ್ನು ಪತಿ ಮನೆಯಲ್ಲೇ ಕಳೆಯುವುದು ಉತ್ತಮ).

✦ ಒಂದು ಪ್ರಸಿದ್ಧ ಹದೀಸ್‌ನ ಪ್ರಕಾರ ಪ್ರವಾದಿವರ್ಯರಿಗೆ(ಸ) ಆಡಿನ ಕಾಲುಗಳ ಮಾಂಸ (ಪಾಯ) ಬಹಳ ಪ್ರಿಯವಾಗಿತ್ತು. ಇದಕ್ಕೆ ಕಾರಣವನ್ನು ತಿಳಿಸುತ್ತಾ, ಆಯಿಶಾ(ರ)ರು ಹೇಳುತ್ತಾರೆ, "ಕಾಲುಗಳ ಮಾಂಸ ಬೇಗನೇ ಬೇಯುತ್ತದೆ. ಆದ ಕಾರಣ ಅದು ಪ್ರವಾದಿವರ್ಯರಿಗೆ(ಸ) ಬಹಳ ಪ್ರಿಯವಾಗಿತ್ತು."

✦ ಪ್ರವಾದಿವರ್ಯರು(ಸ) ತಮ್ಮ ಕೊನೆಯ ದಿನಗಳಲ್ಲಿ ಕೆಲವೊಂದು ನಮಾಝ್‌ಗಳನ್ನು ಕುಳಿತುಕೊಂಡೇ ನಿರ್ವಹಿಸುತ್ತಿದ್ದರು. ಇದಕ್ಕೆ ಕಾರಣವನ್ನು ತಿಳಿಸುತ್ತಾ ಆಯಿಶಾ(ರ)ರು ಹೇಳುತ್ತಾರೆ, "ಕೊನೆಯ ದಿನಗಳಲ್ಲಿ ನಿತ್ರಾಣದ ಕಾರಣದಿಂದ ಪ್ರವಾದಿವರ್ಯರು(ಸ) ಕುಳಿತುಕೊಂಡು ನಮಾಝ್ ನಿರ್ವಹಿಸುತ್ತಿದ್ದರು." (ಇನ್ನು ಕೆಲವು ಪ್ರವಾದಿ ವಚನಗಳು ಇದಕ್ಕೆ ಪುಷ್ಟಿ ನೀಡುತ್ತವೆ.)

✦ ಮುತ್‌ಅ(ಒಬ್ಬ ಸ್ತ್ರೀಯನ್ನು ಸ್ವಲ್ಪ ಅವಧಿಗಾಗಿ ವಿವಾಹವಾಗುವ ಶೀಯಾ ಸಂಪ್ರದಾಯ)ದ ಕುರಿತು ಆಯಿಶಾ(ರ)ರು ಒಂದು ಬಲವಾದ ಸಾಕ್ಷ್ಯಾಧಾರ ನೀಡಿದ್ದಾರೆ.

**"ಅಂತಹವರು ತಮ್ಮ ಪ್ರಭುವಿನ ಸನ್ಮಾರ್ಗದಲ್ಲಿದ್ದಾರೆ ಮತ್ತು ಅವರೇ ಯಶಸ್ವಿಯಾಗುವವರು. ಈ ವಿಷಯಗಳನ್ನು ನಿಷೇಧಿಸಿದವರಿಗೆ ನೀವು ಎಚ್ಚರಿಕೆ ಕೊಟ್ಟರೂ ಕೊಡದಿದ್ದರೂ ಸರಿಯೇ. ಅವರಂತೂ ವಿಶ್ವಾಸವಿಡುವವರಲ್ಲ."** (ಕುರ್‌ಆನ್ 2:5–6)

ಸೂರ ಮೂಮಿನೂನ್‌ನ ಈ ಸೂಕ್ತದ ಆಧಾರದಲ್ಲಿ ಆಯಿಶಾ(ರ)ರು ಹೇಳುತ್ತಾರೆ, ಮುಮ್ತಉ (ಯಾರೊಂದಿಗೆ ಮುತ್‌ಅ ಮಾಡಲಾಗುತ್ತದೆಯೋ) ಪತ್ನಿಯು ಅಲ್ಲ, ದಾಸಿಯೂ ಅಲ್ಲದಿದ್ದರೆ ಅವರೊಂದಿಗೆ ಮುತ್‌ಅ ನಿಷಿದ್ಧವಾಗಿದೆ.

✦ ಹ. ಅಬ್ದುಲ್ಲಾ ಬಿನ್ ಉಮರ್(ರ)ರು ಪ್ರವಾದಿವರ್ಯರ(ಸ) ಪ್ರತಿಯೊಂದು ನಡೆ–ನುಡಿಯನ್ನು ಅನುಸರಿಸುತ್ತಿದ್ದರು. ಅವರ ಪ್ರಕಾರ ಪ್ರವಾದಿವರ್ಯರು(ಸ) ಮಾಡಿದ್ದೆಲ್ಲವೂ ಸುನ್ನತ್ ಆಗಿದ್ದವು. ಅದು ಯಾವುದೇ ಉದ್ದೇಶಕ್ಕಾಗಿರಬಹುದು. ಇದೇ ಆಧಾರದಲ್ಲಿ ಹ. ಅಬ್ದುಲ್ಲಾ ಬಿನ್ ಉಮರ್(ರ)ರು ಹಜ್ಜ್‌ನಿಂದ ಹಿಂದಿರುಗುವ ವೇಳೆ ಇಬ್‌ತಾಹ್ ಎಂಬಲ್ಲಿ ತಂಗಿದ್ದರು.

ಇಬ್‌ತಾಹ್ ಒಂದು ಸ್ಥಳವಾಗಿದೆ. ಹಜ್ಜ್ ನಿರ್ವಹಿಸಿ ಹಿಂದಿರುಗುವ ವೇಳೆ ಪ್ರವಾದಿವರ್ಯರು(ಸ) ಇಲ್ಲಿ ತಂಗಿದ್ದರು. ಹ. ಆಯಿಶಾ(ರ)ರ ಪ್ರಕಾರ ಇಬ್‌ತಾಹ್‌ನಲ್ಲಿ ತಂಗುವುದು ಸುನ್ನತ್ ಅಲ್ಲ. ಅಲ್ಲಿಂದ ಹೊರಡಲು ಸುಲಭವಾಗಿತ್ತು. ಆದುದರಿಂದ ಪ್ರವಾದಿವರ್ಯರು(ಸ) ಅಲ್ಲಿ ತಂಗಿದ್ದರೆಂದು ಹೇಳುತ್ತಾರೆ.

✦ ಹಜ್ಜ್ ಸಂದರ್ಭದಲ್ಲಿ ಸಫಾ-ಮರ್ವಾದ (ಕಅಬಾದ ಹತ್ತಿರುವಿರುವ ಎರಡು ಬೆಟ್ಟಗಳು) ನಡುವೆ ಓಡುವ ಕ್ರಮವಿದೆ. ಈ ಎರಡು ಬೆಟ್ಟಗಳನ್ನು ಕುರ್‌ಆನ್ 'ಶಆಇರುಲ್ಲಾಹ್' ಎಂದು ಕರೆದಿದೆ.

**"ನಿಶ್ಚಯವಾಗಿಯೂ 'ಸಫಾ' ಮತ್ತು 'ಮರ್ವಾ'ಗಳು ಅಲ್ಲಾಹನ ಸಂಕೇತ ಗಳಲ್ಲಾಗಿರುತ್ತವೆ. ಆದುದರಿಂದ ಪವಿತ್ರ ಭವನದ 'ಹಜ್ಜ್' ಯಾ 'ಉಮ್ರಾ' ಮಾಡುವಾತನು ಆ ಎರಡು ಬೆಟ್ಟಗಳ ನಡುವೆ 'ಸಅ್‌ಯ್' ಮಾಡುವುದರಲ್ಲೇನೂ ದೋಷವಿಲ್ಲ ಮತ್ತು ಸ್ವಯಂ ಪ್ರೇರಣೆಯಿಂದ ಸತ್ಕರ್ಮ ಮಾಡುವವನನ್ನು ಅಲ್ಲಾಹ್ ಬಲ್ಲವನೂ ಅವನನ್ನು ಗೌರವಿಸುವವನೂ ಆಗಿರುತ್ತಾನೆ." (ಕುರ್‌ಆನ್ 2:158)**

ಹ. ಆಯಿಶಾ(ರ)ರ ಸೋದರಿ ಪುತ್ರರಲ್ಲಿ ಅರ್‌ವಾ ಬಿನ್ ಝುಬೈರ್(ರ)ರೂ ಓರ್ವರು. ಆಯಿಶಾ(ರ)ರ ಬುದ್ಧಿವಂತ ವಿದ್ಯಾರ್ಥಿಯಾಗಿದ್ದರು.

"ಈ ಎರಡು ಬೆಟ್ಟಗಳ ನಡುವೆ 'ಸಈ' ಮಾಡುವುದರಲ್ಲೇನೂ ದೋಷವಿಲ್ಲ" ಎಂಬ ಸೂಕ್ತದ ಕುರಿತು ಪ್ರಶ್ನಿಸುತ್ತಾ, "ಚಿಕ್ಕಮ್ಮಾ! ಒಂದು ವೇಳೆ ತವಾಫ್ ಮಾಡದಿದ್ದರೂ ಯಾವುದೇ ದೋಷವಿಲ್ಲ ಎಂಬುದಾಗಿಯೂ ಇದನ್ನು ಅರ್ಥೈಸಬಹುದಲ್ಲವೇ" ಎಂದರು.

ಇದಕ್ಕುತ್ತರಿಸಿದ ಆಯಿಶಾರು(ರ), "ಒಂದು ವೇಳೆ ಈ ಸೂಕ್ತದ ಅರ್ಥ ನೀವು ಹೇಳಿದಂತೆ ಆಗಿರುತ್ತಿದ್ದರೆ, ಅಲ್ಲಾಹನು ನೇರವಾಗಿ, ತವಾಫ್ ಮಾಡದಿದ್ದರೆ ಯಾವುದೇ ದೋಷವಿಲ್ಲ" ಎಂದು ಹೇಳುತ್ತಿದ್ದನು. ಈ ಸೂಕ್ತದ ಅವತೀರ್ಣದ ಹಿನ್ನಲೆಯನ್ನು ಆಯಿಶಾ(ರ)ರು ಹೇಳುತ್ತಾರೆ, "ಅನ್ಸಾರರಿಗೆ (ಮದೀನಾ ನಿವಾಸಿಗಳು) ತಿಳಿಸಲು ಈ ಸೂಕ್ತವು ಅವತೀರ್ಣಗೊಂಡಿತು. ಅನ್ಸಾರರು ಹೇಳಿದರು, ನಾವು ಮನಾತನ್ನು ತೊರೆದಿದ್ದೇವೆ, ನಾವು ಈಗ ಏನು ಮಾಡಬೇಕು. ಆಗ "ಸಫಾ-ಮರ್ವಾದ ತವಾಫ್ ಮಾಡುವುದರಲ್ಲಿ ಯಾವುದೇ ದೋಷವಿಲ್ಲ" ಎಂಬ ಸೂಕ್ತವು ಅವತೀರ್ಣಗೊಂಡಿತು. ಬಳಿಕ ಆಯಿಶಾ(ರ)ರು ಹೇಳಿದರು, "ಪ್ರವಾದಿವರ್ಯರು(ಸ) ಸ್ವತಃ ಈ ಎರಡು ಬೆಟ್ಟಗಳ ನಡುವೆ ಸಈ ಮಾಡಿದ್ದಾರೆ. ಹಾಗಾದರೆ ಇದರಲ್ಲಿ ಸಂಶಯ ಪಡುವ ಆವಶ್ಯಕತೆ ಇದೆಯೇ?"

ಅರ್‌ವಾ(ರ) ಹಾಗೂ ಇತರ ಶಿಷ್ಯರು ಆಯಿಶಾ(ರ)ರ ಈ ಮಾತಿಗೆ ಸಮಾಧಾನಗೊಂಡರು. ಬಳಿಕ ಹ. ಆಯಿಶಾ(ರ)ರ ಈ ವಿವರಣೆಯು ಪ್ರಸಿದ್ಧ ಮುಹದ್ದಿಸ್ ಅಬೂಬಕರ್ ಬಿನ್ ಅಬ್ದುರ್ರಹ್ಮಾನ್‌ರಿಗೆ ತಿಳಿದಾಗ ಅವರು, "ಜ್ಞಾನವೆಂದರೆ ಇದು" ಎಂದರು.

**ಸುಧಾರಣೆಯ ಮಾದರಿಗಳು:**

✦ ಪ್ರವಾದಿವರ್ಯರು(ಸ) ತಮ್ಮ ಪತ್ನಿಯರಿಗೆ ಒಂದು ತಿಂಗಳ ಕಾಲ ಈಲಾ ನೀಡಿದ ಘಟನೆ ನಮಗೆಲ್ಲಾ ತಿಳಿದಿದೆ. ಈಲಾದ ದಿನಗಳು ಮುಗಿದು ಪ್ರವಾದಿ ವರ್ಯರು(ಸ) ಆಯಿಶಾ(ರ)ರ ಬಳಿ ಬಂದಾಗ ಆಯಿಶಾ(ರ)ರು "ಇಂದು 29 ತಾರೀಕಲ್ಲವೇ?" ಎಂದು ಪ್ರಶ್ನಿಸಿದಾಗ ಪ್ರವಾದಿವರ್ಯರು(ಸ), "29 ತಾರೀಕಿನ ತಿಂಗಳು ಇರುವುದಿಲ್ಲವೇ?" ಎಂದಿದ್ದರು.

ಈ ವರದಿಯ ಆಧಾರದಲ್ಲಿ ಜನರು ತಿಂಗಳಲ್ಲಿ 29 ದಿನಗಳಿರುತ್ತವೆಂದು ತಿಳಿದುಕೊಂಡರು. ಶಿಷ್ಯರು ಹ. ಆಯಿಶಾ(ರ)ರಲ್ಲಿ ಈ ಕುರಿತು ಕೇಳಿದಾಗ, ಅದರರ್ಥ ಇದಲ್ಲ, ಬದಲಾಗಿ ಕೆಲವೊಮ್ಮೆ ಒಂದು ತಿಂಗಳಲ್ಲಿ 29ಯಲ್ಲಿ ದಿನಗಳಿರುತ್ತವೆ ಎಂದು ಹೇಳಿರಿ.

✦ ಒಂದು ಪ್ರಸಿದ್ಧ ಸೂಕ್ತ, "ಅನಾಥರೊಂದಿಗೆ... ನಾಲ್ವರನ್ನೋ ವಿವಾಹ ಮಾಡಿಕೊಳ್ಳಿರಿ." (4:3) ಇಲ್ಲಿ ಅಲ್ಲಾಹನು ಮುಸ್ಲಿಮರಿಗೆ ನಾಲ್ಕು ಸ್ತ್ರೀಯರಿಗೆ ವಿವಾಹವಾಗುವ ಅನುಮತಿ ನೀಡಿದ್ದಾನೆ.

ಶಿಷ್ಯರು ಇದರ ಕುರಿತು ಪ್ರಶ್ನಿಸುತ್ತಾ, "ಸತ್ಯವಿಶ್ವಾಸಿಗಳ ಮಾತೆ! ಈ ಸೂಕ್ತದಲ್ಲಿ ಅನಾಥರೊಂದಿಗೆ ನ್ಯಾಯ ಪಾಲಿಸುವುದು ಅಥವಾ ಪಾಲಿಸದೇ ಇರುವುದರ ಕುರಿತು ಹೇಳಲಾಗಿದೆ. ಅದಕ್ಕೂ ಎರಡು-ಮೂರು-ನಾಲ್ಕು ವಿವಾಹವಾಗುವುದಕ್ಕೂ ನಡುವೆ ಸಂಬಂಧವೇನಿದೆ?

ಆಯಿಶಾ(ರ)ರು ಹೇಳಿದರು, "ಈ ಸೂಕ್ತದ ಅವತೀರ್ಣದ ಹಿನ್ನೆಲೆ ಈ ರೀತಿ ಇದೆ, ಅನಾಥರ ಸಂಬಂಧಿಕರು, ಸಂಬಂಧಗಳ ಬಲ ಪ್ರದರ್ಶಿಸುತ್ತಾ ಅನಾಥರ ಮೇಲ್ವಿಚಾರಕರಾಗುತ್ತಾರೆ. ಕೇವಲ ಆಸ್ತಿಯನ್ನು ಕಬಳಿಸುವ ದುರುದ್ದೇಶವನ್ನಿಟ್ಟುಕೊಂಡು ಅವರು ಅನಾಥ ಹೆಣ್ಣು ಮಕ್ಕಳನ್ನು ವಿವಾಹವಾಗುತ್ತಾರೆ. ಈ ಮುಗ್ಧ ಅನಾಥ ಹೆಣ್ಣು ಮಕ್ಕಳ ಪರ ವಾದಿಸುವವರಾರೂ ಇರುವುದಿಲ್ಲ. ಆದುದರಿಂದ ಅಲ್ಲಾಹನು ಪುರುಷರನ್ನುದ್ದೇಶಿಸಿ, ಒಂದು ವೇಳೆ ಅನಾಥರೊಂದಿಗೆ ನ್ಯಾಯ ಪಾಲಿಸಲಾರಿರಿ ಎಂಬ ಆಶಂಕೆ ನಿಮಗಿದ್ದರೆ, ಇನ್ನೊಂದೆಡೆ ಅವರೊಂದಿಗೆ ವಿವಾಹವಾಗಲು ಅನುಮತಿ ಇದೆ.

✦ ಜುಮಾದಂದು ಸ್ನಾನ ಮಾಡುವ ಕುರಿತು ಕೆಲವೊಂದು ಸಹಾಬಿಗಳು(ರ) ಈ ರೀತಿ ವರದಿ ಮಾಡಿದ್ದಾರೆ; "ಜುಮಾಕ್ಕೆ ಬರುವವರು ಸ್ನಾನ ಮಾಡಿ ಬರಬೇಕೆಂದು ಪ್ರವಾದಿವರ್ಯರು(ಸ) ಹೇಳಿದ್ದನ್ನು ನಾನು ಆಲಿಸಿದ್ದೇನೆ." [ಅಬ್ದುಲ್ಲಾ ಬಿನ್ ಉಮರ್(ರ)]

"ಜುಮಾದ ಸ್ನಾನವು ಪ್ರತಿಯೊಬ್ಬ ವಯಸ್ಕರ ಮೇಲೂ ಕಡ್ಡಾಯವಾಗಿದೆ." [ಹ. ಅಬೂ ಸಈದ್ ಖುದ್ರಿ(ರ)]

ಇದೇ ಮಾತನ್ನು ಹ. ಆಯಿಶಾ(ರ)ರು ಈ ರೀತಿ ವರದಿ ಮಾಡುತ್ತಾರೆ, "ಜನರು ದೂರ ದೂರದಿಂದ ಆಗಮಿಸುತ್ತಿದ್ದರು. ಅವರ ದೇಹವು ಬೆವರಿನಿಂದ ಒದ್ದೆಯಾಗಿರುತ್ತಿತ್ತು. ಒಮ್ಮೆ ಓರ್ವ ಸಹಾಬಿಯು ಇದೇ ಅವಸ್ಥೆಯಲ್ಲಿ ಬಂದು ಪ್ರವಾದಿವರ್ಯರ(ಸ) ಬಳಿ ಕುಳಿತುಕೊಂಡರು. ಆಗ ಪ್ರವಾದಿವರ್ಯರು(ಸ), "ನೀವು ಈ ದಿನ ಸ್ನಾನ ಮಾಡುತ್ತಿದ್ದರೆ ಒಳ್ಳೆಯದಿತ್ತು" ಎಂದರು. ಹ. ಆಯಿಶಾ(ರ)ರು ಜುಮಾದ ದಿನದಂದು ಸ್ನಾನ ಮಾಡುವುದರ ಕಾರಣವನ್ನು ತಿಳಿಸಿದರು.

ಒಮ್ಮೆ ಪ್ರವಾದಿವರ್ಯರು(ಸ) ಹೇಳಿದರು, "ಕುರ್ಬಾನಿಯ ಮಾಂಸವನ್ನು ಮೂರು ದಿನಗಳೊಳಗೆ ತಿನ್ನಬೇಕು." ಕೆಲವೊಂದು ಸಹಾಬಿಗಳು ಇದೇ ರೀತಿ ವರದಿ ಮಾಡಿದ್ದಾರೆ.

ಆದರೆ ಹ. ಆಯಿಶಾ(ರ)ರು ಹೇಳುತ್ತಾರೆ, "ಅಂದು ಕೆಲವರು ಮಾತ್ರ ಕುರ್ಬಾನಿ ನೀಡುತ್ತಿದ್ದರು. ಕುರ್ಬಾನಿ ನೀಡದವರಿಗೂ ಮಾಂಸ ತಲುಪಲಿ ಎಂಬುದು ಪ್ರವಾದಿವರ್ಯರ(ಸ) ಉದ್ದೇಶವಾಗಿತ್ತು." (ಈ ಆದೇಶವು ನಿರ್ಣಾಯಕವಾಗಿರಲಿಲ್ಲ. ಜನರು ಇತರರಿಗೂ ಉಣಬಡಿಸಲೆಂಬುದು ಪ್ರವಾದಿವರ್ಯರ(ಸ) ಬಯಕೆಯಾಗಿತ್ತು.)

✦ ಸೂರ ಅನ್ನಿಸಾದಲ್ಲಿ ಎರಡು ವಿಷಯಗಳಿವೆ.

**1. ಅನಾಥರ ಸೊತ್ತನ್ನು ಅಕ್ರಮವಾಗಿ ಕಬಳಿಸುವವರು ವಾಸ್ತವದಲ್ಲಿ ತಮ್ಮ ಹೊಟ್ಟೆಯನ್ನು ನರಕಾಗ್ನಿಯಿಂದ ತುಂಬುತ್ತಾರೆ. (ಕುರ್‌ಆನ್ 4: 10)**

**2. ಧನಿಕರು ಈ ಸಂಪತ್ತಿನಿಂದ ದೂರ ಉಳಿಯಬೇಕು. ಹಾಗೂ ಅವನು ಬಡವನಾಗಿದ್ದರೆ ನ್ಯಾಯೋಚಿತ ರೀತಿಯಿಂದ ತಿನ್ನಲಿ. (ಕುರ್‌ಆನ್4:5)**

ಮೊದಲ ಮಾತು ಎರಡನೇ ಮಾತನ್ನು ರದ್ದುಗೊಳಿಸಿಬಿಟ್ಟಿತು ಎಂದು ಕೆಲವರಿಗೆ ಸಂಶಯವಾಯಿತು. ಅಂದರೆ ಬಡವನ ಸೊತ್ತನ್ನು ತಿನ್ನಬಾರದು ಎಂದು ಅಲ್ಲಾಹನು ನಿರ್ಣಾಯಕ ಆದೇಶ ಹೊರಡಿಸಿದ್ದಾನೆ ಎಂಬುದು

ಅವರ ಅನಿಸಿಕೆ. ತಮ್ಮ ಈ ಸಮಸ್ಯೆಯನ್ನು ಶಿಷ್ಯರು ಆಯಿಶಾ(ರ)ರ ಮುಂದಿರಿಸಿದರು. ಹ. ಆಯಿಶಾ(ರ)ರು ಹೇಳಿದರು, "ಇದರಲ್ಲಿ ರದ್ದುಗೊಂ ಒಂದೇ ಒಂದು ವಿಚಾರವಿಲ್ಲ. ಈ ಸೂಕ್ತಗಳ ಅರ್ಥ, ಯಾವ ವ್ಯಕ್ತಿಯ ಅನಾಥರ ಸೊತ್ತಿನ ರಕ್ಷಕನಾಗಿದ್ದನೋ ಆತ ಜಮೀನುದಾರ ಅಥವ ಧನಿಕನಾಗಿದ್ದರೆ, ತನ್ನ ಸೇವೆಗೆ ಪ್ರತಿಫಲವಾಗಿ ಅನಾಥರ ಸೊತ್ತಿನಲ್ಲಿ ಏನನ್ನೂ ಪಡೆಯಬಾರದು. ಒಂದು ವೇಳೆ ಆ ವ್ಯಕ್ತಿ ಬಡವನಾಗಿದ್ದ ಅಗತ್ಯಕ್ಕೆ ತಕ್ಕಂತೆ ಮುಕ್ತವಾಗಿ ತೆಗೆದುಕೊಳ್ಳಲಿ. ಅಂದರೆ ಆತ ಅನಾಥ ಸೊತ್ತಿನಿಂದ ಎಷ್ಟಂಶ ತೆಗೆದುಕೊಳ್ಳುತ್ತಿದ್ದಾನೆಂದು ಜನರಿಗೆ ತಿಳಿಯಬೇಕು ಒಂದು ವೇಳೆ ಆ ಬಡ ವ್ಯಕ್ತಿ ಅಗತ್ಯಕ್ಕಿಂತ ಹೆಚ್ಚಿನ ಮೊತ್ತವನ್ನು ಅನಾಥ ಸೊತ್ತಿನಿಂದ ತೆಗೆದುಕೊಂಡರೆ ಅದು ಅನಾಥನ ಮೇಲೆ ಮಾಡು ಅತಿರೇಕವಾಗಿದೆ. ಅದೇ ರೀತಿ ಧನಿಕನು ಸೊತ್ತಿನಿಂದ ಏನೂ ತೆಗೆದುಕೊಂಡರೂ ಅದು ಶೋಷಣೆಯಾಗಿದೆ."

✦ ಸುಧಾರಣೆ(ತಿದ್ದುಪಡಿ)ಯ ಇನ್ನೊಂದು ಉದಾಹರಣೆ ಅಬೂಹುರೈರಾ(ರ)ರವರು ವರದಿ ಮಾಡಿರುವರು, "ಓರ್ವ ಮಹಿಳೆಯ ಒಂದು ಬೆಕ್ಕನ್ನು ಸಾಕಿದ್ದಳು. ಆದರೆ ಆಕೆ ಬೆಕ್ಕಿಗೆ ತಿನ್ನಲು ಏನೂ ಕೊಡುತ್ತಿರಲಿಲ್ಲ ಇದೇ ಅವಸ್ಥೆಯಲ್ಲಿ ಬೆಕ್ಕು ಸತ್ತು ಹೋಯಿತು. ಆ ಮಹಿಳೆಯು ಶಿಕ್ಷೆ ಗುರಿಯಾದಳು."

ಹ. ಆಯಿಶಾ(ರ)ರು, "ನೀವು ಪ್ರವಾದಿವರ್ಯರಿಂದ(ಸ) ಇದೇ ರೀತಿ ಆಲಿಸಿದ್ದೀರಾ?" ಎಂದು ಪ್ರಶ್ನಿಸಿದರು. ಅಬೂಹುರೈರಾ(ರ)ರು "ಹೌದೆಂದರು" ಆಗ ಆಯಿಶಾ(ರ)ರು ಹೇಳಿದರು, "ಅಬೂಹುರೈರಾ(ರ)! ಯಾವುದೇ ಒಂದು ವಿಚಾರವನ್ನು ವರದಿ ಮಾಡುವ ಮುನ್ನ ಅದನ್ನು ಸರಿಯಾಗಿ ಅರ್ಥೈಸಿಕೊಂಡು ಪ್ರವಾದಿವರ್ಯರ(ಸ) ಉಲ್ಲೇಖವೆಂದು ಹೇಳಿರಿ. ವಾಸ್ತವದಲ್ಲಿ ಆ ಮಹಿಳೆಯು ಸತ್ಯನಿಷೇಧಿಯಾಗಿದ್ದಳು. ಸತ್ಯನಿಷೇಧಾವಸ್ಥೆಯಿಂದಾಗಿ ಆಕೆಗೆ ಶಿಕ್ಷೆಯಾಗಿತ್ತು (ನಿಶ್ಚಯವಾಗಿಯೂ ಅಲ್ಲಾಹನು ಸಣ್ಣ-ಸಣ್ಣ ಪಾಪಗಳನ್ನು ಮನ್ನಿಸುತ್ತಾನೆ)

✦ ಒಮ್ಮೆ ಓರ್ವ ಸಹಾಬಿಯು(ರ) ಉಪನ್ಯಾಸ ನೀಡುತ್ತಿದ್ದ ಸಂದರ್ಭದಲ್ಲಿ, "ಒಂದು ವೇಳೆ ಉಪವಾಸದ ದಿನ ಬೆಳಿಗ್ಗೆ ಯಾರಿಗಾದರೂ ಸ್ನಾನ ಮಾಡುವ ಅಗತ್ಯವಿದ್ದರೆ ಅವರು ಅಂದು ಉಪವಾಸವನ್ನಾಚರಿಸಬಾರದು' ಎಂದರು.

ಈ ವಿಷಯವನ್ನು ಕೇಳಿ ಜನರು ಗೊಂದಲಕ್ಕೀಡಾದರು. ಯಾರ ಬಳಿ ಸಮಸ್ಯೆಯನ್ನು ಪರಿಹರಿಸುವುದು ಎಂದು ಚರ್ಚಿಸಿದರು. ಸಮಸ್ಯೆಯು

ಸೂಕ್ಷ್ಮವಾಗಿದ್ದರಿಂದ ಜನರು ಸತ್ಯವಿಶ್ವಾಸಿ ಮಾತೆಯರ ಬಳಿ ತೆರಳಿದರು. ಕೆಲವರು ಹ. ಉಮ್ಮು ಸಲಮ(ರ)ರ ಬಳಿ, ಇನ್ನು ಕೆಲವರು ಹ. ಆಯಿಶಾ(ರ)ರ ಬಳಿಗೆ ಹೋಗಿ ಇದು ನಿಜವೇ? ಎಂದು ಪ್ರಶ್ನಿಸಿದರು. "ಪ್ರವಾದಿವರ್ಯರ(ಸ) ಕರ್ಮವು ಇದರ ವಿರುದ್ಧವಾಗಿತ್ತು" ಎಂಬ ಉತ್ತರ ದೊರಕಿತು. ಬಳಿಕ ಜನರು ಸಹಾಬಿಯ(ರ) ಬಳಿ ತೆರಳಿ ಈ ವಿಷಯ ತಿಳಿಸಿದಾಗ ಅವರು(ಸ) ಸತ್ಯವಿಶ್ವಾಸಿನಿ ಮಾತೆಯ ಮಾತನ್ನು ಒಪ್ಪಿದರು ಹಾಗೂ ತಮ್ಮ ಫತ್ವಾವನ್ನು ಹಿಂತೆಗೆದುಕೊಂಡರು.

ಅಪ್ರಾಪ್ತ ವಯಸ್ಸಿನ ಮಕ್ಕಳು, ವಯಸ್ಕರು ಹಾಗೂ ಹಿರಿಯರು ಹೀಗೆ ಎಲ್ಲಾ ಪ್ರಾಯದ ಜನರು ಜ್ಞಾನಾರ್ಜನೆಗಾಗಿ ಹ. ಆಯಿಶಾ(ರ)ರ ಬಳಿ ಬರುತ್ತಿದ್ದರು. ಹಿರಿಯರು, ವಿಶೇಷವಾಗಿ ಮಹಿಳೆಯರಿಗೆ ಸಂಬಂಧಿಸಿದ ವಿಚಾರಗಳನ್ನು ಕೇಳಲು ಹಿಂಜರಿಯುತ್ತಿದ್ದರು. ಅವರು ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ಮುಂದಿಟ್ಟು ಪ್ರಶ್ನೆಗಳನ್ನು ಕೇಳುತ್ತಿದ್ದರು. ಆದರೆ ಯಾವೊಂದು ವಿಚಾರವು ಮುಕ್ತವಾಗಿ ಹೊರಬರುತ್ತಿರಲಿಲ್ಲ. ಇದನ್ನರಿತ ಆಯಿಶಾ(ರ)ರು "ನಾನು ನಿಮ್ಮ ಮಾತೆಯಾಗಿದ್ದೇನೆ. ನನ್ನಲ್ಲಿ ಕೇಳಲು ಹಿಂಜರಿಯಬೇಡಿರಿ" ಎನ್ನುತ್ತಾ, "ಅಲ್ಲಾಹನು ಅತೀ ಹೆಚ್ಚು ಸಮ್ಮಾನಿತನು. ಆತನು ಈ ರೀತಿಯ ರಹಸ್ಯ ವಿಚಾರಗಳನ್ನು ಬಹಿರಂಗ ಪಡಿಸಿದನು. ಆದುದರಿಂದ ನೀವೂ ಧಾರ್ಮಿಕ ವಿಚಾರಗಳನ್ನು ಅರಿಯಲು ಮುಕ್ತರಾಗಿ ಪ್ರಶ್ನಿಸಿರಿ" ಎಂದರು.

ಈ ಅನುಮತಿ ದೊರೆತೊಡನೆ ಜನರು ಮುಕ್ತವಾಗಿ ಪ್ರಶ್ನಿಸಿ ಹಲವಾರು ಸೂಕ್ಷ್ಮ ಸಮಸ್ಯೆಗಳಿಗೂ ಪರಿಹಾರ ಕಂಡುಕೊಂಡರು.

✦ ಉಪಮೆ ಹಾಗೂ ಉದಾಹರಣೆಗಳ ಸಹಾಯದಿಂದ ಉಲ್ಲೇಖಿಸಿದ ವಿಚಾರಗಳನ್ನು ಅರಿಯುವುದು ಆಸಕ್ತಿದಾಯಕವಾಗಿದೆ. ಅಲ್ಲಾಹನು ಕುರ್‌ಆನಿನ ಹಲವೆಡೆಗಳಲ್ಲಿ ವಿಷಯಗಳನ್ನು ಜನರಿಗೆ ಅರ್ಥೈಸಲು ಉದಾಹರಣೆ ಹಾಗೂ ಉಪಮೆಗಳನ್ನು ಬಳಸಿದ್ದಾನೆ. ಉದಾಹರಣೆಗೆ, ಬಿಳಿ ದಾರ ಕಪ್ಪು ದಾರದಿಂದ ಹೊರಬಂದರೆ ಮುಂಜಾನೆಯ ಸಮಯವೆಂದರ್ಥ. ಅಂದರೆ ಆ ವೇಳೆಗೆ ಸಹರಿ ಉಣ್ಣುವ ಸಮಯ ಮುಗಿಯಿತು. ಈ ವಿಷಯವನ್ನು ಸೂರಅಲ್ ಬಕರಃದಲ್ಲಿ ಉಲ್ಲೇಖಿಸಲಾಗಿದೆ.

**"ಮತ್ತು ಇರುಳಿನ ಕರಿ ರೇಖೆಯಿಂದ ಉಷಃ ಕಾಲದ ಬಿಳಿ ರೇಖೆಯು ನಿಮಗೆ ಬೇರ್ಪಟ್ಟು ತೋರುವ ವರೆಗಿನ ನಿಶಾವಧಿಯಲ್ಲಿ ತಿನ್ನಿರಿ ಮತ್ತು ಕುಡಿಯರಿ."**

**(ಕುರ್‌ಆನ್ 2:187)**

ಈ ಸೂಕ್ತವನ್ನು ಆಧಾರವಾಗಿಟ್ಟು ಕೆಲವರು ಕಪ್ಪು ದಾರದ ಮೇಲೆ

ಬಿಳಿ ದಾರವನ್ನಿಟ್ಟು ವೀಕ್ಷಿಸುತ್ತಿದ್ದರು. ಬಿಳಿ ದಾರ ಪ್ರಕಾಶಿಸಿದೊಡನೆ ಮುಂಜಾನೆಯಾಯಿತೆಂದು ಹೇಳುತ್ತಿದ್ದರು. ಆದರೆ ವಾಸ್ತವಿಕ ವಿಷಯವೆಂದರೆ, ಇಲ್ಲಿ ಬಿಳಿ ದಾರವೆಂದರೆ (ಬಿಳಿ ರೇಖೆ) ಪ್ರಕಾಶವೆಂದರ್ಥ. ಅದು ಮುಂಜಾನೆಯಲ್ಲಿ ಪ್ರತ್ಯಕ್ಷಗೊಂಡು ಕತ್ತಲೆಯಲ್ಲಿ ಮಾಯವಾಗುವ ಸಾಕ್ಷಿ ನೀಡುತ್ತದೆ.

✦ ಹ. ಅಬೂ ಸಈದ್ ಖುದ್ರೀ(ರ)ಯವರು ಕೊನೆಯ ಕಾಲದಲ್ಲಿ ತಮಗೆ ಇಷ್ಟವಾದ ಬಟ್ಟೆಯನ್ನು ತರಿಸಿ ಇಟ್ಟರು. "ಮುಸಲ್ಮಾನನು ಮರಣ ಹೊಂದುವಾಗ ಯಾವ ಬಟ್ಟೆಯಲ್ಲಿರುತ್ತಾನೋ, ಅದೇ ಬಟ್ಟೆಯಲ್ಲಿ ಆತನು ಎಬ್ಬಿಸಲ್ಪಡುವನು" ಎಂದರು.

ಈ ವಚನವನ್ನು ಹ. ಅಬೂ ಸಈದ್(ರ)ರು ಪ್ರವಾದಿವರ್ಯರಿಂದ(ಸ) ಕೇಳಿ ತಿಳಿದುಕೊಂಡಿದ್ದರು. ಪ್ರವಾದಿವರ್ಯರು(ಸ) ಇದೇ ರೀತಿ ಹೇಳಿದ್ದರಾದರೂ, ಅವರು(ಸ) ಉಪಮೆಯನ್ನು ಬಳಸಿದ್ದರಿಂದ ಅಬೂ ಸಈದ್(ರ)ರಿಗೆ ಅದನ್ನು ಅರ್ಥೈಸಲು ಸಾಧ್ಯವಾಗಿರಲಿಲ್ಲ.

ಆಯಿಶಾ(ರ)ರ ಬಳಿ ಬಂದ ಶಿಷ್ಯರು, ಅಬೂ ಸಈದ್(ರ)ರು ನಿಧನ ಹೊಂದುವ ವೇಳೆ ಈ ರೀತಿ ಹೇಳಿದ್ದರು. ಹಾಗೂ ಹೊಸ ಉಡುಪನ್ನು ಧರಿಸಿದ್ದರೆಂದಾಗ ಆಯಿಶಾ(ರ)ರು ಹೇಳಿದರು, "ಪ್ರವಾದಿವರ್ಯರು(ಸ) ಮಾನವನ ಕರ್ಮಗಳನ್ನು ಉಡುಪು ಎಂದಿದ್ದಾರೆ. ಅಂದರೆ ಯಾರು ಯಾವ ರೀತಿಯ ಕರ್ಮಗಳೊಂದಿಗೆ ಮರಣ ಹೊಂದುತ್ತಾನೋ, ಆತ ಪುನರುತ್ಥಾನ ದಿನದಂದು ಅದೇ ಕರ್ಮಗಳೊಂದಿಗೆ ಎಬ್ಬಿಸಲ್ಪಡುವನು. ಪುನರುತ್ಥಾನ ದಿನದಂದು ಜನರು ನಗ್ನರಾಗಿ ಎಬ್ಬಿಸಲ್ಪಡುವರು ಎಂದು ಕುರ್‌ಆನ್ ಮತ್ತು ಹದೀಸ್‌ನಿಂದ ಸಾಬೀತಾಗುತ್ತದೆ.

## ಜ್ಞಾನಾರ್ಜನೆಯ ಸ್ಥಳ:

ಹ. ಆಯಿಶಾ(ರ)ರ ಕೋಣೆಯ ಮುಂಭಾಗದಲ್ಲೇ ಮಸ್ಜಿದ್ ನಬವಿ ಇತ್ತು. ಹ. ಆಯಿಶಾ(ರ)ರು ತಮ್ಮ ಕೋಣೆ(ಮನೆ)ಯಲ್ಲೇ ಕುಳಿತುಕೊಂಡು ಉಪನ್ಯಾಸ ನೀಡುತ್ತಿದ್ದರು. ಕೆಲವು ವಿದ್ಯಾರ್ಥಿಗಳು ಕೋಣೆಯೊಳಗಡೆ, ಇನ್ನು ಕೆಲವರು ಮಸೀದಿಯ ಅಂಗಳದಲ್ಲಿ ಅಂದರೆ ಆಯಿಶಾ(ರ)ರ ಕೋಣೆಯ ಮುಂಭಾಗದಲ್ಲಿ ಕುಳಿತುಕೊಳ್ಳುತ್ತಿದ್ದರು. ಕೋಣೆಯ ಬಾಗಿಲಿಗೆ ಪರದೆಯನ್ನು ಹಾಕಲಾಗಿತ್ತು. ಅಲ್ಲಿಂದಲೇ ಆಯಿಶಾ(ರ)ರು ಉಪನ್ಯಾಸ ನೀಡುತ್ತಿದ್ದರು.

ಶಿಷ್ಯರಲ್ಲಿ ಎರಡು ವಿಭಾಗದವರಿದ್ದರು. ಒಂದು ವಿಭಾಗ, ಅವರೊಂದಿಗೆ ಆಯಿಶಾ(ರ)ರು ಪರ್ದಾ ಮಾಡುತ್ತಿರಲಿಲ್ಲ, ಇನ್ನೊಂದು ವಿಭಾಗದೊಂದಿಗೆ ಆಯಿಶಾ(ರ)ರು ಪರ್ದಾ ಮಾಡುತ್ತಿದ್ದರು. ಶಿಷ್ಯರಲ್ಲಿ ಯುವತಿಯರು ಹಾಗೂ

ಹಿಳೆಯರೂ ಇದ್ದರು. ಅವರು ಆಯಿಶಾ(ರ)ರ ಸಮೀಪ ಕುಳಿತುಕೊಳ್ಳುತ್ತಿದ್ದರು.

ಎರಡನೇ ವಿಭಾಗದ ಶಿಷ್ಯರು ಮಸ್ಜಿದೆ ನಬವಿಯ ಮುಂಭಾಗದಲ್ಲಿ ಳಿತುಕೊಂಡು ವಿದ್ಯೆ ಕಲಿಯುತ್ತಿದ್ದರು. ಈ ವಿಭಾಗದ ಶಿಷ್ಯರು, ಆಯಿಶಾ(ರ)ರ ಡೆ-ನುಡಿಗಳನ್ನು ಕಣ್ಣಾರೆ ಕಾಣುವ ಅವಕಾಶ ನಮಗಿಲ್ಲವಲ್ಲವೆಂದು ವಿಷಾದ ್ಯಕ್ತಪಡಿಸುತ್ತಿದ್ದರು. ಉಪನ್ಯಾಸವನ್ನು ಕೇಳುವುದರ ಜೊತೆಗೆ ಅವರ(ರ) ಾವ-ಭಾವಗಳನ್ನು ನೋಡಿದರೆ ವಿಷಯವು ಬೇಗನೇ ಅರ್ಥವಾಗುತ್ತದೆಂಬುದು ವರ ಅನಿಸಿಕೆಯಾಗಿತ್ತು. ನಖಈ(ರ) ಓರ್ವ ಪ್ರಸಿದ್ಧ ಇಮಾಮ್ ಹಾಗೂ ಯಿಶಾ(ರ)ರ ಶಿಷ್ಯರಾಗಿದ್ದರು. ಇಮಾಮ್ ನಖಈ(ರ)ಯರಿಗೆ ಆಯಿಶಾ(ರ)ರ ೋಣೆಯೊಳಗೆ ಕುಳಿತುಕೊಳ್ಳುವ ಅನುಮತಿ ಇತ್ತು. ನಖಈ(ರ)ಯವರು ಯಿಶಾ(ರ)ರ ಕೋಣೆಯೊಳಗೆ ಕುಳಿತುಕೊಂಡು ಜ್ಞಾನಾರ್ಜನೆ ಪಡೆಯುತ್ತಿದ್ದ ಾರಣ ಅವರ(ರ) ಜ್ಞಾನವೂ ನಮ್ಮೆಲ್ಲರಿಗಿಂತಲೂ ವೃದ್ಧಿಯಾಗಿತ್ತು ಎಂಬುದು ೊದಲ ವಿಭಾಗದ ಶಿಷ್ಯರ ಅಭಿಪ್ರಾಯ. ಇಮಾಮ್ ಕುಬೈಸ(ರ)ರ ಬಳಿ ನರು "ಅರ್‌ವಾರ ಜ್ಞಾನದಲ್ಲಿ ನಿಮಗಿಂತ ಮುಂಚೂಣಿಯಲ್ಲಿರಲು ಾರಣವೇನು?" ಎಂದು ಪ್ರಶ್ನಿಸಿದರು.

ಆಗ ಇಮಾಮ್ ಕುಬೈಸ(ರ)ರು, "ಅರ್‌ವಾರು ಆಯಿಶಾ(ರ)ರ ಸೋದರಿ ್ರತ್ರರಾದುದರಿಂದ ಅವರು ಕೋಣೆಯಲ್ಲಿ ಕುಳಿತುಕೊಳ್ಳುತ್ತಿದ್ದರು. ನಾನು ಸೀದಿಯ ಅಂಗಳದಲ್ಲಿ ಕುಳಿತು ಜ್ಞಾನಾರ್ಜನೆ ಮಾಡುವ ವಿಭಾಗದಲ್ಲಿದ್ದೆ" ಂತಹ ಹಲವಾರು ಘಟನೆಗಳಿವೆ.

ಆಯಿಶಾ(ರ)ರು ಉಪನ್ಯಾಸವನ್ನು ಆರಂಭಿಸಿ ಪ್ರವಾದಿ ವಚನಗಳನ್ನು ೇಳಿ ಸುಮ್ಮನಾಗುತ್ತಿದ್ದರು. ಶಿಷ್ಯರು ಪ್ರಶ್ನಿಸಿದರೆ ಅದಕ್ಕುತ್ತರಿಸುತ್ತಿದ್ದರು. ಒಂದು ೇಳೆ ಅವರು ಪ್ರಶ್ನಿಸದಿದ್ದರೆ ಶಿಷ್ಯರು ಸ್ವತಃ ಪ್ರಶ್ನೆಗಳನ್ನು ಕೇಳುವಂತೆ ಯಿಶಾ(ರ)ರು ಬೇರೆ ರೀತಿ-ಉಪಾಯಗಳನ್ನು ಹೂಡುತ್ತಿದ್ದರು. ಯಾರಾದರೂ ್ರಶ್ನೆ ಕೇಳುವಾಗ ಹಿಂಜರಿದರೆ ಅವರಿಗೆ ಪ್ರೋತ್ಸಾಹಿಸುತ್ತಿದ್ದರು. ಸಾಮಾನ್ಯವಾಗಿ ರಿಯರು ಹೆಚ್ಚು ಪ್ರಶ್ನೆಗಳನ್ನು ಕೇಳುತ್ತಿದ್ದರಾದರೂ, ಪ್ರಶ್ನೆಗಳನ್ನು ಕೇಳುವಾಗ ುಜುಗರ ಪಡುತ್ತಿದ್ದರು. ಆಗ ಆಯಿಶಾ(ರ)ರು, "ನಾನು ನಿಮ್ಮ ಾತೆಯಾಗಿದ್ದೇನೆ. ಪ್ರತಿಯೊಂದು ಸಮಸ್ಯೆಗಳನ್ನು ನೀವು ನನ್ನಲ್ಲಿ ಕೇಳಿ ರಿಹಾರ ಕಂಡುಕೊಳ್ಳಬಹುದು" ಎಂದು ಪ್ರೋತ್ಸಾಹಿಸುತ್ತಿದ್ದರು. ಸ್ತ್ರೀಯರ ಲವೊಂದು ಸಮಸ್ಯೆಗಳು ಎಲ್ಲರ ಮುಂದೆ ಬಂದಾಗ ಅಲ್ಲಿ ಪರಸ್ಪರ ಚರ್ಚೆಗಳು ನಡೆಯುತ್ತಿದ್ದವು. ಕೊನೆಗೆ ಆಯಿಶಾ(ರ)ರು ಆ ಚರ್ಚಾ ವಿಷಯದ ರಿಹಾರಕ್ಕಾಗಿ ಪ್ರವಾದಿ ವಚನಗಳು, ಅವುಗಳ ಸಂದರ್ಭ-ಸನ್ನಿವೇಶಗಳನ್ನು

ಹೇಳಿ ಸರಳ ವಿಧಾನದಲ್ಲಿ ಮನಮುಟ್ಟುವಂತೆ ಅರ್ಥೈಸುತ್ತಿದ್ದರು.

ಹ. ಅಬ್ದುಲ್ಲಾ ಬಿನ್ ಝುಬೈರ್(ರ)ರು ಆಯಿಶಾ(ರ)ರ ಆಪ್ತ ಸೋದರ ಪುತ್ರರಾಗಿದ್ದರು. ಅವರು ಹೆಚ್ಚಾಗಿ ಆಯಿಶಾ(ರ)ರ ಬಳಿ ಕುಳಿತುಕೊಳ್ಳುತ್ತಿದ್ದರು ಚಿಕ್ಕಮ್ಮ ಎಂದರೆ ಅವರಿಗೆ ಬಹಳ ಭಯ. ಆದುದರಿಂದ ಅಬ್ದುಲ್ಲಾ(ರ)ರು ಆಯಿಶಾ(ರ)ರ ಆಪ್ತ ಶಿಷ್ಯ ಹಾಗೂ ತರುಣರಾಗಿದ್ದ ಅಸ್ವದರ ಬಳಿ ಹೋಗಿ "ಚಿಕ್ಕಮ್ಮ ನಿಮಗೆ ತಿಳಿಸುವ ಅದೆಷ್ಟೋ ವಿಷಯಗಳನ್ನು ಇತರರಿಗೆ ತಿಳಿಸುವುದಿಲ್ಲ ಆದ್ದರಿಂದ ನೀವು ಈ ಎಲ್ಲಾ ವಿಷಯಗಳನ್ನು ನನಗೆ ಹೇಳುತ್ತೀರಿ" ಎಂದರು

ಆಯಿಶಾ(ರ)ರ ಕೋಣೆಯ ಹೊರಗೆ ಕುಳಿತು ಕೊಳ್ಳುತ್ತಿದ್ದ ಮೊದಲ ವಿಭಾಗದವರಲ್ಲಿ ಹಿರಿಯರು ಅಧಿಕ ಮಂದಿಯಿದ್ದರು. ಅವರು ಮಕ್ಕಳ ಮುಖಾಂತರ ತಮ್ಮ ಪ್ರಶ್ನೆಗಳನ್ನು ಕೇಳಿ ಪರಿಹಾರ ಕಂಡುಕೊಳ್ಳುತ್ತಿದ್ದರು.

ಹ. ಆಯಿಶಾ(ರ)ರು ಉಪನ್ಯಾಸ ನೀಡುವ ಸಂದರ್ಭದಲ್ಲಿ ನುಡಿಗಟ್ಟುಗಳನ್ನು ಬಳಸುತ್ತಿದ್ದರು. ಅವಸರ ಪಡದೆ, ಸಾವಧಾನವಾಗಿ ಕುರ್‌ಆನಿನ ರೀತಿಯಲ್ಲಿ ಸರಳ ಭಾಷೆಯಲ್ಲಿ ವಿವರಿಸುತ್ತಿದ್ದರು. ಬರೆದಿಟ್ಟುಕೊಳ್ಳಲು ಅನುಕೂಲವಾಗುವ ರೀತಿಯಲ್ಲಿ ಹೇಳುತ್ತಿದ್ದರು.

ಉಪನ್ಯಾಸ ನೀಡುವ ವೇಳೆ ಸರಿ ಹಾಗೂ ಸಮರ್ಪಕವಾದ ಮಾತಿನ ಕುರಿತು ಎಚ್ಚರ ವಹಿಸುತ್ತಿದ್ದರು. ಯಾರಾದರೂ ತಪ್ಪು ವಾಕ್ಯವನ್ನುಚ್ಚರಿಸಿದರೆ ಅವರನ್ನು ತಿದ್ದುತ್ತಿದ್ದರು. ಆಯಿಶಾ(ರ)ರ ಪೋಷಣೆಯಲ್ಲಿ ಬೆಳೆದ ಮಕ್ಕಳು ಹಾಗೂ ಆಯಿಶಾ(ರ)ರ ಸೇವೆ ಮಾಡಲು ಹೆಚ್ಚು ಅವಕಾಶ ದೊರೆತವರೇ ಹೆಚ್ಚಾಗಿ ಮುಂದೆ ದೊಡ್ಡ ದೊಡ್ಡ ಇಮಾಮರಾಗಿ ಹೊರ ಹೊಮ್ಮಿದರು.

ಒಂದು ಸ್ವಾರಸ್ಯಕರ ಘಟನೆ ನೋಡೋಣ. ಕಾಸಿಮ್ ಹಾಗೂ ಇಬ್ನು ಅಬೀ ಅತೀಕ್‌ರು ಆಯಿಶಾ(ರ)ರ ಸೋದರ ಪುತ್ರರು. ಇಬ್ನು ಅಬೀ ಅತೀಕ್‌ರು ಕುರೈಶ್ ಮಾತೆಯ ಪುತ್ರರು ಹಾಗೂ ಕಾಸಿಮ್ ದಾಸಿಯ ಪುತ್ರರಾಗಿದ್ದರು. ಕುರೈಶ್ ಮಾತೆಯ ಪುತ್ರರಾಗಿದ್ದ ಇಬ್ನು ಅಬೀ ಅತೀಕ್‌ರು ಅತ್ಯುತ್ತಮ ರೀತಿಯಲ್ಲಿ ಅರಬಿಯಲ್ಲಿ ಮಾತಾಡುತ್ತಿದ್ದರು, ಓದುತ್ತಿದ್ದರು. ಆದರೆ ಕಾಸಿಮ್‌ರ ಅರಬಿಯಲ್ಲಿ ಮಾತಾಡುವ ಶೈಲಿ ಅಷ್ಟೊಂದು ಉತ್ತಮವಾಗಿರಲಿಲ್ಲ. ಹ. ಆಯಿಶಾ(ರ)ರು ಕಾಸಿಮ್‌ರಿಗೆ, "ನೀವು ಇಬ್ನು ಅಬೀ ಅತೀಕ್‌ರಂತೆಯೇ ಮಾತನಾಡಿರಿ" ಎಂದು ಹುರಿದುಂಬಿಸುತ್ತಿದ್ದರು. ಆಯಿಶಾ(ರ)ರ ಹೆಚ್ಚಿನ ಗಮನದ ಪರಿಣಾಮ ಕಾಸಿಮ್‌ರು ತಮ್ಮ ಕಾಲದ ಇಮಾಮರಲ್ಲಿ ಸೂರ್ಯನಂತೆ ಪ್ರಕಾಶಿಸಿದರು. ಇವರೇ ಕಾಸಿಮ್ ಬಿನ್ ಮುಹಮ್ಮದ್ ಬಿನ್ ಅಬೂಬಕರ್. ಹ. ಉಮರ್ ಬಿನ್ ಅಬ್ದುಲ್ ಅಝೀಝ್‌ರು ಈ ರೀತಿ ಹೇಳುತ್ತಿದ್ದರು, "ಓ

ನನ್ನ ಗೋತ್ರದ ಜನರೇ! ಒಂದು ವೇಳೆ ನೀವು ನನಗೆ ತೊಂದರೆ ನೀಡಿದರೆ ನಾನು ಮದೀನಾಕ್ಕೆ ಹೊರಟು ಬಿಡುವೆನು. ಬಳಿಕ ಈ ಖಿಲಾಫತ್‌ಗೆ ಯೋಗ್ಯರಾದ ಓರ್ವ ವ್ಯಕ್ತಿ ಅಲ್ಲಿದ್ದಾರೆ. ಅವರಿಗೆ ಖಿಲಾಫತ್‌ನ ಆಡಳಿತ ವಹಿಸಿಬಿಡುವೆನು" ಎನ್ನುತ್ತಿದ್ದರು. ಇಲ್ಲಿ ಅಬ್ದುಲ್ ಅಝೀಝ್‌ರ ಸೂಚನೆಯು ಕಾಸಿಮ್‌ರ ಕಡೆಗಿತ್ತು.

ಹ. ಆಯಿಶಾ(ರ)ರಿಗೆ ಶಿಷ್ಯ ಉಪದೇಶಿಸುತ್ತಾ, ಉಪನ್ಯಾಸವನ್ನು ಪ್ರತೀದಿನ ನೀಡಬೇಡಿರಿ. ಮೂರ್‍ನಾಲ್ಕು ದಿನ ಬಿಟ್ಟು ನೀಡಿರಿ. ಸಂಕ್ಷಿಪ್ತವಾಗಿ ಉಪನ್ಯಾಸ ನೀಡಿರಿ. ವಿವರವಾದ ದೀರ್ಘ ಉಪನ್ಯಾಸಗಳಿಂದ ಜನರು ಆಸಕ್ತಿ ಕಳಕೊಳ್ಳಬಹುದು. ಸಮಯೋಚಿತವಾಗಿ ದುಆ ಮಾಡಿರಿ. ಪ್ರಾರ್ಥಿಸುವಾಗ ತೋರಿಕೆಯ ಭಾಷಾ ಶೈಲಿ ಬಳಸದಂತೆ ಎಚ್ಚರ ವಹಿಸಿರಿ." ಇಬ್ನು ಅಬೀ ಅಲ್ ಸಾಇಬ್ ಎಂಬೋರ್ವ ಸಹಾಬಿಯು ಅತ್ಯುತ್ತಮ ರೀತಿಯಲ್ಲಿ ಪ್ರತೀದಿನ ಉಪನ್ಯಾಸ ನೀಡುತ್ತಿದ್ದರು ಹಾಗೂ ಉಪನ್ಯಾಸದ ಬಳಿಕ ಪದಗಳನ್ನು ಸೇರಿಸಿ ದುಆ ಮಾಡುತ್ತಿದ್ದರು.

ಇದನ್ನು ಕಠೋರವಾಗಿ ತಡೆದ ಆಯಿಶಾ(ರ)ರು ಅವರನ್ನುದ್ದೇಶಿಸಿ, "ನಾನು ನಿಮಗೆ ಮೂರು ಉಪದೇಶಗಳನ್ನು ನೀಡುತ್ತೇನೆ. ಒಂದು ವೇಳೆ ನೀವು ಒಪ್ಪದಿದ್ದರೆ, ನಾನು ಬಲವಂತವಾಗಿ ಒಪ್ಪುವಂತೆ ಮಾಡುತ್ತೇನೆ" ಎಂದರು. ಅವರು ಭಯಭೀತರಾಗಿ ಹೇಳಿರಿ" ಎಂದರು. ಆಗ ಹ. ಆಯಿಶಾ(ರ)ರು, ಸಮಯೋಚಿತವಾಗಿ ದುಆ ಮಾಡಿರಿ. ಪ್ರವಾದಿವರ್ಯರು(ಸ) ಹಾಗೂ ಸಹಾಬಿವರ್ಯರು(ರ) ಇದೇ ವಿಧಾನವನ್ನು ಅಳವಡಿಸಿಕೊಂಡರು. ಎರಡನೇ ವಿಷಯ, ವಾರದಲ್ಲಿ ಒಮ್ಮೆ ಮಾತ್ರ ಉಪನ್ಯಾಸ ನೀಡಿರಿ. ಜನರು ನಿಮ್ಮ ಉಪನ್ಯಾಸ ಕೇಳುವ ಇಚ್ಛೆ ವ್ಯಕ್ತಪಡಿಸಿದರೆ ಉಪನ್ಯಾಸ ನೀಡಿರಿ. ಆಗ ಮಾತ್ರ ಉಪನ್ಯಾಸವು ಗಾಢ ಪ್ರಭಾವ ಬೀರುತ್ತದೆ. ಮೂರನೇ ವಿಷಯ, ಪ್ರವಚನವು ಸಂಕ್ಷಿಪ್ತವಾಗಿರಲಿ. ಜನರು ಗುಂಪಾಗಿ ಕುಳಿತಲ್ಲೆಲ್ಲಾ ಹೋಗಿ ಉಪನ್ಯಾಸ ನೀಡಲು ಆರಂಭಿಸಬೇಡಿ. ಹಾಗೆ ಮಾಡಿದರೆ ಜನರು ಬೇಸತ್ತು ಬಿಡುವರು."

ತನ್ನ ಮನೆಯನ್ನು ಹೊರತುಪಡಿಸಿ ಆಯಿಶಾ(ರ)ರು ಹಜ್ಜ್‌ನ ಸಂದರ್ಭ ಅರಫಾದ ದಿನ ಮುಝ್ದಲಿಫಾ ಹಾಗೂ ಮೀನಾದಲ್ಲಿ ತರಬೇತಿ ನೀಡುತ್ತಿದ್ದರು. ಆಯಿಶಾ(ರ)ರು ಪ್ರತೀ ವರ್ಷ ಹಜ್ಜ್ ನಿರ್ವಹಿಸುತ್ತಿದ್ದರು. ಹಜ್ಜ್‌ಗಾಗಿ ಜನರು ನಾಲ್ದೆಸೆಗಳಿಂದಲೂ ಮಕ್ಕಾಕ್ಕೆ ಆಗಮಿಸುತ್ತಿದ್ದರು. ಅದರಲ್ಲಿ ಸ್ತ್ರೀ–ಪುರುಷರೆಲ್ಲರೂ ಇರುತ್ತಿದ್ದರು. ಅದೇ ವೇಳೆ ಅಲ್ಲಿ ಆಯಿಶಾ(ರ)ರಿಗಾಗಿ ಡೇರೆ ಹಾಕಲಾಗುತ್ತಿತ್ತು.

ಜ್ಞಾನಾರ್ಜನೆಯು ಆಸಕ್ತಿ ಉಳ್ಳವರು ಡೇರೆಯನ್ನು ಸುತ್ತುವರಿದು
ಕುಳಿತುಕೊಳ್ಳುತ್ತಿದ್ದರು. ತಮ್ಮ ತಮ್ಮ ಸಮಸ್ಯೆಗಳನ್ನು ಮುಂದಿಡುತ್ತಿದ್ದರು
ಆಯಿಶಾ(ರ)ರು ಪರಿಹಾರ ಕಂಡುಕೊಳ್ಳುವ ವಿಧಾನವನ್ನು ಸೂಚಿಸುತ್ತಿದ್ದರು
ಅರ್ಥವಾಗದಿದ್ದರೆ ಅದನ್ನು ವಿವರವಾಗಿ ಹೇಳುತ್ತಿದ್ದರು. ಒಂದು ವೇಳೆ
ಜನಸಂದಣಿ ಬಹಳ ದೂರದವರಾಗಿದ್ದರೆ ತರುಣರನ್ನು ಅಲ್ಲಲ್ಲಿ ನಿಲ್ಲಿಸಲಾಗುತ್ತಿತ್ತು
ಆ ಬುದ್ಧಿವಂತ ತರುಣರು ಉಪನ್ಯಾಸವನ್ನು ಪುನರಾವರ್ತಿಸುತ್ತಿದ್ದರು. ಹೀಗೆ
ಸಾವಿರಾರು ಮುಸ್ಲಿಮರು ಉಪನ್ಯಾಸದ ಪ್ರಯೋಜನವನ್ನು ಪಡೆದುಕೊಂಡು
ಹಜ್ಜ್ ನಿರ್ವಹಿಸಿ ತಮ್ಮ ತಮ್ಮ ನಿವಾಸಗಳಿಗೆ ಹಿಂದಿರುಗುತ್ತಿದ್ದರು. ಹಿಂದಿರುಗುವ
ವೇಳೆ ಸ್ತ್ರೀಯರು ಆಯಿಶಾ(ರ)ರ ಅಕ್ಕ-ಪಕ್ಕವಿರುತ್ತಿದ್ದರು. ಪ್ರಯಾಣದುದ್ದಕ್ಕೂ
ಪ್ರಶ್ನೆಗಳನ್ನು ಕೇಳುತ್ತಿದ್ದರು. ಹ. ಆಯಿಶಾ(ರ)ರು ಕುರ್‌ಆನ್ ಹಾಗೂ
ಪ್ರವಾದಿ ವಚನದ ಆಧಾರದಲ್ಲಿ ಹಾಗೂ ಪ್ರವಾದಿವರ್ಯರಿಂದ(ಸ) ತಾನು
ಕಲಿತ ರೀತಿಯನ್ನು ಹೇಳುತ್ತಿದ್ದರು.

ಹಜ್ಜ್ ನಿರ್ವಹಣೆಯ ಸಂದರ್ಭದಲ್ಲಿ ಹ. ಆಯಿಶಾ(ರ)ರ ಜೊತೆ
ಇತರ ಪ್ರವಾದಿ ಪತ್ನಿಯರೂ(ರ) ಇರುತ್ತಿದ್ದರು. ಅಗತ್ಯ ಬಿದ್ದರೆ ಆಯಿಶಾ(ರ)ರು
ಹೆಚ್ಚಿನ ಮಾರ್ಗದರ್ಶನಕ್ಕಾಗಿ ಜನರನ್ನು ಉಮ್ಮು ಸಲಮ(ರ) ಮತ್ತು ಇತರ
ಪ್ರವಾದಿ ಪತ್ನಿಯರ(ರ) ಬಳಿ ಕಳುಹಿಸುತ್ತಿದ್ದರು.

## ಪ್ರಸಿದ್ಧ ಶಿಷ್ಯರು:

ಆಯಿಶಾ(ರ)ರ ಸಾವಿರಾರು ಶಿಷ್ಯರಲ್ಲಿ ಸ್ತ್ರೀ-ಪುರುಷರು, ಸಂಬಂಧಿಕರು
ಹಾಗೂ ಸೇವಕರು ಸೇರಿದ್ದಾರೆ. ಹಲವಾರು ಮಂದಿ ಸಹಾಬಿಗಳು(ರ)
ಆಯಿಶಾ(ರ)ರಿಂದ ತರಬೇತಿ ಪಡೆದಿದ್ದಾರೆ. ಅದೇ ರೀತಿ ಆ ಸಹಾಬಿಗಳ(ರ)
ಶಿಷ್ಯರೂ ನಿಯಮಿತವಾಗಿ ತರಬೇತಿ ಪಡೆದಿದ್ದಾರೆ. ಎಲ್ಲಾ ಶಿಷ್ಯರ ಹೆಸರು
ಅಭಿಪ್ರಾಯಗಳನ್ನು ಇಲ್ಲಿ ವಿಶ್ಲೇಷಿಸಲು ಸಾಧ್ಯವಿಲ್ಲ. ಆದರೆ ಕೆಲವೊಂದು
ಪ್ರಸಿದ್ಧ ಇಮಾಮರ, ವಿದ್ವಾಂಸರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸುತ್ತೇವೆ.

ಮೊಟ್ಟ ಮೊದಲಿಗೆ ಆಯಿಶಾ(ರ)ರಿಂದ ತರಬೇತಿ ಪಡೆದ ಹಿರಿಯ
ಸಹಾಬಿಗಳ ಹೆಸರುಗಳನ್ನು ನೋಡೋಣ:

- ಅಬೂ ಮೂಸಾ ಅಶ್‌ಅರೀ(ರ),
- ಅಬ್ದುಲ್ಲಾ ಬಿನ್ ಉಮರ್(ರ),
- ಅಬೂಹುರೈರಾ(ರ),

- ಅಮ್ರ್ ಬಿನ್ ಅಲ್ ಆಸ್(ರ),
- ಅಬ್ದುಲ್ಲಾ ಬಿನ್ ಅಬ್ಬಾಸ್(ರ),
- ಅಬ್ದುಲ್ಲಾ ಬಿನ್ ಝುಬೈರ್(ರ),
- ರಬೀಅ ಬಿನ್ ಅಮ್ರುಲ್ ಜರ್ಶೀ(ರ),
- ಝೈದ್ ಬಿನ್ ಖಾಲಿದ್ ಜುಹನಿ(ರ),
- ಹಾರಿಸ್ ಬಿನ್ ಅಬ್ದುಲ್ಲಾ(ರ),
- ಸಾಯಿಬ್ ಬಿನ್ ಯಝೀದ್(ರ).

ಗುಲಾಮರಲ್ಲಿ:

- ಹ. ಅಬೂ ಲುಬಾಬ,
- ಹ. ಅಬೂ ಯಹ್ಯಾ,
- ಹ. ಅಬೂ ಯೂಸುಫ್,
- ಹ. ಅಬ್ದುಲ್ಲಾ ಬಿನ್ ಝೈದ್.
- ಹ. ಅಬೂ ಯೂನುಸ್(ರ),
- ಹ. ಝುಕ್ವಾನ್,
- ಹ. ಉಮರ್,
- ಹ. ಇಬ್ನು ಫರ್ರೂ, ಹ. ಅಬೂಮದ್ಲ,

**ತರಬೇತಿ ಪಡೆದ ಮನೆಯ ಹಾಗೂ ಕುಟುಂಬದ ಯುವಕ-ಯುವತಿಯರು:**

- ಹ. ಉಮ್ಮು ಕುಲ್ಸೂಮ್ ಬಿಂತಿ ಅಬೂಬಕರ್ (ಸಹೋದರಿ)
- ಹ. ಔಫ್ ಹಾರಿಸ್ (ಸ್ತನಪಾನ ಸಹೋದರ)
- ಹ. ಕಾಸಿಮ್ ಬಿನ್ ಮುಹಮ್ಮದ್
- ಹ. ಅಬ್ದುಲ್ಲಾ ಬಿನ್ ಮುಹಮ್ಮದ್ (ಸಹೋದರ ಪುತ್ರರು)
- ಹ. ಹಫ್ಸಾ, ಹ. ಅಸ್ಮಾ (ಸಹೋದರ ಪುತ್ರಿಯರು, ಅಂದರೆ ಅಬ್ದುರ್ರಹ್ಮಾನ್‌ರ ಪುತ್ರಿಯರು)
- ಹ. ಅಬ್ದುರ್ರಹ್ಮಾನ್ ಬಿನ್ ಅಬೂಬಕರ್(ಸಹೋದರ)ರ ಮೊಮ್ಮಗ ಅಬ್ದುಲ್ಲಾ ಬಿನ್ ಅತೀಕ್.
- ಹ. ಅಬ್ದುಲ್ಲಾ ಬಿನ್ ಝುಬೈರ್(ರ) ಅರ್‌ವಾ ಬಿನ್ ಝುಬೈರ್ (ಸೋದರಿ ಪುತ್ರರು)
- ಹ. ಉಬಾದ ಬಿನ್ ಹಬೀಬ್
- ಹ. ಹಮ್ಮಾದ್ ಬಿನ್ ಹಮ್‌ಝಾ (ಸೋದರಿ ಪುತ್ರನ ಮೊಮ್ಮಕ್ಕಳು)

ಮತ್ತಿತರರು ಸೇರಿದ್ದಾರೆ.

## ಕೆಲವು ಮಂದಿ ಶಿಷ್ಯರ ಸಂಕ್ಷಿಪ್ತ ಪರಿಚಯ:

✦ ಹ. ಅರ್‌ವಾ(ರ) ಪ್ರಸಿದ್ಧ ಸಹಾಬಿ ಝುಬೈರ್(ರ)[ಸ್ವರ್ಗ ಸುವಾರ್ತೆ ಗಳಿಸಿದವರಲ್ಲೋರ್ವರು]ರ ಪುತ್ರ ಹಾಗೂ ಪ್ರಸಿದ್ಧ ವಿದ್ವಾಂಸರು. ತಾಯಿ ಅಸ್ಮಾ ಬಿಂತಿ ಅಬೂಬಕರ್(ರ) [ದಾತುನ್ನಿತ್ವಾಕೈನ್ (ಎರಡು ಪಟ್ಟಿಯವಳು) ಬಿರುದಾಂಕಿತ ಸಹಾಬಿ ಮಹಿಳೆ, ಪ್ರವಾದಿವರ್ಯರ(ಸ) ಆಪ್ತರು] ಹ. ಅರ್‌ವಾರು ಚಿಕ್ಕಮ್ಮನ [ಆಯಿಶಾ(ರ)] ಆಪ್ತರೂ, ಬಹಳ ಪ್ರೀತಿಪಾತ್ರರೂ ಆಗಿದ್ದರು. ಬಾಲ್ಯದಿಂದಲೇ ಅರ್‌ವಾರು ಚಿಕ್ಕಮ್ಮನ ಪಾಲನೆ–ಪೋಷಣೆಯಲ್ಲಿ ಬೆಳೆದಿದ್ದರು. ಹ. ಆಯಿಶಾ(ರ)ರ ಶಿಷ್ಯರಲ್ಲಿ ಫತ್ವಾ ನೀಡುವ ಹಕ್ಕನ್ನು ಪಡೆದಿದ್ದವರಲ್ಲಿ ಅರ್‌ವಾರ ಸ್ಥಾನಮಾನವು ಅತ್ಯುನ್ನತವಾಗಿದೆ. ಪ್ರಖ್ಯಾತ ಇಮಾಮರಾದ ಝುಹ್ರೀ(ರ)ರು ಹ. ಅರ್‌ವಾ(ರ)ರವರ ಶಿಷ್ಯರಾಗಿದ್ದರು.

ಒಂದು ಪ್ರಸಿದ್ಧ ಘಟನೆ. ಅರ್‌ವಾರ ಕಾಲದಲ್ಲಿ ವಿಷ ಹರಡಿದ ಪರಿಣಾಮ ಕಾಲು ತುಂಡರಿಸಲು ಹೇಳಲಾಯಿತು. ಅದಕ್ಕಾಗಿ ಶಸ್ತ್ರ ವೈದ್ಯರ ಬಳಿ ತೆರಳಿದರು. ಅವರು ಪ್ರಜ್ಞಾಹೀನಗೊಳಿಸಲು ಔಷಧ ನೀಡಲು ಮುಂದಾದಾಗ ಅರ್‌ವಾರು ನಿರಾಕರಿಸಿ, ಕುರ್‌ಆನಿನ ಪಠಣದಲ್ಲಿ ತಲ್ಲೀನರಾದರು. ಕಾಲನ್ನು ಕತ್ತರಿಸಲಾಯಿತು. ಅರ್‌ವಾರು ಉಫ್ ಎಂದೂ ಹೇಳಲಿಲ್ಲ.

ಹ. ಆಯಿಶಾ(ರ)ರು ಹೇಳಿರುವ ಪ್ರವಾದಿ ವಚನಗಳನ್ನು ಅರ್‌ವಾರು ವರದಿ ಮಾಡಿದ್ದಾರೆ. ಈ ಪ್ರವಾದಿ ವಚನಗಳು ಅಧಿಕೃತ ಎನ್ನಲಾಗುತ್ತದೆ.

✦ ಹ. ಅಬ್ದುಲ್ಲಾ ಬಿನ್ ಝುಬೈರ್(ರ): ಅಬ್ದುಲ್ಲಾ(ರ)ರು ಆಯಿಶಾ(ರ)ರ ಸೋದರಿ ಅಸ್ಮಾ(ರ)ರ ಪುತ್ರರಾಗಿದ್ದರು. ಇವರು(ರ) ತಮ್ಮ ಬುದ್ಧಿವಂತಿಕೆ ಶೌರ್ಯಕ್ಕೆ ಪ್ರಖ್ಯಾತರಾಗಿದ್ದರು. ಅವರ ಕುರಿತು ಈ ರೀತಿ ಹೇಳಲಾಗುತ್ತದೆ, "ಉಪನ್ಯಾಸ, ತರಬೇತಿ ಆರಂಭವಾದೊಡನೆ ಅಬ್ದುಲ್ಲಾ(ರ)ರು ಎಲ್ಲದಕ್ಕಿಂತಲೂ ಮುಂದೆ ಸಾಗಿ ಬಿಡುತ್ತಿದ್ದರು." ಯಝೀದ್‌ಗೆ ಸಮಾನಾಂತರವಾಗಿ ಆಡಳಿತ ಸ್ಥಾಪಿಸಿದರು. ಹಜ್ಜಾಜ್ ಬಿನ್ ಯೂಸುಫ್‌ನ ಬೃಹತ್ ಸೈನ್ಯದ ವಿರುದ್ಧ ಹೋರಾಡಿ ಹುತಾತ್ಮರಾದರು.

✦ ಹ. ಕಾಸಿಮ್(ರ): ಹ. ಕಾಸಿಮ್‌ರು ಅಬೂಬಕರ್(ರ)ರ ಮೊಮ್ಮಗ ಅಂದರೆ ಹ. ಆಯಿಶಾ(ರ)ರ ಸೋದರ ಪುತ್ರ, ಬಾಲ್ಯದಿಂದಲೇ ಅತ್ತೆಯ ಪಾಲನೆ–ಪೋಷಣೆಯಲ್ಲಿ ಬೆಳೆದ ಕಾಸಿಮ್‌ರು ಸಂಪೂರ್ಣ ತರಬೇತಿಯನ್ನು ಪಡೆದಿದ್ದರು. ಮುಂದೆ ಮದೀನಾದ ಇಮಾಮ್ ಆದರು. ಕರ್ಮಶಾಸ್ತ್ರದಲ್ಲಿ ಅತ್ಯುತ್ತಮ ಹಿಡಿದ ಸಾಧಿಸಿದ್ದರು. ಪ್ರವಾದಿ ವಚನಗಳನ್ನು ಹೇಳುವಾಗ ಬಹಳ ಜಾಗರೂಕತೆಯನ್ನು ಪಾಲಿಸುತ್ತಿದ್ದರು. ಉಮರ್ ಬಿನ್

ಅಬ್ದುಲ್ಲ್ ಅಝ್‌ಹರೀರ್‌(ರ)ರು ಕಾಸಿಮ್‌ರಿಗೆ ಬಹಳ ಪ್ರಾಧಾನ್ಯತೆ ನೀಡುತ್ತಿದ್ದರು.

✦ ಹ. ಅಬೂ ಸಲ್ಮ(ರ): ಸ್ವರ್ಗದ ಸುವಾರ್ತೆ ಗಳಿಸಿದ್ದ ಪ್ರಸಿದ್ಧ ಸಹಾಬಿ ಅಬ್ದುರ್ರಹ್ಮಾನ್ ಬಿನ್ ಔಫ್(ರ)ರ ಪುತ್ರರಾಗಿದ್ದಾರೆ. ಬಾಲ್ಯದಲ್ಲೇ ಅನಾಥರಾದ ಅಬೂಸಲಮರು ಆಯಿಶಾ(ರ)ರ ಪಾಲನೆ-ಪೋಷಣೆಯಲ್ಲಿ ಬೆಳೆದರು. ಅತ್ಯುತ್ತಮ ತರಬೇತಿ ಪಡೆದರು. ಅರ್‌ವಾರ ಜೊತೆಗೆ ಬೆಳೆದರು. ದೊಡ್ಡವರಾಗಿ ಪ್ರಸಿದ್ಧ ಇಮಾಮರ ಗುರುವಾದರು.

✦ ಹ. ಮಸ್‌ರೂಕ್(ರ): ಕೂಫಾ ಮೂಲದ ಮಸ್‌ರೂಕರು ಬಾಲ್ಯದಿಂದಲೇ ಆಯಿಶಾ(ರ)ರ ಪಾಲನೆ-ಪೋಷಣೆಯಲ್ಲಿ ಬೆಳೆದರು. ಆಯಿಶಾ(ರ)ರು ಸ್ವಂತ ಪುತ್ರನಂತೆ ಮಸ್‌ರೂಕ್‌ರನ್ನು ಪ್ರೀತಿಸುತ್ತಿದ್ದರು. ಅವರು(ರ) ಬಹಳ ಬುದ್ಧಿವಂತರಾಗಿದ್ದರು. ಆಯಿಶಾ(ರ)ರು ತನ್ನನ್ನು ಪುತ್ರನೆಂದು ಕರೆಯುತ್ತಾರೆ ಎಂಬ ಹೆಮ್ಮೆ ಅವರಿಗಿತ್ತು.

ಇದಕ್ಕೆ ಸಂಬಂಧಿಸಿದಂತೆ ಒಂದು ಘಟನೆ ನೋಡೋಣ:

“ಒಮ್ಮೆ ಹ. ಆಯಿಶಾ(ರ)ರು ತಂಪು ಪಾನೀಯ ಮಾಡಿಸಿ, “ನನ್ನ ಮಗನಿಗೂ ಪಾನೀಯ ತನ್ನಿರಿ” ಎಂದರು. ವ್ಯಾಸಂಗ ಮುಗಿಸಿದ ಬಳಿಕ ಕೂಫಾದ ಖಾಝಿಯಾದರು. ಇಡೀ ಇರಾಕ್‌ನಲ್ಲಿ ಅವರಿಗೆ ಸರಿಸಾಟಿ ಯಾರೂ ಇರಲಿಲ್ಲ.

## ಹ. ಅಮ್ರ ಬಿಂತಿ ಅಬ್ದುರ್ರಹ್ಮಾನ್ ಅನ್ಸಾರಿ:

ಪ್ರಸಿದ್ಧ ಅನ್ಸಾರಿ ಸಹಾಬಿಯಾದ ಹ. ಅಸದ್ ಬಿನ್ ಝುರಾರ(ರ)ರ ಮೊಮ್ಮಗಳು. ಬಾಲ್ಯದಿಂದಲೇ ಆಯಿಶಾ(ರ)ರ ಆರೈಕೆಯಲ್ಲಿ ಬೆಳೆದ ಅಮ್ರರು ಬಹಳ ಬುದ್ಧಿವಂತರು ಹಾಗೂ ಅವರ ಸ್ಮರಣಶಕ್ತಿಯು ಅಗಾಧವಾಗಿತ್ತು. ಆಯಿಶಾ(ರ)ರು ವರದಿ ಮಾಡಿದ ಪ್ರತಿಯೊಂದು ಪ್ರವಾದಿ ವಚನವನ್ನೂ ಅಮ್ರರವರು ಒಂದು ಶಬ್ದವೂ ಬಿಡದೆ ಇತರರ ಮುಂದಿರಿಸುತ್ತಿದ್ದರು. ಅದೇ ರೀತಿ ಹ. ಆಯಿಶಾ(ರ)ರು ಅಮ್ರರ ಮೇಲೆ ವಿಶೇಷ ಗಮನಹರಿಸಿ ತರಬೇತಿ ನೀಡುತ್ತಿದ್ದರು. ಅಮ್ರರಿಗೆ ವಿದ್ಯೆ ಕಲಿಯುವ ಸದವಕಾಶ ಲಭಿಸಿತ್ತು. ಅಮ್ರರು ಆಯಿಶಾ(ರ)ರೊಂದಿಗೆ ಅವರ(ರ) ಕೋಣೆಯಲ್ಲಿ ಕುಳಿತು ವಿದ್ಯೆ ಕಲಿಯುತ್ತಿದ್ದರು. ದೂರ ದೂರದಿಂದ ಆಗಮಿಸುತ್ತಿದ್ದ ಜನರು ಅಮ್ರರನ್ನು ಮಧ್ಯಸ್ಥಿಕೆದಾರರನ್ನಾಗಿ ಮಾಡಿದರು. ಅವರ ಮೂಲಕ ಜನರು ತಮ್ಮ ಪ್ರಶ್ನೆಗಳನ್ನು ಆಯಿಶಾ(ರ)ರ ಮುಂದಿರಿಸುತ್ತಿದ್ದರು. ಅಮ್ರರು ಆ ಪ್ರಶ್ನೆಗಳ ಉತ್ತರಗಳನ್ನು ಅದೇ ರೀತಿಯಲ್ಲಿ ಜನರಿಗೆ ತಿಳಿಸುತ್ತಿದ್ದರು. ಇಮಾಮ್ ಬುಖಾರಿಯವರು ಹೇಳುತ್ತಾರೆ, “ಅಮ್ರರು ಆಯಿಶಾ(ರ)ರ ಖಾಸಗಿ ಕಾರ್ಯದರ್ಶಿಯಾಗಿದ್ದರು.”

ಅವರ ಬುದ್ಧಿವಂತಿಕೆ ಹಾಗೂ ಅಪಾರ ಸ್ಮರಣಶಕ್ತಿಯನ್ನು ಕಂಡು ಜನರ ಅಮ್ರರನ್ನು ಬಹಳ ಆದರಿಸುತ್ತಿದ್ದರು ಹಾಗೂ ಉಪಹಾರಗಳನ್ನು ನೀಡುತ್ತಿದ್ದರು ಈ ಎಲ್ಲಾ ಉಪಹಾರಗಳನ್ನು ಅಮ್ರರು ಆಯಿಶಾ(ರ)ರ ಬಳಿಗೆ ಕೊಂಡ ಹೋಗುತ್ತಿದ್ದರು. ಅಮ್ರರು ಹ. ಆಯಿಶಾ(ರ) ರಿಂದ ವರದಿ ಮಾಡಿ ಪ್ರವಾದಿ ವಚನಗಳನ್ನು ಅಧಿಕೃತ ಎನ್ನಲಾಗುತ್ತದೆ. ಇದಕ್ಕೆ ಸಂಬಂಧಿಸಿದಂ ಕೇಲವು ಸಾಕ್ಷ್ಯಗಳು:

✦ ಇಬ್ನು ಅಲ್ ಮದ್‌ಯನಿ ಹೇಳುತ್ತಾರೆ, "ಅಮ್ರರು ಹ. ಆಯಿಶಾ(ರ)ರಿಂ ವರದಿ ಮಾಡಿದ ಪ್ರವಾದಿ ವಚನಗಳನ್ನು ಅಧಿಕೃತ ಎಂದು ತಿಳಿಯಿರಿ."

✦ ಇಮಾಮ್ ಇಬ್ನು ಹಿಬ್ಬಾನ್‌ರು ಹೇಳುತ್ತಾರೆ, "ಅಮ್ರರು ಹ. ಆಯಿಶಾ(ರ) ಹದೀಸ್‌ಗಳನ್ನು ಇತರರಿಗಿಂತ ಅತ್ಯುತ್ತಮವಾಗಿ ಅರಿತವರಾಗಿದ್ದಾರೆ."

✦ ಹ. ಸುಫ್‌ಯಾನ್ ಹೇಳುತ್ತಾರೆ, "ಅಮ್ರ, ಅರ್‌ವಾ ಹಾಗೂ ಕಾಸಿಮ್‌ರು ವರದಿ ಮಾಡಿದ ಹದೀಸ್‌ಗಳು ಹ. ಆಯಿಶಾ(ರ)ರ ಅಧಿಕೃತ ಹದೀಸ್‌ಗಳಾಗಿವೆ." ಪ್ರಸಿದ್ಧ ಇಮಾಮರಾದ ಅಬೂಬಕರ್ ಬಿನ್ ಮುಹಮ್ಮದ ಬಿನ್ ಅಮ್ರ್ ಬಿನ್ ಹಝ್ಮ್‌ರು ಹ. ಅಮ್ರರ ಸಹೋದರ ಪುತ್ರರಾಗಿದ್ದಾರೆ ಅವರು ಮನನ ಮಾಡಿದ ಹದೀಸ್‌ಗಳನ್ನು ಅತ್ತೆಯ ಮುಂದೆ ಹೇಳುತ್ತಿದ್ದರು ಅವರು ಅದರಲ್ಲಿ ತಪ್ಪುಗಳಿದ್ದರೆ ತಿದ್ದುತ್ತಿದ್ದರು. ಈ ತಿದ್ದುಪಡಿಯ ಅಬೂಬಕರ್‌ರಿಗೆ ಬಹಳ ಪ್ರಯೋಜನಕಾರಿಯಾಗಿ ಸಾಬೀತಾಯಿತು. ಅವರು ತಮ್ಮ ಕಾಲದ ನೂತನ ವಿದ್ವಾಂಸರಾದರು. ಖಲೀಫ ಉಮರ್ ಬಿನ ಅಬ್ದುಲ್ ಅಝೀಝ್‌ರು ಅವರನ್ನು ಮದೀನಾದ ಖಾಝಿಯಾಗಿ ಆಯ್ ಮಾಡಿದರು ಹಾಗೂ ಅಮ್ರರು ವರದಿ ಮಾಡಿರುವ ಹದೀಸ್‌ಗಳನ್ನು ನಕಲು ಮಾಡಿ ಕಳಿಸುವಂತೆ ಆದೇಶಿಸಿದರು.

✦ ಇಮಾಮ್ ಝುಹ್ರಿ(ರ) ಹೇಳುತ್ತಾರೆ: ನಾನು ವಿದ್ಯೆ ಕಲಿಯಲು ಹೊರಟು ನಿಂತಾಗ ಓರ್ವ ಹದೀಸ್ ಪಂಡಿತರು ನನ್ನನ್ನುದ್ದೇಶಿಸಿ ಹೇಳಿದರು. "ಒಂದು ವೇಳೆ ನೀವು ವಿದ್ಯೆ ಕಲಿಯಲು ಬಯಸುತ್ತೀರಾದರೆ, ಹ. ಆಯಿಶಾ(ರ) ಪಾಲನೆ-ಪೋಷಣೆ ಮಾಡಿ ತರಬೇತಿ ನೀಡಿದ ಶಿಷ್ಯೆಯಾದ ಹ. ಅಮ್ರ ಮೇಲೆ ವಿಶೇಷ ಗಮನಹರಿಸಿ." ಎಂದರು. ನಾನು ಹ. ಅಮ್ರರ ಬಳಿ ತೆರಳಿದೆ. ನಾನು ಅವರಲ್ಲಿ ವಿದ್ಯೆ ಕಲಿಯಲು ಆರಂಭಿಸಿದಾಗ, "ಅವರು ವಿದ್ಯೆಯ ಆಳವಾದ ಸಮುದ್ರ" ಎಂದು ನನಗೆ ಭಾಸವಾಯಿತು.

✦ ಹ. ಸಫಿಯಾ ಬಿಂತಿ ಶೈಬಾ: ಪ್ರವಾದಿ ಮುಹಮ್ಮದ್(ಸ)ರ ಕಾಲದಲ್ಲಿ ಕಅಬಾದ ಕೀಲಿಕೈಯು ಹ. ಶೈಬಾರ ಬಳಿಯಿತ್ತು. ಅದೇ ಪ್ರಸಿದ್ಧ

ಸಹಾಬಿಯ ಪುತ್ರಿ ಹ. ಸಫಿಯಾ ಆಗಿದ್ದಾರೆ. ತಮ್ಮ ಸ್ಮರಣಶಕ್ತಿಯ ಕಾರಣದಿಂದ ಸಫಿಯಾರು ಆಯಿಶಾ(ರ)ರ ಪ್ರೀತಿಯ ಹಾಗೂ ವಿಶೇಷ ಸ್ಥಾನಮಾನ ಹೊಂದಿದ್ದ ಶಿಷ್ಯೆಯಾಗಿದ್ದರು.

ಅಬೂದಾವೂದ್‌ರು ಸಫಿಯಾರ ಕುರಿತು ಈ ರೀತಿ ಹೇಳುತ್ತಾರೆ, "ನಾನು ಅದೀಯವರ ಜೊತೆ ಹಜ್ಜ್ ನಿರ್ವಹಿಸಲು ಹೋದರೆ. ನಾವೀರ್ವರು ಮಕ್ಕಾ ತಲುಪಿದಾಗ ಅದೀಯವರು ನನ್ನನ್ನು ಸಫಿಯಾರ ಬಳಿ ಹೋಗುವಂತೆ ಸೂಚಿಸಿದರು. ನಾನು ಸಫಿಯಾರ ಬಳಿ ತೆರಳಿದಾಗ ಅವರಿಂದ ಆಯಿಶಾ(ರ) ಹದೀಸ್‌ಗಳನ್ನು ಕೇಳಿದೆ. ಅವರು ಆ ಹದೀಸ್‌ಗಳ ಒಂದೊಂದು ಶಬ್ದವನ್ನು ನೆನಪಿಟ್ಟಿದ್ದರು."

✦ ಆಯಿಶಾ ಬಿಂತಿ ತಲ್ಹಾ(ರ): ಪ್ರಸಿದ್ಧ ಸಹಾಬಿ ತಲ್ಹಾ(ರ)ರ ಪುತ್ರಿ ಹಾಗೂ ಹ. ಅಬೂಬಕರ್ ಸಿದ್ದೀಕ್(ರ)ರ ಮೊಮ್ಮಗಳಾಗಿದ್ದಾರೆ. ಹೀಗೆ ಸಂಬಂಧದಲ್ಲಿ ಅವರು ಹ. ಆಯಿಶಾ(ರ)ರ ಸಹೋದರಿ ಪುತ್ರಿಯಾಗುತ್ತಾರೆ. ಚಿಕ್ಕಮ್ಮನ ಮಡಿಲಲ್ಲಿ ಬೆಳೆದ ದೊಡ್ಡ ವಿದ್ವಾಂಸೆಯಾಗಿದ್ದರು. ಅವರು ಹದೀಸ್‌ನ ಜ್ಞಾನದ ಜೊತೆಗೆ, ಜೀವನದ ಶಿಷ್ಟಾಚಾರಗಳನ್ನೂ ಚಿಕ್ಕಮ್ಮನಿಂದಲೇ ಕಲಿತಿದ್ದರು.

ಇಮಾಮ್ ಅಬೂಝುರ್‌ಅ ಮಶ್ಕಿಯವರು ಹೇಳುತ್ತಾರೆ, "ನಾವು ಅವರ ಶಿಷ್ಟಾಚಾರ ಹಾಗೂ ಧರ್ಮನಿಷ್ಠೆಯನ್ನು ನೋಡಿಯೇ ಅವರಿಂದ ಹದೀಸ್‌ಗಳನ್ನು ಕಲಿತೆವು."

ಅವರ ಧರ್ಮನಿಷ್ಠೆಯ ಒಂದು ಸಾಕ್ಷ್ಯವನ್ನು ನೋಡೋಣ, "ಒಮ್ಮೆ ಆಯಿಶಾರು ರೋಗಪೀಡಿತರಾದರು. ವೈದ್ಯರು ನಬೀಝ್ (ಖರ್ಜೂರ ಹಾಗೂ ಜವೆ ಗೋಧಿಯಿಂದ ತಯಾರಾಗುವ ಒಂದು ರೀತಿಯ ಅಮಲು ಪದಾರ್ಥ) ನೀಡಲು ಮುಂದಾದಾಗ ಆಯಿಶಾ(ರ)ರು ನಬೀಝ್‌ನ ಲೋಟವನ್ನು ಕೈಯಲ್ಲಿ ಹಿಡಿದುಕೊಂಡು ಪ್ರಾರ್ಥಿಸಿದರು. ಬಳಿಕ ಈ ರೀತಿ ಹೇಳಿದರು, ನನ್ನ ಚಿಕ್ಕಮ್ಮ ಹ. ಆಯಿಶಾ(ರ)ರು ವರದಿ ಮಾಡಿದ್ದಾರೆ, ಪ್ರವಾದಿವರ್ಯರು(ಸ) ನಬೀಝ್ ಕುಡಿಯುವುದರಿಂದ ತಡೆದಿದ್ದಾರೆ. ಇದು ಹೇಳುತ್ತಿದ್ದಂತೆ ಅವರ ಕೈಯಿಂದ ಲೋಟವು ಕೆಳಗೆ ಬಿದ್ದು ಬಿಟ್ಟಿತು. ಬಳಿಕ ನಬೀಝ್ ಇಲ್ಲದೇ ಅವರು ಗುಣಮುಖರಾದರು.

ಶಿಷ್ಯರ ಪಟ್ಟಿಯು ಇನ್ನೂ ಉದ್ದವಿದೆ. ಆದುದರಿಂದ ಇಲ್ಲಿ ಆಯಿಶಾ(ರ)ರಿಂದ ವಿದ್ಯೆ ಕಲಿತು ಪ್ರಸಿದ್ಧರಾದ ಹಿರಿಯ ಮಹಿಳೆಯರ ಹೆಸರುಗಳನ್ನು ಮಾತ್ರ ಉಲ್ಲೇಖಿಸಲಾಗಿದೆ. ಇಲ್ಲಿ ಪುರುಷರ ಹೆಸರುಗಳನ್ನು ಬಿಟ್ಟು ಬಿಡುತ್ತೇವೆ. ಆಯಿಶಾ(ರ)ರಿಂದ ವಿದ್ಯೆ ಕಲಿತ ಪುರುಷರ ಸಂಖ್ಯೆ ಸ್ತ್ರೀಯರಿಗಿಂತಲೂ ಅಧಿಕವಾಗಿದೆ.

**ಮಹಿಳಾ ಶಿಷ್ಯರ ಹೆಸರುಗಳು:**

- ಕುಲ್ಸೂಮ್ (ರ)
- ಖೀಯರಹ್ (ಹ. ಹಸನ್ ಬಸ್ರೀ(ರ)ರವರ ತಾಯಿ)
- ಅಸ್ಮಾ ಬಿಂತಿ ಅಬ್ದುರ್ರಹ್ಮಾನ್
- ಬರೀರ (ಹ. ಆಯಿಶಾ(ರ)ರ ದಾಸಿ)
- ಬನಾನ ಬಿಂತಿ ಯಝೀದ್
- ಬನಾನ (ಅಬ್ದುರ್ರಹ್ಮಾನ್‌ರ ದಾಸಿ)
- ಬಹೀನ(ರ)
- ಜಸ್ರ
- ಹಫ್ಸಾ ಬಿಂತಿ ಅಬ್ದುರ್ರಹ್ಮಾನ್
- ಬಿತಾಲ ಬಿಂತಿ ಯಝೀದ್
- ಝುಫ್ರನ ಅಮ್ರ ಬಿಂತಿ ಕೈಸ್
- ಶಮ್‌ಸಿಯ(ರ)
- ಸಾಯಿಬ ಸಲ್ಮಾ
- ಸುಮಯ್ಯ(ಬಸೀಯ)
- ಝೈಬನ್ ಬಿಂತಿ ಅಬೂಸಲಮ
- ಝೈನಬ್ ಬಿಂತಿ ನಸ್ರ್
- ಝೈನಬ್ ಬಿಂತಿ ಮುಹಮ್ಮದ್
- ರಮೀಸ
- ಉಮ್ಮು ಬಿಲಾಲ್
- ಉಮ್ಮು ಅಬ್ದುಲ್ಲಾ
- ಉಮ್ಮು ಮುಹಮ್ಮದ್
- ಉಮ್ಮು ಕುಲ್ಸುಮ್ (ಲೈಸಿಯ)
- ಉಮ್ಮು ಕುಲ್ಸೂಮ್ ಬಿಂತಿ ಸುಮಾಮ
- ಉಮ್ಮು ಕುಲ್ಸೂಮ್ ಬಿಂತಿ ಅಬೂಬಕರ್ (ಸಹೋದರಿ)
- ಉಮ್ಮು ಅಲ್‌ಕಮ
- ಉಮ್ಮು ಆಸಿಮ್
- ಉಮ್ಮು ಸಈದ
- ಉಮ್ಮು ಸಾಲಿಮ್
- ಉಮ್ಮು ಝುರ್ರ (ಆಯಿಶಾ(ರ) ಸೇವಕಿ)
- ಉಮ್ಮು ದರ್ದ (ಇವರು ಅಬೂದರ್ದಾರ ಪತ್ನಿಯಲ್ಲ)

- ಉಮ್ಮುದರ್ದ್ (ಇನ್ನೋರ್ವ ಹಿರಿಯ ಮಹಿಳೆಯಾಗಿದ್ದರು)
- ಉಮ್ಮು ಹಮೀದ
- ಫಾತಿಮಾ ಬಿಂತಿ ಅಬೂ ಜೈಶ್
- ಕರೀಮ ಬಿಂತಿ ಹುಮಾಮ್
- ಕಮೀರ್ ಬಿಂತಿ ಉಮೈರ್ (ಕೂಫಾದವರು)
- ಮುಅರ್ಝ ಮೈಮೂನಾ ಬಿಂತಿ ಅಬ್ದುರ್ರಹ್ಮಾನ್ (ಸಹೋದರ ಪುತ್ರಿ)
- ಹನೀದ್ ಹಿಂದ ಯಾನೆ ಕುನಿಉಮ್ಮುಬಕರ್
- ಕುನಿ ಉಮ್ಮು ಹಜ್‌ದರ್.

**ಹ. ಆಯಿಶಾ(ರ) ಫತ್ವಾಗಳು:**

ಮುಫ್ತಿಯಾಗುವುದು ಶಿಕ್ಷಣದ ಅತ್ಯುನ್ನತ ಸ್ಥಾನವಾಗಿದೆ. ಈ ಶಿಕ್ಷಣದ ಮೇಲೆ ವಿದ್ವಾಂಸರು, ಇಮಾಮರು ಹಾಗೂ ಸಾಮಾನ್ಯ ಜನರು ಪೂರ್ಣ ವಿಶ್ವಾಸವನ್ನಿರಿಸುತ್ತಾರೆ. ಹ. ಆಯಿಶಾ(ರ)ರ ಜ್ಞಾನಸಿದ್ಧಿಯ ಬಗ್ಗೆ ನಾವು ಈ ಮೊದಲು ಉಲ್ಲೇಖಿಸಿದ್ದೇವೆ. ಆದರೆ ಅದು ಧಾನ್ಯದ ರಾಶಿಯಿಂದ ಒಂದು ಹಿಡಿ ಧಾನ್ಯ ತೆಗೆದಷ್ಟು ಮಾತ್ರ. ನಮಗಂತೂ ಅವರ(ರ) ಜ್ಞಾನಸಿದ್ಧಿಯಲ್ಲಿ ಒಂದು ಹಿಡಿಯಷ್ಟೂ ಉಲ್ಲೇಖಿಸಲು ಸಾಧ್ಯವಾಗಲಿಲ್ಲ. ಅರಬಿ ಭಾಷೆ, ವಾಕ್ಚಾತುರ್ಯ ಹಾಗೂ ವಿಮರ್ಶೆಗೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಇಲ್ಲಿ ಕೈಬಿಡಲಾಗಿದೆ.

ಆಯಿಶಾ(ರ)ರು ಜ್ಞಾನಸಿದ್ಧಿಯಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದಿದ್ದರು. ಅಂದಿನ ಉಲಮಾಗಳಿಗೆ ಆಯಿಶಾ(ರ)ರ ಜ್ಞಾನ ಮೇಲೆ ಸಂಪೂರ್ಣ ಭರವಸೆಯಿತ್ತು. ಸಾಮಾನ್ಯ ನಾಗರಿಕರೂ ಆಯಿಶಾ(ರ)ರ ವರದಿಗಳನ್ನು ದೃಢೀಕೃತ ಎಂದು ನಂಬುತ್ತಿದ್ದರು. ಇದೇ ಕಾರಣದಿಂದ ಪ್ರವಾದಿ(ಸ)ಯವರ ನಂತರ ಹಿರಿಯರಲ್ಲಿ ಮುಫ್ತಿಯ ಸ್ಥಾನಮಾನ ದೊರೆತವರಲ್ಲಿ ಆಯಿಶಾ(ರ)ರೂ ಓರ್ವರಾಗಿದ್ದಾರೆ. ಅದಲ್ಲದೆ ಹ. ಅಬೂಬಕರ್(ರ), ಉಮರ್(ರ), ಉಸ್ಮಾನ್(ರ) ಹಾಗೂ ಇನ್ನಿತರ ಪ್ರಸಿದ್ಧ ಸಹಾಭಿಗಳು ಯಾವುದಾದರೂ ಸಮಸ್ಯೆಗಳಲ್ಲಿ ಸಿಲುಕಿ ಬಿಟ್ಟರೆ ಅದರ ಪರಿಹಾರಕ್ಕಾಗಿ ಹ. ಆಯಿಶಾ(ರ)ರ ಬಳಿ ತೆರಳುತ್ತಿದ್ದರು. ಬಳಿಕ ಹ. ಆಯಿಶಾ(ರ)ರು ಸೂಚಿಸಿದ ಪರಿಹಾರವನ್ನು ಅಂಗೀಕರಿಸುತ್ತಿದ್ದರು. ಪ್ರಥಮ ದರ್ಜೆಯ ಸಹಾಬಿವರ್ಯರ ಫತ್ವಾಗಳನ್ನು ಪರಿಗಣಿಸಿದ ಜನರು ಹೇಳುತ್ತಾರೆ, "ಹ. ಆಯಿಶಾ(ರ)ರ ಫತ್ವಾಗಳು ಎಷ್ಟಿವೆಯೆಂದರೆ ಒಂದು ವೇಳೆ ಅದನ್ನು ಒಟ್ಟುಗೂಡಿಸಿದರೆ ಒಂದು ದೊಡ್ಡ ದಾಖಲೆಯ ಗ್ರಂಥವೇ ಬೇಕಾದೀತು."

ಆ ಕಾಲದಲ್ಲಿ ಸಮರ್ಪಕವಾದ ಸಲಹೆ ನೀಡುತ್ತಿದ್ದ ಸಹಾಬಿಗಳು

- ಉಮರ್(ರ)
- ಅಲೀ(ರ)
- ಅಬ್ದುಲ್ಲಾ ಬಿನ್ ಮಸ್‌ವೂದ್
- ಅಬ್ದುಲ್ಲಾ ಬಿನ್ ಅಬ್ಬಾಸ್
- ಅಬ್ದುಲ್ಲಾ ಬಿನ್ ಉಮರ್
- ಆಯಿಶಾ(ರ)
- ಅಬೂ ಮೂಸಾ ಅಶ್‌ಅರಿ
- ಮುಆದ್ ಬಿನ್ ಜಬಲ್
- ಅಬ್ದುರ್ರಹ್ಮಾನ್ ಬಿನ್ ಔಫ್
- ಅಬೂ ಬಿನ್ ಕಅಬ್
- ಅಬೂದರ್ರ
- ಅಬೂ ಅಲ್‌ದರ್ದ
- ಝೈದ್ ಬಿನ್ ಸಾಬಿತ್(ರ) ಇವರೆಲ್ಲರೂ ಪ್ರವಾದಿಯವರ(ಸ) ಜೀವಿತ ಕಾಲದಲ್ಲಿ ಪ್ರವಾದಿವರ್ಯರ(ಸ) ಜೊತೆಗಿದ್ದ ಸಹಾಬಿಗಳು. ಕುರ್‌ಆನ್ ಹಾಗೂ ಹದೀಸ್‌ನ ಸೂಕ್ಷ್ಮ ವಿಷಯಗಳನ್ನು ಅರಿತವರಾಗಿದ್ದರು. ಈ ಎಲ್ಲಾ ಸಹಾಬಿಗಳು ವಯಸ್ಸಿನಲ್ಲಿ ಹ. ಆಯಿಶಾ(ರ)ಗಿಂತ ದೊಡ್ಡವರಾಗಿದ್ದರೂ ಕೆಲವೊಮ್ಮೆ ತಮ್ಮ ಸಮಸ್ಯೆಗಳಿಗೆ ಹ. ಆಯಿಶಾ(ರ)ರ ಬಳಿ ಪರಿಹಾರ ಕಂಡುಕೊಳ್ಳುತ್ತಿದ್ದರು ಎಂದು ಕೆಲವೊಂದು ಘಟನೆಗಳು ಹಾಗೂ ವರದಿಗಳಿಂದ ಸಾಬೀತಾಗುತ್ತದೆ.

✦ ಮದೀನಾದ ಏಳು ಇಮಾಮರಲ್ಲಿ ಓರ್ವರಾಗಿದ್ದ ಹಾಗೂ ಸಹಾಬಿಗಳ ಬಳಿಕ ಇಮಾಮರೆಂದು ಪರಿಗಣಿಸಲ್ಪಟ್ಟ ಹ. ಕಾಸಿಮ್(ರ)ರವರು ಹೇಳುತ್ತಾರೆ, "ಅಬೂಬಕರ್(ರ)ರ ಕಾಲದಲ್ಲೇ ಹ. ಆಯಿಶಾ(ರ)ರಿಗೆ ಮುಫ್ತಿಯ ಸ್ಥಾನಮಾನ ಲಭಿಸಿತ್ತು. ಹ. ಉಮರ್(ರ) ಹಾಗೂ ಹ. ಉಸ್ಮಾನ್(ರ)ರ ಆಡಳಿತ ಕಾಲದಲ್ಲೂ ಅವರು ಮುಫ್ತಿಯಾಗಿದ್ದರು." (ಇಬ್ನು ಸಅದ್)

"ಹ. ಆಯಿಶಾ(ರ)ರು ಹ. ಉಮರ್(ರ), ಹ. ಉಸ್ಮಾನ್(ರ)ರ ಕಾಲದಲ್ಲಿ ಫತ್ವಾ ನೀಡುತ್ತಿದ್ದರು. ಹ. ಉಮರ್(ರ) ಹಾಗೂ ಉಸ್ಮಾನ್(ರ)ರು ಅವರಿಂದ(ರ) ಪ್ರವಾದಿ ವಚನಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು." (ಇಬ್ನು ಸಅದ್)

"ಹ. ಅಲೀ(ರ)ಯುವರ ಆಡಳಿತ ಕಾಲದಲ್ಲೂ ಅವರು(ರ) ಮುಫ್ತಿಯಾಗಿದ್ದರು. ಬಳಿಕ ಅಮೀರ್ ಮುಆವಿಯಾ(ರ)ರ ಕಾಲದಲ್ಲಿ, ಯಾವುದಾದರೊಂದು ಫತ್ವಾದ ಕುರಿತು ಸಿರಿಯಾ ದೇಶದ ವಿದ್ವಾಂಸರಲ್ಲಿ

ಭಿನ್ನಾಭಿಪ್ರಾಯಗಳು ಉಂಟಾದರೆ ಸ್ವತಃ ಮುಆವಿಯಾ(ರ)ರು ಆ ಫತ್ವಾದ ಕುರಿತು ಸರಿಯಾದ ಮಾಹಿತಿ ಕಲೆ ಹಾಕುವಂತೆ ಓರ್ವ ವ್ಯಕ್ತಿಯನ್ನು ಕಳುಹಿಸುತ್ತಿದ್ದರು. ಮುಆವಿಯಾರ ಆ ವಾಹಕ ಮದೀನಾಕ್ಕೆ ಬಂದು ಆಯಿಶಾ(ರ)ರ ಬಳಿ ಸಮಸ್ಯೆಗೆ ಪರಿಹಾರವನ್ನು ಕಂಡುಕೊಂಡು ಹಿಂದಿರುಗುತ್ತಿದ್ದ. ಹಿಂದಿರುಗುವ ವೇಳೆ ಆತನ ಬಳಿ ಜ್ಞಾನದ ಒಂದು ಬೃಹತ್ ಸಂಗ್ರಹವೇ ಇರುತ್ತಿತ್ತು. ಫತ್ವಾವನ್ನು ಆಲಿಸಲು ದೂರದೂರದಿಂದ ಜನರು ಆಗಮಿಸುತ್ತಿದ್ದರು. ಅವರಲ್ಲಿ ಹಲವರು ನಿಸ್ಸಂಕೋಚವಾಗಿ ಪ್ರಶ್ನೆಗಳನ್ನು ಕೇಳುತ್ತಿದ್ದರು. ಅವರಿಗೆ ಮೊದಲು ಫತ್ವಾ ಕೇಳುವ ಶಿಷ್ಟಾಚಾರಗಳನ್ನು ತಿಳಿಸುತ್ತಿದ್ದರು. ಬಳಿಕ ಫತ್ವಾ ನೀಡುತ್ತಿದ್ದರು. ಒಂದು ವೇಳೆ ಯಾರಿಗಾದರೂ ಸಂಶಯ ಉಂಟಾದರೆ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಕೇಳುತ್ತಿದ್ದರು. ಆಯಿಶಾ(ರ)ರು ಬಹಳ ಗಾಂಭೀರ್ಯದೊಂದಿಗೆ ಉತ್ತರಿಸುತ್ತಿದ್ದರು. ಕೆಲವೊಂದು ಅಗತ್ಯದ ಸಮಸ್ಯೆಗಳನ್ನು ಜನರು ಕೇಳ ಬಯಸುತ್ತಿದ್ದರಾದರೂ ಕೇಳಲು ನಾಚುತ್ತಿದ್ದರು. ಆಗ ಆಯಿಶಾ(ರ)ರು, "ಅಲ್ಲಾಹನು ಸತ್ಯವನ್ನು ವ್ಯಕ್ತಪಡಿಸಲು ನಾಚುವುದಿಲ್ಲ" ಎನ್ನುತ್ತಿದ್ದರು.

ನಾನು ನಿಮ್ಮ ಮಾತೆಯಾಗಿದ್ದೇನೆ. ಮಾತೆಯಿಂದ ಎಂತಹ ಪರ್ದಾ ಎನ್ನುತ್ತಿದ್ದರು. ಈ ಸ್ಫೂರ್ತಿಯ ಮಾತುಗಳಿಂದ ಜನರು ತಮ್ಮ-ತಮ್ಮ ಸಮಸ್ಯೆಗಳನ್ನು ಆಯಿಶಾ(ರ)ರ ಮುಂದಿಟ್ಟು ಪರಿಹಾರ ಕಂಡುಕೊಳ್ಳುತ್ತಿದ್ದರು. ಒಂದು ವೇಳೆ ಇನ್ನೂ ಇತರ ಸಮಸ್ಯೆಗಳನ್ನು ಕೇಳಲು ಹಿಂಜರಿಕೆಯುಂಟಾದಾಗ ಆಯಿಶಾ(ರ)ರಿಂದ ಪರ್ದಾ ಮಾಡದ ಅವರ ಶಿಷ್ಯರಾದ ಬುದ್ಧಿವಂತ ಬಾಲಕಿಯರ ಮುಖಾಂತರ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುತ್ತಿದ್ದರು. ಹಲವರು ಬಾಯಿ ಮಾತಿನಿಂದ ಕೇಳಲು ಹೇಳುತ್ತಿದ್ದರು. ಇನ್ನು ಕೆಲವು ವಿದ್ವಾಂಸರು ಲಿಖಿತ ರೂಪದಲ್ಲಿ ಕೇಳುತ್ತಿದ್ದರು.

ಒಂದು ವೇಳೆ ಯಾವುದಾದರೂ ಸಮಸ್ಯೆಗಳಲ್ಲಿ ಸಹಾಬಿಗಳ ಮಧ್ಯೆ ಭಿನ್ನಾಭಿಪ್ರಾಯಗಳುಂಟಾದರೆ ಓರ್ವರರನ್ನು ನೇಮಕಗೊಳಿಸಿ ಆಯಿಶಾ(ರ)ರ ಬಳಿ ಕಳುಹಿಸಿ ಪರಿಹಾರ ಕಾಣುತ್ತಿದ್ದರು. ಇಂತಹ ಹಲವಾರು ಉದಾಹರಣೆಗಳಲ್ಲಿ ಕೆಲವೊಂದನ್ನು ನಾವು ಇಲ್ಲಿ ಉಲ್ಲೇಖಿಸುತ್ತೇವೆ.

✦ ಹ. ಅಬ್ದುಲ್ಲಾ ಬಿನ್ ಮಸ್‌ವೂದ್(ರ) ಹಾಗೂ ಅಬೂ ಮೂಸಾ ಅಶ್‌ಅರಿ(ರ) ಈರ್ವರು ಫತ್ವಾ ನೀಡುತ್ತಿದ್ದ ಪ್ರಸಿದ್ಧ ಸಹಾಬಿಗಳಾಗಿದ್ದರು. ಉಪವಾಸದಲ್ಲಿ ಇಫ್ತಾರ್‌ನ ಕುರಿತು ಅವರೀರ್ವರ ನಡುವೆ ಭಿನ್ನಾಭಿಪ್ರಾಯ ಉಂಟಾದವು. ಅಬ್ದುಲ್ಲಾ ಬಿನ್ ಮಸ್‌ವೂದ್(ರ)ರು ಸಮಯವಾದಂತೆ

ಇಫ್ತಾರ್ ಮಾಡಿ ಕೂಡಲೇ ನಮಾಝ್‌ಗೆ ಎದ್ದು ನಿಲ್ಲುತ್ತಿದ್ದರು. ಹ. ಅಬೂ ಮೂಸಾ(ರ)ರು ಇಫ್ತಾರ್ ಮಾಡಿ ಸ್ವಲ್ಪ ತಡೆದು ಬಳಿಕ ನಮಾಝು ನಿರ್ವಹಿಸುತ್ತಿದ್ದರು. ಈ ಸಹಾಬಿಗಳ ನಡುವಿನ ಭಿನ್ನಾಭಿಪ್ರಾಯವು ಜನರಲ್ಲಿ ಕಳವಳಕ್ಕೆ ಕಾರಣವಾಯಿತು. ಜನರೆಲ್ಲರೂ ಆಯಿಶಾ(ರ)ರ ಬಳಿ ಹೋಗಿ ಸಹಾಬಿಗಳ ಹೆಸರು ಸೂಚಿಸದೆ ಸಮಸ್ಯೆಯನ್ನು ಮುಂದಿಟ್ಟರು. ಆಯಿಶಾ(ರ)ರು ಕೇಳಿದರು, "ಅವರೀರ್ವರಲ್ಲಿ ಯಾರು ಶೀಘ್ರವಾಗಿ ನಿರ್ವಹಿಸುತ್ತಾರೆ?" "ಅಬ್ದುಲ್ಲಾ ಬಿನ್ ಮಸ್‌ವೂದ್(ರ)" ಎಂದುತ್ತರಿಸಿದರು. ಆಗ ಆಯಿಶಾ(ರ)ರು ಹೇಳಿದರು, "ಪ್ರವಾದಿವರ್ಯರು(ಸ) ಇದೇ ರೀತಿ ಮಾಡುತ್ತಿದ್ದರು."

✦ ಹ. ಅಬೂ ಹುರೈರಾ(ರ)ರು, "ಯಾವುದೇ ಓರ್ವ ವ್ಯಕ್ತಿಗೆ ಸ್ನಾನ ಮಾಡುವ ಅಗತ್ಯಬಿದ್ದರೆ ಹಾಗೂ ಬೆಳಗಾದರೆ ಆತ ಉಪವಾಸವನ್ನಾಚರಿಸುವುದು ಸರಿಯಲ್ಲ" ಎಂದು ಫತ್ವಾ ಹೊರಡಿಸಿದರು. ಇದು ಬಹಳ ಸೂಕ್ಷ್ಮ ವಿಷಯವಾಗಿತ್ತು. ಜನರು ಆತಂಕಗೊಂಡರು. ಸಮಸ್ಯೆಯ ಪರಿಹಾರಕ್ಕೆ ಆಯಿಶಾ(ರ)ರ ಬಳಿ ತೆರಳಿದರು. ಸಮಸ್ಯೆಯನ್ನು ಆಲಿಸಿದ ಆಯಿಶಾ(ರ)ರು "ಪ್ರವಾದಿವರ್ಯರು(ಸ) ಈ ರೀತಿ ಮಾಡುತ್ತಿರಲಿಲ್ಲ. ಒಂದು ವೇಳೆ ಇಂತಹ ಪರಿಸ್ಥಿತಿ ಎದುರಾದರೆ ಪ್ರವಾದಿವರ್ಯರು(ಸ) ಉಪವಾಸ ತೊರೆಯುತ್ತಿರಲಿಲ್ಲ ಇಂತಹ ಅವಸ್ಥೆಯಲ್ಲೂ ಅವರು(ಸ) ಉಪವಾಸವನ್ನಾಚರಿಸುತ್ತಿದ್ದರು."

ಬಳಿಕ ಜನರು ಉಮ್ಮು ಸಲಮ(ರ)ರ ಬಳಿ ಹೋದರು. ಉಮ್ಮು ಸಲಮ(ರ)ರೂ ಹ. ಆಯಿಶಾ(ರ)ರ ಉತ್ತರವನ್ನು ಅನುಮೋದಿಸಿದರು. ಅಲ್ಲಿಂದ ಜನರು ಅಬೂಹುರೈರಾ(ರ)ರ ಬಳಿ ಹೋಗಿ ಹ. ಆಯಿಶಾ(ರ)ರ ಫತ್ವಾವನ್ನು ತಿಳಿಸಿದರು. ಅಬೂ ಹುರೈರಾ(ರ)ರು ಅದನ್ನು ಒಪ್ಪಿಕೊಂಡರು.

✦ ಅಬೂ ಹುರೈರಾ(ರ)ರು ವರದಿ ಮಾಡುತ್ತಾರೆ, "ಜನಾಝ ಎತ್ತುವುದರಿಂದ ವುಝೂ ಭಂಗವಾಗುತ್ತದೆ" ಆದರೆ ಆಯಿಶಾ(ರ)ರು "ವುಝೂ ಭಂಗವಾಗುವುದಿಲ್ಲ" ಎಂದು ಫತ್ವಾ ನೀಡಿದರು.

✦ ಹ. ಅಲೀ(ರ) ಹಾಗೂ ಹ. ಉಮರ್(ರ)ರು ಹೇಳುತ್ತಾರೆ, "ಕುರ್ಬಾನಿಯ ಮಾಂಸ ಮೂರು ದಿನಗಳ ನಂತರ ಸೇವಿಸುವುದು ಧರ್ಮಸಮ್ಮತವಲ್ಲ." ಆದರೆ ಹ. ಆಯಿಶಾ(ರ)ರ ಫತ್ವಾದಂತೆ, "ಇದು ಧರ್ಮಸಮ್ಮತವಾಗಿದೆ."

✦ ಹ. ಅಬೂ ಹುರೈರಾ(ರ)ರ ವರದಿ ಪ್ರಕಾರ, "ಮೃತರಿಗೆ ಸ್ನಾನ ಮಾಡಿಸುವವರ ಮೇಲೆ ಸ್ನಾನವು ವಾಜಿಬ್ (ಕಡ್ಡಾಯ) ಆಗಿದೆ. "ಆಯಿಶಾ(ರ)ರ ಫತ್ವಾದಂತೆ, "ಅದು ವಾಜಿಬ್ ಅಲ್ಲ."

✦ ಹ. ಆಯಿಶಾ(ರ)ರು ಹೇಳುತ್ತಾರೆ, "ಒಂದು ವೇಳೆ ಪತಿಯು ತನ್ನ ಪತ್ನಿಗೆ ತಲಾಕ್ ನೀಡಿದಾಗ, ಪತ್ನಿಯು ಅದನ್ನು ನಿರಾಕರಿಸಿ ಪತಿಯೊಂದಿಗಿರಲು ಬಯಸಿದರೆ ಅದು ತಲಾಕ್ ಆಗುವುದಿಲ್ಲ. ಆದರೆ ಝೈದ್ ಬಿನ್ ಸಾಬಿತ್(ರ) ಹಾಗೂ ಉಮರ್(ರ)ರು ಹೇಳುತ್ತಾರೆ. "ಅದು ಒಂದು ತಲಾಕ್ ಎಂದು ಪರಿಗಣಿಸಲ್ಪಡುತ್ತದೆ."

## ಹ. ಆಯಿಶಾ(ರ)ರು ನಿಷೇಧಿಸಲು ಸೂಚಿಸಿದ ವಿಷಯಗಳು:

ಹ. ಆಯಿಶಾ(ರ)ರು ಕೆಲವೊಂದು ವಿಚಾರಗಳಿಂದ ಜನರನ್ನು ತಡೆದಿದ್ದಾರೆ.

ಹ. ಆಯಿಶಾ(ರ)ರ ಬಳಿಯಲ್ಲಿ ಜ್ಞಾನಾರ್ಜನೆಗೆ ಬರುತ್ತಿದ್ದವರಲ್ಲಿ ಬಾಲಕ, ಬಾಲಕಿಯರು, ಯುವಕ-ಯುವತಿಯರು ಹಾಗೂ ಹಿರಿಯರೂ ಇರುತ್ತಿದ್ದರು. ಆಯಿಶಾ(ರ)ರು ತರಬೇತಿ ನೀಡುವುದರೊಂದಿಗೆ ಉಪದೇಶಗಳನ್ನೂ ನೀಡುತ್ತಿದ್ದರು. ಯುವಕ-ಯುವತಿಯರು ಹಾಗೂ ಇನ್ನಿತರರಿಂದ ಏನಾದರೂ ತಪ್ಪು ಸಂಭವಿಸಿದರೆ ಹ. ಆಯಿಶಾ(ರ)ರು ಅವರ ಮೇಲೆ ನಿಗಾ ಇಡುತ್ತಿದ್ದರು. ತಪ್ಪುಗಳನ್ನು ತಿದ್ದುವ, ಸಲಹೆ ನೀಡುವ ರೀತಿಯು ಹಿರಿಯರಿಗೆ ಹಾಗೂ ಕಿರಿಯರಿಗೆ ಬೇರೆ ಬೇರೆಯಾಗಿತ್ತು. ಹಿರಿಯರು ತಪ್ಪು ಮಾಡಿದರೆ ಅವರನ್ನು ಅಲ್ಲೇ ತಿದ್ದುವ ಬದಲು, ಬೇರೆಯವರ ಮುಖಾಂತರ ಹೇಳಿ ಕಳಿಸುತ್ತಿದ್ದರು ಹಾಗೂ ಅದಕ್ಕೆ ಸಂಬಂಧಿಸಿದಂತೆ ಕುರ್‌ಆನ್ ಹಾಗೂ ಪ್ರವಾದಿ ವಚನಗಳ ಆಧಾರಗಳನ್ನು ಹೇಳುತ್ತಿದ್ದರು ಅಥವಾ ಅಗತ್ಯ ಬಿದ್ದರೆ ಸ್ವತಃ ತಾವೇ ಅವರ ಬಳಿಗೆ ತೆರಳುತ್ತಿದ್ದರು. ಒಂದು ವೇಳೆ ಮಕ್ಕಳು ತಪ್ಪು ಮಾಡಿದರೆ ಕೂಡಲೇ ಅವರನ್ನು ತಿದ್ದುತ್ತಿದ್ದರು. ಮಕ್ಕಳಿಗೆ ತಿಳಿಸಲು ತಡಮಾಡಿದರೆ, ಮಕ್ಕಳು ತಮ್ಮ ತಪ್ಪನ್ನು ಮರೆತು ಬಿಡುತ್ತಾರೆ ಎಂಬ ಸಂದೇಹ ಅವರಿಗಿತ್ತು. ಈ ತಿದ್ದುಪಡಿಗಳು ಶಿಕ್ಷಣಕ್ಕೆ ಸಂಬಂಧಿಸಿದವುಗಳಾಗಿವೆ. ಒಂದು ವೇಳೆ ಸಾರ್ವಜನಿಕರು ತಮಾಷೆ ಮಾಡುತ್ತಿದ್ದರೆ ಅಥವಾ ನಿಷಿದ್ಧ ಕಾರ್ಯದಲ್ಲಿ ತೊಡಗಿದ್ದನ್ನು ಕಂಡರೆ ಆಯಿಶಾ(ರ)ರು ಅದನ್ನು ಕಠೋರವಾಗಿ ತಡೆಯುತ್ತಿದ್ದರು. ಒಂದು ವೇಳೆ ಸಾಮೂಹಿಕ ಪ್ರಮಾದಗಳು ಸಂಭವಿಸಿದರೆ ಮದೀನಾದ ಗವರ್ನರ್‌ಗೆ ತಿಳಿಸುತ್ತಿದ್ದರು ಹಾಗೂ ಅವರು ಆಯಿಶಾ(ರ)ರ ಆದೇಶದ ಮೇರೆಗೆ ತಿದ್ದುಪಡಿ ಮಾಡುತ್ತಿದ್ದರು ಅಥವಾ ದಂಡಿಸುತ್ತಿದ್ದರು. ಇಂತಹ ತಿದ್ದುಪಡಿಯ ಕೆಲವೊಂದು ಉದಾಹರಣೆಗಳನ್ನು ಇಲ್ಲಿ ಉಲ್ಲೇಖಿಸುತ್ತೇವೆ.

ಹ. ಉಸ್ಮಾನ್(ರ)ರ ವಿರುದ್ಧ ನಿಂತಿದ್ದ ಒಂದು ಗುಂಪು, ಹ. ಉಸ್ಮಾನ್(ರ)ರನ್ನು ಅವಾಚ್ಯ ಶಬ್ದಗಳಿಂದ ನಿಂದಿಸಿ, ಅವರ ಮೇಲೆ ಶಾಪ ಹಾಕುತ್ತಿದ್ದ ಸಂದರ್ಭ ನಿಮಗೆಲ್ಲಾ ತಿಳಿದಿದೆ. ಅದರಲ್ಲಿ ಹಿರಿಯರೂ ಇದ್ದರು.

ಅವರಿಗೆ ಅವರದೇ ಆದ ರೀತಿಯಲ್ಲಿ ಆಯಿಶಾ(ರ)ರು ಒಂದು ಸಂದೇಶವನ್ನು ಕಳುಹಿಸಿದರು.

"ಸಲಾಮ್ ಬರೆದ ಬಳಿಕ ನನ್ನ ಪುತ್ರರೇ!" ಎಂದು ಬರೆದರು. ನನ್ನ ಮನೆಯಲ್ಲಿ ಪ್ರವಾದಿವರ್ಯರ(ಸ)ರ ಮೇಲೆ ದಿವ್ಯವಾಣಿ ಅವತೀರ್ಣಗೊಳ್ಳುತ್ತಿತ್ತು. ಜಿಬ್ರೀಲ್(ಅ)ರು ಆ ದಿವ್ಯವಾಣಿ ತರುತ್ತಿದ್ದರು. ಆಗ ಉಸ್ಮಾನ್(ರ)ರು ಪ್ರವಾದಿವರ್ಯರ(ಸ) ಪಕ್ಕದಲ್ಲಿ ಕುಳಿತಿರುತ್ತಿದ್ದರು. ಪ್ರವಾದಿವರ್ಯರು(ಸ) ಅವರ(ರ) ಭುಜಗಳ ಮೇಲೆ ಕೈಯಿಂದ ಉಸ್ಮಾನ್! ಬರೆಯಿರಿ ಎನ್ನುತ್ತಿದ್ದರು. (ಬಳಿಕ ಅವತೀರ್ಣಗೊಂಡ ದಿವ್ಯವಾಣಿಯುನ್ನು ಉಸ್ಮಾನ್(ರ)ರಿಂದ ಬರೆಸುತ್ತಿದ್ದರು.) "ಓ ನನ್ನ ಪುತ್ರರೇ! ಅಲ್ಲಾಹನು (ವಹೀ ಬರೆಯುವವರ ಈ ಸ್ಥಾನಮಾನವನ್ನು) ನೀಚ ವ್ಯಕ್ತಿಗಳಿಗೆ ದಯಪಾಲಿಸುವುದಿಲ್ಲ. ಆದುದರಿಂದ ಯಾರು ಉಸ್ಮಾನ್(ರ)ರನ್ನು ನಿಂದಿಸಿದರೋ, ಅವರ ಮೇಲೆ ಶಾಪ ಹಾಕಿದರೋ, ತಿರುಗಿ ಅವರ ಮೇಲೆಯೇ ಅಲ್ಲಾಹನು ಶಾಪ ಹಾಕುತ್ತಾನೆ."

ಇಮಾಮ್ ಮುಹಮ್ಮದ್(ರ)ರು ಇದೇ ವರದಿಯನ್ನು ತಮ್ಮ ಗ್ರಂಥದಲ್ಲಿ ಈ ರೀತಿ ಉಲ್ಲೇಖಿಸಿದ್ದಾರೆ, "ಯಾರು ಅವರ (ಉಸ್ಮಾನ್(ರ)) ಮೇಲೆ ಶಾಪ ಹಾಕಿದನೋ, ಅವರ ಮೇಲೆ ಅಲ್ಲಾಹನ ಶಾಪವಿರಲಿ. ದಿವ್ಯವಾಣಿ ಅವತೀರ್ಣಗೊಳ್ಳುವ ವೇಳೆ ಪ್ರವಾದಿವರ್ಯರು(ಸ) ಉಸ್ಮಾನ್(ರ)ರ ಬೆನ್ನ ಸಹಾಯ ಪಡೆದು ಕುಳಿತುಕೊಳ್ಳುತ್ತಿದ್ದುದನ್ನು ನಾನು (ಆಯಿಶಾ(ರ)) ಕಂಡಿದ್ದೇವೆ. ಪ್ರವಾದಿವರ್ಯರು(ಸ) ಒಂದೊಂದಾಗಿ ತಮ್ಮ ಈರ್ವರು ಪುತ್ರಿಯರನ್ನು ಹ. ಉಸ್ಮಾನ್(ರ)ರೊಂದಿಗೆ ವಿವಾಹ ಮಾಡಿಸಿದ್ದರು. ದಿವ್ಯವಾಣಿ ಬರೆಯುವ ಭಾಗ್ಯವು ಅವರ ಪಾಲಾಯಿತು. ಅಲ್ಲಾಹನ ಮುಂದೆ ಯಾರು ಹೆಚ್ಚು ಗೌರವಾನ್ವಿತರೋ ಅವರಿಗೆ ಮಾತ್ರ ಅಲ್ಲಾಹನು ಇಂತಹ ಅತ್ಯುನ್ನತ ಸ್ಥಾನಮಾನವನ್ನು ದಯಪಾಲಿಸುತ್ತಾನೆ."

ಹ. ಉಮರ್(ರ)ರ ಆಡಳಿತ ಕಾಲದಲ್ಲಿ ಇರಾನ್ ಗೆಲುವು ಸಾಧಿಸಿತ್ತು. ಇರಾನಿಗಳು ಆಟ-ವಿನೋದ ಹಾಗೂ ಇತರ ವಿಷಯಗಳಲ್ಲಿ ಬಹಳ ಬಲಶಾಲಿಗಳಾಗಿದ್ದರು. ಅರಬರೊಂದಿಗೆ ಅವರ ಸಹವಾಸವು ಬೆಳೆದಾಗ ಅರಬರು ಅವರಿಂದ ಹಲವಾರು ವಿಷಯಗಳನ್ನು ಕಲಿತುಕೊಂಡರು. ಚದುರಂಗದಾಟ, ಪಾರಿವಾಳಗಳ ಆಟ ಹಾಗೂ ಜೂಜಾಟ ಆರಂಭವಾಯಿತು. ಸಹಾಬಿವರ್ಯರು(ರ) ಇಂತಹ ವ್ಯಕ್ತಿಗಳನ್ನು ಹಿಡಿದರು. ಹ. ಆಯಿಶಾ(ರ)ರ ಮನೆಯ ಬಾಡಿಗೆಯಲ್ಲಿದ್ದವರೂ ಇಂತಹ ಆಟಗಳಲ್ಲಿ ಮಗ್ನರಾಗಿರುತ್ತಿದ್ದರು. ಇದು ಆಯಿಶಾ(ರ)ರ ಗಮನಕ್ಕೆ ಬಂದಾಗ, ಒಂದು ವೇಳೆ ನೀವು ಇದನ್ನು

ೂರೆಯದಿದ್ದರೆ ನಿಮ್ಮನ್ನು ಮನೆಗಳಿಂದ ಹೊರಹಾಕಿ ಬಿಡುತ್ತೇನೆ ಎಂದು ಂಭೀರವಾಗಿ ಎಚ್ಚರಿಸಿದರು.

ಅರಬೇತರರು ಒಂದು ಬಗೆಯ ಅಮಲು ಪದಾರ್ಥವನ್ನು ಸೇವಿಸುತ್ತಿದ್ದರು. ದನ್ನು 'ಬಾಝಿಕ್' ಎಂದು ಕರೆಯಲಾಗುತ್ತದೆ. ಅಜುಮ್ ವಿಜಯವಾದಾಗ ಲ್ಲಿನ ನಿವಾಸಿಗಳು ಅರಬರಿಗೆ ಬಾಝಿಕ್‌ನ ದುಶ್ಚಟದ ದಾಸರನ್ನಾಗಿಸಿ, ದು ಶರಾಬು ಅಲ್ಲವೆಂದರು. ಹೀಗೆ ಬಾಝಿಕ್ ಮದೀನಾದ ಕೆಲ ಮನೆಗಳನ್ನು ೊಕ್ಕಿತು. ಈ ವಿಚಾರವು ಆಯಿಶಾ(ರ)ರ ಗಮನಕ್ಕೆ ಬಂದಾಗ ಅವರು(ರ) ಹಿಳೆಯರನ್ನು ಸೇರಿಸಿ ಬಾಝಿಕ್‌ನ ವಿರುದ್ಧ ಪ್ರವಚನ ನೀಡಿದರು. ಬಾಝಿಕ್‌ಗೆ ಬಳಸಿದ ಪಾತ್ರೆಗಳಲ್ಲಿ ಒಣ ಖರ್ಜೂರವನ್ನೂ ನೆನೆಸಿಡಬೇಡಿರಿ. ಂದು ವೇಳೆ ನಿಮ್ಮ ಮಡಕೆಗಳಲ್ಲಿ ಅಮಲು ಪದಾರ್ಥ ಉತ್ಪತ್ತಿಯಾದರೆ ದೂ ಹರಾಮ್ ಆಗಿದೆ. ಏಕೆಂದರೆ ಪ್ರವಾದಿಯವರು(ಸ) ಅಮಲು ಪದಾರ್ಥದ ಟ್ಟಿಗೆ ಕಾರಣವಾಗುವ ಪ್ರತಿಯೊಂದು ವಸ್ತುವಿನಿಂದ ತಡೆದಿದ್ದಾರೆ" ಎಂದರು.

ಓರ್ವ ಸ್ತ್ರೀಯ ಮಗಳು ಬಹಳ ಸುಂದರಿಯಾಗಿದ್ದಳು. ಆದರೆ ಯಿಲೆಯಿಂದಾಗಿ ಅವಳ ಕೂದಲುಗಳು ಉದುರಿದ್ದವು. ಆ ಯುವತಿಯ ವಾಹ ನಿಶ್ಚಯವಾಗಿತ್ತು. ಆ ಸ್ತ್ರೀಯು ಆಯಿಶಾ(ರ)ರ ಬಳಿ ಬಂದು, ಯಹೂದಿ ಸ್ತ್ರೀಯರು ತಲೆಯ ಸೌಂದರ್ಯಕ್ಕಾಗಿ, ತೋರಿಕೆಗಾಗಿ ೂದಲುಗಳನ್ನು ಜೋಡಿಸಿಕೊಳ್ಳುತ್ತಾರೆ. ನಾನು ನನ್ನ ಮಗಳ ತಲೆಗೆ ಅಂತಹ ೂದಲನ್ನು ಹೊದಿಸಲೇ?" ಎಂದು ಕೇಳಿದರು. ಆಗ ಆಯಿಶಾ(ರ), ಪ್ರವಾದಿಯವರು(ಸ) ತೋರಿಕೆಯ ಕೂದಲನ್ನು ಜೋಡಿಸುವ ಹಾಗೂ ೋಡಿಸುವವರ ಮೇಲೆ ಶಾಪ ಹಾಕಿದ್ದಾರೆ" ಎಂದು ಹೇಳಿದರು.

ಒಂದು ವೇಳೆ ಶಿಷ್ಯರು ಹಾಗೂ ಬೇರೆ ವ್ಯಕ್ತಿಯೊಡನೆ ಜಗಳವಾಗಿ ಡುತ್ತಿದ್ದರೆ ಶಿಷ್ಯರಿಗೆ ತ್ಯಾಗಕ್ಕಾಗಿ ಪ್ರೋತ್ಸಾಹಿಸುತ್ತಿದ್ದರು. ಅಬೂ ಸಲಮರು ಹಳ ಪ್ರಿಯ ಶಿಷ್ಯರಾಗಿದ್ದರು. ಪ್ರಸಿದ್ಧ ಸಹಾಬಿ ಅಬ್ದುರ್ರಹ್ಮಾನ್ ಬಿನ್ ಫ್(ರ)ರ ಪುತ್ರರಾಗಿದ್ದರು. ಆಯಿಶಾ(ರ)ರು ಶಿಷ್ಯರಲ್ಲಿ ತಂದೆಯ ಮಾದರಿಯನ್ನು ೋಡಬಯಸುತ್ತಿದ್ದರು. ಅದಾಗ್ಯೂ ಒಂದು ಜಮೀನಿಗಾಗಿ ಅಬೂ ಸಲಮ ಾಗೂ ಓರ್ವ ವ್ಯಕ್ತಿಯ ನಡುವೆ ಜಗಳವಾಯಿತು. ಆಯಿಶಾ(ರ)ರು ಅಬೂ ಲಮರಲ್ಲಿ ಆ ಜಮೀನನ್ನು ಬಿಟ್ಟು ಬಿಡು ವಂತೆ ಸೂಚಿಸಿ, ಈ ರೀತಿ ೇಳಿದರು, "ಪ್ರವಾದಿ(ಸ)ರು ಹೇಳಿದ್ದಾರೆ, ದೌರ್ಜನ್ಯವೆಸಗಿ ಯಾರು ಒಂದು ೇಣಿನಷ್ಟು ಜಮೀನನ್ನು ಕಸಿಯುತ್ತಾರೋ, ಪುನರುತ್ಥಾನ ದಿನದಂದು ಜಮೀನಿನ ಳು ಸ್ಥಾನದ ಹೊರೆಯನ್ನು ಆತನ ಕುತ್ತಿಗೆಯ ಮೇಲೆ ಹೊರಿಸಲಾಗುವುದು."

ಒಮ್ಮೆ ಬಸ್ರಾದ ಕೆಲವು ಸ್ತ್ರೀಯರು ಆಗಮಿಸಿದರು. ಅವರ ಪುರುಷರು ಶೌಚಕ್ಕೆ ನೀರನ್ನು ಬಳಸುವುದಿಲ್ಲ (ಬಟ್ಟೆ, ಹಾಳೆ ಅಥವಾ ಇತರ ವಸ್ತುಗಳನ್ನು ಬಳಸುತ್ತಾರೆ) ಎಂದು ತಿಳಿದಾಗ ಆಯಿಶಾ(ರ)ರು ಹೇಳಿದರು, "ನಾನು ನಿಮ್ಮ ಪುರುಷರಲ್ಲಿ ಈ ಕುರಿತು ಹೇಳಲಾರೆ. ನೀವು ಅವರೊಂದಿಗೆ ಶೌಚಕ್ಕೆ ನೀರನ್ನು ಬಳಸಲು ಹೇಳಿರಿ. ಇದುವೇ ಪ್ರವಾದಿ ಚರ್ಯೆಯಾಗಿದೆ" ಎಂದರು

ಒಮ್ಮೆ ಹಜ್ಜ್‌ನ ಸಂದರ್ಭದಲ್ಲಿ ಓರ್ವ ಸ್ತ್ರೀಯು ಹೊದ್ದುಕೊಂಡಿದ್ದ ಚದ್ದರದಲ್ಲಿ ಶಿಲುಬೆಯ (ಕ್ರೈಸ್ತರ ವಿಶೇಷ ಚಿಹ್ನೆ) ಅಚ್ಚು ಇರುವುದನ್ನು ಕಂಡರು. ಆಕೆಯನ್ನು ಗದರಿಸಿ ತೆಗೆದು ಬಿಟ್ಟರು. ಪ್ರವಾದಿಯವರು(ಸ) ಇಂತಹ ಬಟ್ಟೆಯನ್ನು ನೋಡಿದೊಡನೆ ಅದನ್ನು ಹರಿದುಬಿಡುತ್ತಿದ್ದರು.

ಮದೀನಾದ ಸ್ತ್ರೀಯರು ಮಕ್ಕಳು ಜನಿಸಿದಾಗ ಅವರನ್ನು ಆಯಿಶಾ(ರ)ರ ಬಳಿಗೆ ಕೊಂಡೊಯ್ಯುತ್ತಿದ್ದರು. ಸಮೃದ್ಧಿ ಹಾಗೂ ಪ್ರಾರ್ಥನೆಗಾಗಿ ವಿನಂತಿಸುತ್ತಿದ್ದರು. ಒಮ್ಮೆ ಅವರ ಬಳಿ ಓರ್ವ ಸ್ತ್ರೀ ಬಂದರು. ಆಕೆಯ ತಲೆಯ ಬುಡದಲ್ಲಿ ಕ್ಷೌರದ ಕತ್ತಿ ಇಟ್ಟಿರುವುದನ್ನು ಕಂಡ ಆಯಿಶಾ(ರ)ರು, "ಇದೇನು?" ಎಂದು ಕೇಳಿದರು. ಆಕೆಯು, "ಇದರಿಂದ ಭೂತ ಹೆದರಿ ಓಡಿ ಹೋಗುತ್ತದೆ" ಎಂದಳು. ಆ ಕೂಡಲೇ ಆಯಿಶಾ(ರ)ರು ಆ ಕತ್ತಿಯನ್ನು ತೆಗೆದು ಎಸೆದರು. ಬಳಿಕ, "ಪ್ರವಾದಿಯವರು(ಸ) ಅಪಶಕುನ(ಭವಿಷ್ಯ ಹೇಳುವುದು)ದಿಂದ ತಡೆದಿದ್ದಾರೆ. (ಇದೆಲ್ಲಾ ಭ್ರಮೆಯಾಗಿದೆ)" ಎಂದು ಉಪದೇಶಿಸಿದರು.

ಸ್ತ್ರೀಯರಿಗೆ ಆಭರಣಗಳನ್ನು ಧರಿಸುವ ಅನುಮತಿಯಿದೆಯಾದರೂ ಶಬ್ಧ ಬರುವ ಆಭರಣಗಳನ್ನು ತೊಡುವುದರಿಂದ ತಡೆಯಲಾಗಿದೆ. ಗಂಟೆ ಇತ್ಯಾದಿ ವಸ್ತುಗಳ ಶಬ್ಧವೂ ಮಕ್ರೂಹ್ ಆಗಿದೆ. ಗುಂಗುರು ಧರಿಸಿದ್ದ ಓರ್ವ ಬಾಲಕಿಯು ತನ್ನ ತಾಯಿಯೊಂದಿಗೆ ಬಂದಳು. ಆಯಿಶಾ(ರ)ರು ಆ ಬಾಲಕಿಯ ತಾಯಿಯೊಂದಿಗೆ ಗುಂಗುರುವನ್ನು ತೆಗೆಯುವಂತೆ ಹೇಳಿದರು. ನನ್ನ ಬಳಿ ಈ ರೀತಿ ಕರೆದುಕೊಂಡು ಬರಬೇಡಿ ಎಂದರು. ಅಲ್ಲಿದ್ದ ಕೆಲವು ಸ್ತ್ರೀಯರು, "ಏಕೆ?" ಎಂದು ಪ್ರಶ್ನಿಸಿದರು. ಆಗ ಆಯಿಶಾ(ರ)ರು, "ಯಾರ ಮನೆಯಲ್ಲಿ ಕಾರವಾನದಲ್ಲಿ ಗಂಟೆಯ ನಾದ ಕೇಳಿಸುತ್ತದೋ ಅಲ್ಲಿಗೆ ದೇವಚರರು ಆಗಮಿಸುವುದಿಲ್ಲ" ಎಂದರು.

ಆಯಿಶಾ(ರ)ರ ಹಿರಿಯ ಸಹೋದರರಾದ ಅಬ್ದುರ್ರಹ್ಮಾನ್‌ರ ಪುತ್ರಿ ಹಫ್ಸಾರು ಬಾಲ್ಯದಿಂದಲೇ ವಿದ್ಯೆ–ತರಬೇತಿ ಪಡೆಯುತ್ತಿದ್ದರು. ಅವರು ದೊಡ್ಡವರಾದಾಗ (ಪ್ರಬುದ್ಧರಾಗಿರಲಿಲ್ಲ) ಹೆಚ್ಚಿನ ವಿದ್ಯೆಯನ್ನು ಗಳಿಸಿದ್ದರು.

ಇನ್ನು ಪರ್ದಾ ಮಾಡುವ ಸಮಯ ಎದುರಾಗಲಿಲ್ಲ ಎಂಬ ಯೋಚನೆಯಲ್ಲಿ ತೆಳುವಾದ ಶಾಲು ಧರಿಸಿ ಅತ್ತೆಯ ಬಳಿಗೆ ಬಂದರು. ಆಯಿಶಾ(ರ)ರಿಗೆ ಕೋಪ ನೆತ್ತಿಗೇರಿತು. ಗದರಿಸುತ್ತಾ, "ಸೂರ ನೂರ್‌ನಲ್ಲಿ ಅಲ್ಲಾಹನು ಏನು ಆದೇಶಿಸಿದ್ದಾನೆಂದು ನಿನಗೆ ತಿಳಿದಿಲ್ಲವೇ? (ತಿಳಿದೂ ಆದೇಶದ ವಿರುದ್ಧ ಹೋಗುವುದು ಸರಿಯಲ್ಲ. ಪರ್ದಾ ಪಾಲಿಸಲು ಸಮಯ ಇನ್ನೂ ಆಗದಿದ್ದರೂ ಸರಿ (ಪ್ರೌಢಾವಸ್ಥೆ) ಆದರೆ ಅದರ ಪಾಲನೆ ಈ ವಯಸ್ಸಿನಿಂದಲೇ ಆರಂಭಿಸಬೇಕು)" ಎನ್ನುತ್ತಾ ಸಹೋದರ ಪುತ್ರಿಯ ತಲೆಯಿಂದ ಶಾಲನ್ನು ಸೆಗೆದು ಹರಿದುಬಿಟ್ಟರು ಹಾಗೂ ಮತ್ತೊಂದು ದಪ್ಪಗಿನ ಶಾಲನ್ನು ತರಿಸಿ ಹೊದಿಸಿದರು.

ಸಹೋದರ ಅಬ್ದುರ್ರಹ್ಮಾನ್‌ರು ಎಲ್ಲಿಂದಲೋ ಧಾವಿಸಿ ಬಂದವರೇ ಬೇಗ ಬೇಗನೇ ವುಝೂ ಮಾಡಿ ಹೊರಡಲನುವಾದಾಗ ಆಯಿಶಾ(ರ)ರು ಅವರನ್ನು ತಡೆದು ಸರಿಯಾಗಿ ವುಝೂ ಮಾಡಿರಿ. ಪ್ರವಾದಿಯವರು(ಸ) ಈ ರೀತಿ ಹೇಳುವುದನ್ನು ನಾನು ಕೇಳಿದ್ದೇನೆ, "ವುಝೂವಿನಲ್ಲಿ ಯಾವ ಭಾಗಗಳು ಒಣಗಿರುತ್ತವೋ ಅವುಗಳ ಮೇಲೆ ನರಕದ ಅಗ್ನಿ ಬೀಳಲಿ."

ಒಮ್ಮೆ ಕೆಲ ಮಹಿಳೆಯರು ಅತಿಥಿಗಳಾಗಿ ಆಗಮಿಸಿದ್ದರು. ಅವರಲ್ಲಿ ಇಬ್ಬರು ಯುವತಿಯರು ಚದ್ದರ ಹೊದ್ದುಕೊಳ್ಳದೆ ನಮಾಝ್ ನಿರ್ವಹಿಸ ತೊಡಗಿದರು. ಆಗ ಆಯಿಶಾ(ರ)ರು, "ಇದು ತಪ್ಪಾಗಿದೆ. ಯಾವುದೇ ಹೆಣ್ಣು ಚದ್ದರ ಹಾಕದೆ ನಮಾಝ್ ನಿರ್ವಹಿಸಬಾರದು. ಇದು ಪ್ರವಾದಿಯವರು(ಸ) ಉಪದೇಶಿಸಿದ ಆದೇಶವಾಗಿದೆ."

ಮುಸ್ಲಿಮರಲ್ಲಿ ಇಂದಿನವರೆಗೂ ಒಂದು ಆಚಾರದಲ್ಲಿ ಯಾವುದೇ ಪ್ರತಿಬಂಧಗಳುಂಟಾಗಲಿಲ್ಲ. ರಮಝಾನಿನ ಕೊನೆಯ ಹತ್ತರಲ್ಲಿ ಒಂದು ತರಾವೀಹ್ ನಮಾಝಿನಲ್ಲಿ ಸಂಪೂರ್ಣ ಕುರ್‌ಆನ್ ಓದಲಾಗುತ್ತದೆ. ಆದರೆ ಸಹಾಬಿಗಳು ಈ ರೀತಿ ಮಾಡದೆ ಒಂದೇ ರಾತ್ರಿಯಲ್ಲಿ ಎರಡೆರಡು ಬಾರಿ ಕುರ್‌ಆನ್ ಸಂಪೂರ್ಣವಾಗಿ ಓದಿ ಮುಗಿಸುವಷ್ಟು ವೇಗವಾಗಿ ಕುರ್‌ಆನ್ ಪಠಿಸುತ್ತಿದ್ದರು. ಅವರನ್ನು ತಡೆದ ಆಯಿಶಾ(ರ)ರು, "ನೀವು ಓದುವುದೂ-ಓದದೇ ಇರುವುದೂ ಒಂದೇ ಆಗಿದೆ. ಬಳಿಕ ಪ್ರವಾದಿ(ಸ)ರು ಪಠಿಸುತ್ತಿದ್ದ ರೀತಿಯನ್ನು ತಿಳಿಸಿದರು. ಪ್ರವಾದಿ(ಸ)ರು ತಡೆ-ತಡೆದು ಕುರ್‌ಆನ್ ಪಠಿಸುತ್ತಿದ್ದರು. ಶುಭವಾರ್ತೆಯಿದ್ದ ಸೂಕ್ತಗಳು ಬಂದಾಗ ಪ್ರಾರ್ಥಿಸುತ್ತಿದ್ದರು. ಭಯ-ಆತಂಕದ ಸೂಕ್ತಗಳನ್ನು ಪಠಿಸಿದಾಗ ಅಲ್ಲಾಹನ ಅಭಯ ಯಾಚಿಸುತ್ತಿದ್ದರು. ಈ ರೀತಿ ಹೆಚ್ಚೆಂದರೆ ಒಂದು ರಾತ್ರಿಯಲ್ಲಿ ಸೂರಃ ಅನ್ನಿಸಾದ ವರೆಗೆ ಮಾತ್ರ ಓದಲು ಸಾಧ್ಯವಾಗುತ್ತಿತ್ತು."

ಹಿರಿಯ ಪ್ರಖ್ಯಾತ ಸಹಾಬಿಗಳ ಸಾಮಾನ್ಯ ತಪ್ಪುಗಳನ್ನೂ ಕಠಿಣವಾಗಿ
ವಿರೋಧಿಸುತ್ತಿದ್ದರು. ಮದೀನಾದ ಪ್ರಸಿದ್ಧ ಶ್ರೀಮಂತ ಸಹಾಬಿಯಾಗಿದ್ದ ಉಸ್ಯೈದ
ಬಿನ್ ಹುದ್ಯೈರ್(ರ)ರ ಅತ್ಯುನ್ನತ ಸ್ಥಾನಮಾನವು ಎಲ್ಲರಿಗೂ ತಿಳಿದಿರುವ
ವಿಚಾರ. ಪ್ರವಾದಿಯವರ(ಸ) ಪ್ರಿಯ ಸಹಾಬಿಗಳಲ್ಲೋರ್ವರು. ಒಮ್ಮೆ ಹಜ್ಜ್
ನಿರ್ವಹಿಸಿ ಹಿಂದಿರುಗುತ್ತಿದ್ದ ವೇಳೆ ಅವರ ಪತ್ನಿಯು ನಿಧನರಾದರು. ಇಂತಹ
ಸಂದರ್ಭದಲ್ಲಿ ದುಃಖತಪ್ತರಾಗುವುದು ಸಹಜ. ಆದರೆ ಪ್ರಸಿದ್ಧ ಹಾಗೂ
ಘನ ವ್ಯಕ್ತಿತ್ವವನ್ನು ಹೊಂದಿದ್ದ ಓರ್ವ ಹಿರಿಯ ಸಹಾಬಿ ಮುಖದ ಮೇಲೆ
ಬಟ್ಟೆಯನ್ನಿಟ್ಟು ಅಳ ತೊಡಗಿದರು. ಆಯಿಶಾ(ರ)ರ ಬಳಿ ಈ ಘಟನೆಯನ್ನು
ಹೇಳಿದ ಜನರು, "ಇಷ್ಟೊಂದು ಉನ್ನತ ಸ್ಥಾನದಲ್ಲಿರುವ, ಘನ ವ್ಯಕ್ತಿತ್ವವನ್ನು
ಹೊಂದಿರುವ ಓರ್ವ ಸಹಾಬಿ ಈ ರೀತಿ ಅಸಹನೆಯಿಂದ ಅಳುವುದು
ನಮಗೆ ಇಷ್ಟವಾಗಲಿಲ್ಲ" ಎಂದರು. ಆಗ ಆಯಿಶಾ(ರ)ರು "ತಾವು
ಪ್ರವಾದಿಯವರ(ಸ) ಅತ್ಯುನ್ನತ ದರ್ಜೆಯ ಸಹಾಬಿಗಳಲ್ಲೋರ್ವರು. ಅದೇ
ರೀತಿ ಆರಂಭ ಕಾಲದಲ್ಲಿ ಮುಸ್ಲಿಮರಾದ ಹಿರಿಯ ಸಹಾಬಿಗಳಲ್ಲೋರ್ವರು
ತಾವು ಓರ್ವ ಸ್ತ್ರೀಗಾಗಿ ಈ ರೀತಿ ದುಃಖಿಸಬಾರದು" ಎಂದರು.

ಪ್ರಸಿದ್ಧ ಸಹಾಬಿಯಾದ ಅಬೂಹುರ್ರೈರಾ(ರ)ರ ಒಂದು ಸ್ವಾರಸ್ಯಕರ
ರೀತಿಯನ್ನು ನೋಡೋಣ. ಒಮ್ಮೆ ಅವರು(ರ) ಮಸ್ಜಿದೆ ನಬವಿಗೆ ಬಂದರು.
ಅವರು ಅಲ್ಲಿಯ ವರೆಗೆ ಈ ರೀತಿ ನಡೆದುಕೊಂಡಿರಲಿಲ್ಲ. ಅಂದು ಬಂದವರೇ
ಆಯಿಶಾ(ರ)ರ ಕೋಣೆಯ ಪಕ್ಕದಲ್ಲಿ ಕುಳಿತುಕೊಂಡು ಉಚ್ಚ ಸ್ವರದಲ್ಲಿ
ಬೇಗ ಬೇಗನೇ ಹದೀಸ್‌ಗಳನ್ನು ಉಚ್ಚರಿಸ ತೊಡಗಿದರು. ಆ ವೇಳೆ ಹ
ಆಯಿಶಾ(ರ)ರು ನಮಾಝ್ ನಿರ್ವಹಿಸುತ್ತಿದ್ದರು. ನಮಾಝ್ ಮುಗಿದ ಬಳಿಕ
ಅಬೂಹುರ್ರೈರಾ(ರ)ರನ್ನು ಆಕ್ಷೇಪಿಸಲು ಅನುವಾದಾಗ ಅವರು ಅದಾಗಲೇ
ಅಲ್ಲಿಂದ ನಿರ್ಗಮಿಸಿದ್ದರು. ಬಳಿಕ ಸಹೋದರ ಪುತ್ರ ಹಾಗೂ ಪ್ರಸಿದ್ಧ
ಶಿಷ್ಯರಾಗಿದ್ದ ಅರ್‌ವಾರು ಕೋಣೆಗೆ ಆಗಮಿಸಿದಾಗ ಆಯಿಶಾ(ರ)ರು ಬಹಳ
ಆಶ್ಚರ್ಯದಿಂದ ಹೇಳಿದರು, "ಅಬೂಹುರ್ರೈರಾ(ರ)ರು ಬೇಗ ಬೇಗನೇ
ಹದೀಸ್‌ಗಳನ್ನು ಹೇಳಿ ಹೊರಟುಬಿಟ್ಟರು. ಒಂದು ವೇಳೆ ಅವರು ಇಲ್ಲೇ
ಇರುತ್ತಿದ್ದರೆ ಪ್ರವಾದಿಯವರು(ಸ) ಎಂದಿಗೂ ಈ ರೀತಿ ಮಾತನಾಡುತ್ತಿರಲಿಲ್ಲ'
ಎಂದು ನಾನವರಿಗೆ ಹೇಳುತ್ತಿದ್ದೆ. ಅರ್‌ವಾರು ಅಬೂಹುರ್ರೈರಾ(ರ)ರ ಬಳಿ
ತೆರಳಿ ಈ ವಿಷಯವನ್ನು ತಿಳಿಸಲಿ ಎಂಬುದು ಆಯಿಶಾ(ರ)ರ ಉದ್ದೇಶವಾಗಿತ್ತು.

ಒಮ್ಮೆ ಹಜ್ಜ್ ಸಂದರ್ಭದಲ್ಲಿ ನಗುತ್ತಾ ಬಂದ ಕೆಲ ಯುವಕರು,
"ಓರ್ವ ವ್ಯಕ್ತಿ ಪೇರೆಯ ಹಗ್ಗದಲ್ಲಿ ಸಿಲುಕಿದ ಕಾರಣ ಅವರ ಕುತ್ತಿಗೆಯು
ಉಳುಕಿ ಹೋಗಿದೆ. ಇದನ್ನು ಕಂಡು ನಮಗೆ ನಗು ತಡೆಯಲಾಗಿಲ್ಲ'

ಎಂದರು. ಅವರನ್ನು ಉಪದೇಶಿಸಿದ ಆಯಿಶಾ(ರ)ರು, "ಇತರರು ಸಂಕಷ್ಟದಲ್ಲಿರುವುದನ್ನು ಕಂಡು ನಗಬಾರದು. ಯಾವುದೇ ಓರ್ವ ಮುಸ್ಲಿಮನಿಗೆ ಒಂದು ಮುಳ್ಳು ಚುಚ್ಚಿದರೂ ಅಥವಾ ಆತನ ಮೇಲೆ ಯಾವುದೇ ಸಂಕಷ್ಟ ಎರಗಿದರೂ ಅಲ್ಲಾಹನು ಆತನ ದರ್ಜೆಯನ್ನು ಉನ್ನತಗೊಳಿಸುವನು ಹಾಗೂ ಆತನ ಪಾಪಗಳನ್ನು ಮನ್ನಿಸುವನು" ಎಂದರು.

ಸಾವಿರಾರು ಸಲಹೆ–ಸೂಚನೆ ಉಪದೇಶಗಳಲ್ಲಿ ಕೆಲವೊಂದನ್ನು ಮಾತ್ರ ನಾವು ಉಲ್ಲೇಖಿಸಿದ್ದೇವೆ. ಒಂದು ವೇಳೆ ಅಲ್ಲಾಹನು ಅನುಗ್ರಹಿಸಿದರೆ ಹಾಗೂ ನಾವು ಅನುಸರಿಸಿದರೆ ಇದರಲ್ಲಿ ಎಲ್ಲಾ ಸ್ತ್ರೀ–ಪುರುಷರಿಗೂ ಪಾಠವಿದೆ.

**ಹ. ಆಯಿಶಾ(ರ)ರ ಜ್ಞಾನ ಮತ್ತು ಅನುಸರಣಾ ಮಾದರಿ:**

ಹ. ಆಯಿಶಾ(ರ)ರ ಜ್ಞಾನ, ತರಬೇತಿ, ಸುಧಾರಣಾ ರೀತಿ ನಮ್ಮೆಲ್ಲರ ಮುಂದಿದೆ. ಅವರು ಸ್ವತಃ ಎಷ್ಟು ಅನುಸರಣಶೀಲರಾಗಿದ್ದರು ಎಂಬುದನ್ನು ತಿಳಿಯುವುದು ಆವಶ್ಯಕ. ಇತರರನ್ನು ಉಪದೇಶಿಸಿ ಸ್ವತಃ ಅನುಸರಿಸದ ವ್ಯಕ್ತಿಯನ್ನು, "ಎಲ್ಲರಿಗೂ ಉಪದೇಶಿಸುವವ ಸ್ವತಃ ತಿರಸ್ಕೃತ" (ಅವಮಾನಕ್ಕೊಳಗಾದವ)" ಎನ್ನಲಾಗುತ್ತದೆ. ಪ್ರವಾದಿಯವರು(ಸ) ಸಹಾಬಿಗಳಲ್ಲಿ ಯಾರನ್ನಾದರೂ ಒಮ್ಮೆ ತಡೆದರೆ ಅದು ಮತ್ತೆಂದೂ ಸಹಾಬಿಗಳಿಂದ ಪುನರಾವರ್ತಿತವಾಗುತ್ತಿರಲಿಲ್ಲ ಎಂಬುದು ಸಹಾಬಿಗಳ ಜೀವನ ಚರಿತ್ರೆಯಿಂದ ತಿಳಿದು ಬರುತ್ತದೆ.

ಪ್ರವಾದಿಯವರು(ಸ) ಆಯಿಶಾ(ರ)ರಿಗೆ ಅವರ ಬಾಲ್ಯ ಕಾಲದಿಂದಲೇ ತರಬೇತಿ ನೀಡಿದ್ದರು. ಅವರು(ರ) ಪ್ರವಾದಿ(ಸ)ಯವರ ಒಂದೊಂದು ನಡೆ–ನುಡಿಗಳನ್ನು ನೋಡುತ್ತಿದ್ದರು ಮತ್ತು ಅದನ್ನು ಚಾಚೂತಪ್ಪದೇ ಪಾಲಿಸುತ್ತಿದ್ದರು. ನಾವಿಲ್ಲಿ ಹ. ಆಯಿಶಾ(ರ)ರ ಅನುಸರಣಾ ಮಾದರಿಯನ್ನು ಉಲ್ಲೇಖಿಸುತ್ತೇವೆ. ಸ್ತ್ರೀ–ಪುರುಷರೆಲ್ಲರಿಗೂ ಅವರು ಅನುಸರಣೆಯು ಮಾದರಿಯೋಗ್ಯವಾಗಿದೆ. ಮೊಟ್ಟ ಮೊದಲನೆಯದಾಗಿ ಆರಾಧನೆಯ ರೀತಿಯನ್ನು ನೋಡೋಣ.

**ಆರಾಧನೆ:**

ಕಡ್ಡಾಯ ಆರಾಧನೆಗಳಲ್ಲಿ ಸಹಾಬಿಗಳ ಪ್ರತಿಬದ್ಧತೆಯು ಹೆಚ್ಚು ಪ್ರಖ್ಯಾತಿ ಪಡೆದಿದೆ. ಹ. ಆಯಿಶಾ(ರ)ರು ಫರ್ಝ್ (ಕಡ್ಡಾಯ) ನಮಾಝ್‌ಗಳ ಜೊತೆಗೆ ಹೆಚ್ಚಿನ ಸಮಯವನ್ನು ನಫಿಲ್ (ಐಚ್ಛಿಕ) ನಮಾಝ್‌ಗಳಲ್ಲಿ ಕಳೆಯುತ್ತಿದ್ದರು. ಚಾಶ್ತ್‌ನ (ಪೂರ್ವಾಹ್ನದ ಐಚ್ಛಿಕ ನಮಾಝ್) ನಮಾಝನ್ನು ಪ್ರವಾದಿ(ಸ)ರ ಜೀವನ ಕಾಲದಲ್ಲೇ ತಪ್ಪದೇ ನಿರ್ವಹಿಸುತ್ತಿದ್ದರು. ಪ್ರವಾದಿಯವರ(ಸ) ನಿಧನದ ನಂತರವೂ ಚಾಶ್ತ್‌ನ ನಮಾಝನ್ನು ಎಂದಿಗೂ

ಬಿಡಲಿಲ್ಲ. ಇದರ ಕುರಿತು ಆಯಿಶಾ(ರ)ರು ಹೇಳುತ್ತಾರೆ, "ಒಂದು ವೇಳೆ ನನ್ನ ತಂದೆ ಗೋರಿಯಿಂದ ಎದ್ದು ಬಂದು ತಡೆದರೂ ನಾನು ಎಂದಿಗೂ ಇದನ್ನು ತೊರೆಯಲಾರೆ".

ಪ್ರವಾದಿಯವರ(ಸ) ಮೇಲೆ ತಹಜ್ಜುದ್ ನಮಾಝ್ ಕಡ್ಡಾಯವಾಗಿತ್ತು. ಆದರೆ ಸಮುದಾಯದ ಮೇಲೆ ಇದು ಕಡ್ಡಾಯವಲ್ಲ. ಆದರೂ ಪ್ರವಾದಿಯವರು(ಸ) ತಹಜ್ಜುದ್ ನಮಾಝ್ ನಿರ್ವಹಿಸುವಂತೆ ಸಹಾಬಿಗಳನ್ನು ಪ್ರೇರೇಪಿಸುತ್ತಿದ್ದರು. ಹ. ಆಯಿಶಾ(ರ)ರನ್ನು ರಾತ್ರಿ ವೇಳೆ ನಿದ್ದೆಯಿಂದ ಎಚ್ಚರಿಸುತ್ತಿದ್ದರು. ಹೀಗೆ ಆಯಿಶಾ(ರ)ರಿಗೆ ಪ್ರವಾದಿಯವರ(ಸ) ಜೀವನ ಕಾಲದಿಂದಲೇ ತಹಜ್ಜುದ್ ನಮಾಝ್ ತಪ್ಪದೇ ನಿರ್ವಹಿಸುವ ಅಭ್ಯಾಸ ಬೆಳೆಯಿತು. ಪ್ರವಾದಿಯವರ(ಸ) ವಿಯೋಗಾ ನಂತರವೂ ಎಂದಿಗೂ ತಹಜ್ಜುದ್ ನಮಾಝನ್ನು ಬಿಡಲಿಲ್ಲ. ಒಂದು ವೇಳೆ ತಹಜ್ಜುದ್‌ನ ಸಮಯದಲ್ಲಿ ಎಚ್ಚರವಾಗದಿದ್ದರೆ ಮುಂಜಾವಿಗೆ ಎದ್ದು ಮೊದಲು ತಹಜ್ಜುದ್ ನಮಾಝ್ ನಿರ್ವಹಿಸಿ ಬಳಿಕ ಫಜ್ರ್ ನಮಾಝ್ ಮಾಡುತ್ತಿದ್ದರು. ಒಮ್ಮೆ ಹ. ಕಾಸಿಮ್(ಸಹೋದರ ಪುತ್ರ)ರು ಮುಂಜಾವಿನ ವೇಳೆ ಆಯಿಶಾ(ರ)ರ ಕೋಣೆಗೆ ಆಗಮಿಸಿದರು. ಆಯಿಶಾ(ರ)ರು ಫಜ್ರ್‌ನಲ್ಲಿ ಹೆಚ್ಚಿನ ರಕಅತನ್ನು ನಿರ್ವಹಿಸುತ್ತಿರುವುದನ್ನು ಕಂಡು, "ಫಜ್ರ್‌ನಲ್ಲಿ ಹೆಚ್ಚಿನ ರಕಅತ್ ಏಕೆ?" ಎಂದು ಕೇಳಿದರು. ಆಯಿಶಾ(ರ)ರು, "ಇದು ತಹಜ್ಜುದ್ ನಮಾಝ್ ನಿರ್ವಹಿಸಲು ಸಾಧ್ಯವಾಗಲಿಲ್ಲ. ತಹಜ್ಜುದ್ ನಮಾಝ್ ನಿರ್ವಹಿಸದಿರಲು ನನ್ನಿಂದ ಸಾಧ್ಯವಿಲ್ಲ" ಎಂದರು.

ರಮಝಾನಿನಲ್ಲಿ ತರಾವೀಹ್ ನಮಾಝ್‌ಗಾಗಿ ಸೇವಕನಾದ ಝಕ್ವಾನ್‌ನನ್ನು ತಯಾರುಗೊಳಿಸುತ್ತಿದ್ದರು. ಆತ ಇಮಾಮ್ ಆಗಿ ನಿಲ್ಲುತ್ತಿದ್ದ. ಆಯಿಶಾ(ರ)ರು ಆತನ ಹಿಂಬಾಲಕರಾಗಿ ನಿಂತು ತರಾವೀಹ್ ನಮಾಝ್ ನಿರ್ವಹಿಸುತ್ತಿದ್ದರು.

ರಮಝಾನಿನ ಉಪವಾಸವನ್ನು ಹೊರತುಪಡಿಸಿ ಆಯಿಶಾ(ರ)ರು ಇತರ ದಿನಗಳಲ್ಲೂ ಉಪವಾಸವನ್ನಾಚರಿಸುತ್ತಿದ್ದರು. ಅರಫಾದ ದಿನ ತಪ್ಪದೇ ಉಪವಾಸವನ್ನಾಚರಿಸುತ್ತಿದ್ದರು. ಒಮ್ಮೆ ಅರಫಾದ ದಿನವು ಅತೀ ಹೆಚ್ಚು ಸೆಕೆ ಹಾಗೂ ತಾಪದಿಂದ ಕೂಡಿತ್ತು. ಅಂದು ಎಂದಿನಂತೆ ಆಯಿಶಾ(ರ)ರು ಉಪವಾಸ ಹಿಡಿದಿದ್ದರು. ತೀವ್ರ ಸೆಕೆಯಿಂದಾಗಿ ತಲೆಯ ಮೇಲೆ ಆಗಾಗ್ಗೆ ನೀರನ್ನು ಚಿಮುಕಿಸುತ್ತಿದ್ದರು. ಅಷ್ಟರಲ್ಲೇ ಸಹೋದರ ಅಬ್ದುರ್ರಹ್ಮಾನ್‌ರು ಅಲ್ಲಿಗೆ ಆಗಮಿಸಿದರು. "ಇಷ್ಟು ಸೆಕೆಯಲ್ಲಿ ಐಚ್ಛಿಕ ಉಪವಾಸವಿಡುವ ಆವಶ್ಯಕತೆ ಏನಿತ್ತು?" ಎಂದರು. ಆಗ ಆಯಿಶಾ(ರ)ರು– ಪ್ರವಾದಿಯವರು(ಸ) ಈ

ರೀತಿ ಹೇಳಿದ್ದಾರೆ, "ಯಾರು ಅರಫಾದ ದಿನ ಉಪವಾಸವನ್ನಾಚರಿಸುತ್ತಾರೋ ಅವರ ಇಡೀ ವರ್ಷದ ಪಾಪಗಳು ಮನ್ನಿಸಲ್ಪಡುತ್ತವೆ. ಆದುದರಿಂದ ನಾನು ಅರಫಾ ದಿನದ ಉಪವಾಸವನ್ನು ಬಿಡಲಾರೆ" ಎಂದರು. ಆಯಿಶಾ(ರ)ರು ಪ್ರತೀ ವರ್ಷ ತಪ್ಪದೇ ಹಜ್ಜ್ ನಿರ್ವಹಿಸುತ್ತಿದ್ದರು.

## ದೇವಭಯ (ತಕ್ವಾ):

ಆರಾಧನೆ ಹಾಗೂ ಕರ್ಮಗಳ ನೈಜ ಸ್ಫೂರ್ತಿ ದೇವಭಯವಾಗಿದೆ. ಆಯಿಶಾ(ರ)ರು ಬಹಳ ಮೃದು ಸ್ವಭಾವಿಯಾಗಿದ್ದರು. ಆರಾಧನೆಯ ವೇಳೆ ದೇವಭಯವು ಆವರಿಸಿ ಬಿಡುತ್ತಿತ್ತು. ಕೆಲವು ಸೂಕ್ತಗಳನ್ನು ಪಠಿಸುವಾಗ ಅತ್ತು ಬಿಡುತ್ತಿದ್ದರು. ಹ. ಅಲೀ(ರ)ಯವರ ಕಾಲದಲ್ಲಿ ಅವರಿಂದ(ರ) ಒಂದು ಪ್ರಮಾದ ಸಂಭವಿಸಿತ್ತು. ಕುರ್‌ಆನಿನಲ್ಲಿ ನೀವು ಮನೆಗಳಲ್ಲೇ ಉಳಿದುಕೊಳ್ಳಿರಿ ಎಂಬ ಆದೇಶವಿದ್ದರೂ, ಇತರ ಪ್ರವಾದಿ ಪತ್ನಿಯರಂತೆ ಆಯಿಶಾ(ರ)ರು ಮನೆಯಲ್ಲಿ ಉಳಕೊಳ್ಳಲಿಲ್ಲ. ಇದಕ್ಕೆ ಸಂಬಂಧಿಸಿದ ಕುರ್‌ಆನ್ ಸೂಕ್ತಗಳನ್ನು ಪಠಿಸುವಾಗ ಆಯಿಶಾ(ರ)ರು ಬಿಕ್ಕಿ ಬಿಕ್ಕಿ ಅಳುತ್ತಿದ್ದರು. "ಅಕಟ! ನಾನು ನಾಶವಾಗಿ ಬಿಡುತ್ತಿದ್ದರೆ!" ಎನ್ನುತ್ತಿದ್ದರು.

✦ ಅಬ್ದುಲ್ಲಾ ಬಿನ್ ಝುಬೈರ್(ರ)[ಸಹೋದರಿ ಪುತ್ರ]ರು ಚಿಕ್ಕಮ್ಮನಿಗೆ [ಆಯಿಶಾ(ರ)] ಮೊತ್ತವನ್ನು ಕಳುಹಿಸುತ್ತಿದ್ದರು. ಈ ಕಾರಣದಿಂದಾಗಿ ಒಮ್ಮೆ ಆಯಿಶಾ(ರ)ರು ಅಬ್ದುಲ್ಲಾ(ರ)ರಿಂದ ಮುನಿಸಿಕೊಂಡರು. ಒಮ್ಮೆ ಅಬ್ದುಲ್ಲಾ(ರ)ರು ಒಂದು ದೊಡ್ಡ ಮೊತ್ತವನ್ನು ಕಳುಹಿಸಿಕೊಟ್ಟರು. ಆಯಿಶಾ(ರ)ರು ಅವೆಲ್ಲವನ್ನೂ ದಾನ ಮಾಡಿಬಿಟ್ಟರು. ಅಬ್ದುಲ್ಲಾರಿಗೆ ಈ ವಿಷಯ ತಿಳಿದಾಗ, "ಇಷ್ಟೊಂದು ಮೊತ್ತವನ್ನು ನಾನು ಎಲ್ಲಿಯ ವರೆಗೆ ನೀಡಲಿ" ಎಂದು ಬಿಟ್ಟರು. ಇದರಿಂದ ದುಃಖಿತರಾದ ಆಯಿಶಾ(ರ)ರು, "ನಾನು ಅಬ್ದುಲ್ಲಾ(ರ)ನೊಂದಿಗೆ ಇನ್ನು ಮುಂದೆ ಕೇಳಲಾರೆ" ಎಂದು ಪ್ರತಿಜ್ಞೆ ಮಾಡಿದರು. ಅಬ್ದುಲ್ಲಾ(ರ)ರಿಗೆ ಈ ವಿಷಯ ತಿಳಿದಾಗ ಅವರು ಆತಂಕಗೊಂಡರು. ಚಿಕ್ಕಮ್ಮನ ಮನವೊಲಿಸಲು ಪ್ರಯತ್ನಿಸಿದರೂ ಅವರು(ರ) ಪ್ರತಿಜ್ಞೆಯನ್ನು ಮುರಿಯಲು ತಯಾರಾಗಲಿಲ್ಲ. ಕೊನೆಗೆ ಅಬ್ದುಲ್ಲಾ(ರ)ರು ಹಿರಿಯರ ಸಮಕ್ಷಮ ತಪ್ಪನ್ನು ಮನ್ನಿಸುವಂತೆ ಕೇಳಿಕೊಂಡರು. ಹಿರಿಯರ ಮಾತಿಗೆ ದಾರಿ ಕಾಣದೆ ಪ್ರತಿಜ್ಞೆಯನ್ನು ಮುರಿದು ಕಫ್ಫಾರ (ಪರಿಹಾರ) ನೀಡಿದರು. ಗುಲಾಮರನ್ನು ಒಂದೊದರಂತೆ ಸ್ವತಂತ್ರಗೊಳಿಸಿದರು. ಹೀಗೆ 40 ಮಂದಿ ಗುಲಾಮರು ಸ್ವತಂತ್ರರಾದರು. ಆದರೂ ಪ್ರತಿಜ್ಞೆಯನ್ನು ಮುರಿದ ಪ್ರಭಾವ ಎಷ್ಟಿತ್ತೆಂದರೆ ನೆನಪಾದಾಗಲೆಲ್ಲಾ ಅವರು ಅತ್ತು ಬಿಡುತ್ತಿದ್ದರು.

**ಔದಾರ್ಯತೆ:**

ಆಯಿಶಾ(ರ)ರು ಬಹಳ ಉದಾರಿಯಾಗಿದ್ದರು. ಕೈಗೆ ಬಂದುದೆಲ್ಲವನ್ನೂ ಬೇಡುವವನಿಗೆ ದಾನ ಮಾಡಿಬಿಡುತ್ತಿದ್ದರು. ಅಬ್ದುಲ್ಲಾ ಬಿನ್ ಝುಬೈರ್(ರ)ರು ಹೇಳುತ್ತಾರೆ, "ನಾನು ನನ್ನ ಚಿಕ್ಕಮ್ಮನಿಗಿಂತ [ಆಯಿಶಾ(ರ)] ಉದಾರಿ ಬೇರಾರನ್ನೂ ಕಂಡಿಲ್ಲ."

ಇನ್ನೋರ್ವ ಸೋದರಿ ಪುತ್ರ, ಅರ್‌ವಾ ಹೇಳುತ್ತಾರೆ, "ಚಿಕ್ಕಮ್ಮನಿಗೆ ನನ್ನ ಮುಂದೆಯೇ ಎಪ್ಪತ್ತು ಸಾವಿರದ ಮೊತ್ತ ಬಂತು. ಅವರು(ರ) ಅದೆಲ್ಲವನ್ನೂ ದಾನ ಮಾಡಿಬಿಟ್ಟರು."

✦ ಒಮ್ಮೆ ಹ. ಮುಆವಿಯ(ರ)ರು ಒಂದು ಲಕ್ಷದ ಮೊತ್ತವನ್ನು ಕಳುಹಿಸಿದರು. ಆಯಿಶಾ(ರ)ರು ಆ ಮೊತ್ತವನ್ನು ವಿತರಿಸತೊಡಗಿದರು. ಅಂದು ಆಯಿಶಾ(ರ)ರು ಉಪವಾಸದಿಂದಿದ್ದರು. ಸಂಜೆ ವೇಳೆಗೆ ಎಲ್ಲಾ ಮೊತ್ತವನ್ನು ದಾನ ಮಾಡಿದರು. ದಾಸಿಯು, "ಇಫ್ತಾರ್‌ಗಾಗಿ ಏನಾದರೂ ಉಳಿಸಿಕೊಳ್ಳಬೇಕಿತ್ತು" ಎಂದಾಗ ಆಯಿಶಾ(ರ)ರು, "ನೀನು ಆಗಲೇ ಹೇಳಲಿಲ್ಲವೇಕೆ?" ಎಂದರು.

ಇದೇ ರೀತಿ ಒಮ್ಮೆ ಅಬ್ದುಲ್ಲಾ ಬಿನ್ ಝುಬೈರ್(ರ)ರು ಒಂದು ಲಕ್ಷ ಮೊತ್ತವನ್ನು ಕಳುಹಿಸಿದರು. ಅವೆಲ್ಲವನ್ನೂ ದಾನ ಮಾಡಿದರು. ಅದರಲ್ಲಿ 2 ದಿರ್ಹಮ್ ಉಳಿದಿತ್ತು. ಮನೆಯ ಮುಂದೆ ಓರ್ವ ಭಿಕ್ಷುಕ ನಿಂತಿದ್ದ. "ನೀವು ಇಂದು ಉಪವಾಸದಿಂದಿದ್ದೀರಿ. ಈ ಎರಡು ದಿರ್ಹಮ್ ಅನ್ನು ಉಳಿಸಿಕೊಳ್ಳಿರಿ" ಎಂದು ದಾಸಿ ಹೇಳಿದಳು. ಆಗ ಆಯಿಶಾ(ರ)ರು, "ಈಗ ಬೇಡ" ಎಂದು ಆ ಎರಡು ದಿರ್ಹಮ್ ಅನ್ನೂ ಭಿಕ್ಷುಕನಿಗೆ ನೀಡಿ ಬಿಟ್ಟರು.

✦ ಒಮ್ಮೆ ಆಯಿಶಾ(ರ)ರು ಉಪವಾಸದಿಂದಿದ್ದರು. ಅಂದು ಇಫ್ತಾರ್‌ಗಾಗಿ ಕೇವಲ ಒಂದು ಚಪಾತಿ ಮಾತ್ರವಿತ್ತು. ಅಷ್ಟರಲ್ಲಿ ಓರ್ವ ಮಹಿಳೆ ಅಲ್ಲಿಗೆ ಬಂದಳು. ದಾಸಿಯನ್ನು ಕರೆದು ಚಪಾತಿಯನ್ನು ಆ ಮಹಿಳೆಗೆ ನೀಡುವಂತೆ ಹೇಳಿದರು. ಆಗ ದಾಸಿಯು, "ಇಫ್ತಾರ್‌ಗಾಗಿ ಆ ಚಾತಿಯನ್ನು ಇಟ್ಟಿದ್ದೆ" ಎಂದಳು. ಆಯಿಶಾ(ರ)ರು, "ಅದನ್ನು ಕೊಟ್ಟು ಬಿಡು" ಎಂದರು. ಅಂದು ಸಂಜೆ ವೇಳೆಗೆ ಎಲ್ಲಿಂದಲೋ ಆಡಿನ ಮಾಂಸದ ಪದಾರ್ಥ ಬಂತು. ಆಗ ಆಯಿಶಾ(ರ)ರು ದಾಸಿಯ ಒಳ್ಳೆಯ ವಸ್ತುವನ್ನು ಕಳುಹಿಸಿದ್ದಾನೆ. ಅದು ಒಳ್ಳೆಯದೋ ಅಥವಾ ಈ ಪದಾರ್ಥ ಹಾಗೂ ಸತ್ಕರ್ಮವೊ?" ಎಂದರು.

✦ ಒಮ್ಮೆ ತನ್ನ ಒಂದು ಮನೆಯನ್ನು ಮಾರಿ ಇಡೀ ಮೊತ್ತವನ್ನು ದಾನ ಮಾಡಿದರು.

✦ ಒಂದು ಸ್ವಾರಸ್ಯಕರ ಘಟನೆ ಕೇಳಿರಿ. ಅಂದು ತಿನ್ನಲು ಮನೆಯಲ್ಲಿ ಏನೂ ಇರಲಿಲ್ಲ. ತಡಕಾಡಿದಾಗ ಒಂದು ಖರ್ಜೂರ ಸಿಕ್ಕಿತು. ಅದನ್ನು ಎರಡು ತುಂಡು ಮಾಡಿ ಇಬ್ಬರು ಮಕ್ಕಳಿಗೆ ನೀಡಿದರು.

✦ ಒಮ್ಮೆ ಓರ್ವ ಭಿಕ್ಷುಕ ಮನೆಬಾಗಿಲಿಗೆ ಬಂದನು. ಮನೆಯಲ್ಲಿ ಕೇವಲ ಒಂದೇ ಒಂದು ದ್ರಾಕ್ಷಿ ಹಣ್ಣಿತ್ತು. ಆಯಿಶಾ(ರ)ರು ಅದನ್ನು ಆತನಿಗೆ ನೀಡಿದಾಗ ಆತ ಆಶ್ಚರ್ಯಚಕಿತನಾಗಿ ಅವರನ್ನೇ(ರ) ದಿಟ್ಟಿಸಿ ನೋಡಿದೆ. ಆಗ ಆಯಿಶಾ(ರ)ರು, "ನೋಡು ಇದಿಷ್ಟು ಮಾತ್ರವಿದೆ. ಯಾರು ಅಣುಗಾತ್ರದಷ್ಟು ಪುಣ್ಯ ಮಾಡುತ್ತಾನೋ ಅದನ್ನು ಆತ ಪಡದೇ ತೀರುವನು" ಎಂದರು.

✦ ಆಯಿಶಾ(ರ)ರಿಗೆ ಮಕ್ಕಳಿರಲಿಲ್ಲ. ಆದುದರಿಂದ ಅವರು(ರ) ಮಕ್ಕಳನ್ನು ದತ್ತು ಪಡೆದು ಸಾಕುತ್ತಿದ್ದರು. ಅವರಿಗೆ ತರಬೇತಿ ನೀಡುತ್ತಿದ್ದರು. ದೊಡ್ಡವರಾದಾಗ ಅವರ ವಿವಾಹ ಮಾಡಿಸುತ್ತಿದ್ದರು. ಮಾತು ಮಾತಿಗೂ ಗುಲಾಮರನ್ನು ಸ್ವತಂತ್ರಗೊಳಿಸುತ್ತಿದ್ದರು.

**ಸ್ವಾಭಿಮಾನ:**

ಆಯಿಶಾ(ರ)ರು ಬಹಳ ಸ್ವಾಭಿಮಾನಿಯಾಗಿದ್ದರು. ಇದಕ್ಕೆ ಸಂಬಂಧಿಸಿದಂತೆ ಹಲವಾರು ಘಟನೆಗಳಿವೆ.

✦ ಆಯಿಶಾ(ರ)ರ ಮೇಲೆ ಕಪಟ ವಿಶ್ವಾಸಿಗಳು ಅಪವಾದ ಹೊರಿಸಿದ ಘಟನೆಯು ಈಗಾಗಲೇ ನಿಮ್ಮ ಮುಂದೆ ಬಂದಿದೆ. ಅಂದು ಅಲ್ಲಾಹನು ಕೆಲ ಸೂಕ್ತಗಳನ್ನು ಅವತೀರ್ಣಗೊಳಿಸಿ ಆಯಿಶಾ(ರ)ರ ಪಾವಿತ್ರ್ಯದ ಬಗ್ಗೆ ಸಾಕ್ಷಿ ನುಡಿದಿದ್ದನು. ಅಪವಾದ ದಿಂದ ಮುಕ್ತವಾದ ಬಳಿಕ ಆಯಿಶಾ(ರ)ರ ತಾಯಿಯು ಪತಿಗೆ ಕೃತಜ್ಞತೆ ಸಲ್ಲಿಸುವಂತೆ ಮಗಳಿಗೆ ಸೂಚಿಸಿದಾಗ, ಆಯಿಶಾ(ರ)ರು, "ನಾನು ಕೇವಲ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುತ್ತೇನೆ. ಆತನು ನನ್ನನ್ನು ಸಂರಕ್ಷಿಸಿದನು ಹಾಗೂ ಗೌರವ ನೀಡಿದನು" ಎಂದರು.

✦ ಒಮ್ಮೆ ಅರಬ್‌ನ ಓರ್ವ ಶ್ರೀಮಂತ ವ್ಯಕ್ತಿ ಉಡುಗೊರೆಯ ರೂಪದಲ್ಲಿ ಒಂದು ದೊಡ್ಡ ಮೊತ್ತ ಹಾಗೂ ಬಟ್ಟೆಗಳನ್ನು ಕಳುಹಿಸಿದನು. ಯಾರಾದರೂ ಉಡುಗೊರೆ ನೀಡಿದರೆ ಅದರ ಬದಲು ಉಡುಗೊರೆಯಾಗಿ ಏನಾದರೂ ನೀಡುವುದು ಆಯಿಶಾ(ರ)ರ ರೂಢಿಯಾಗಿತ್ತು. ಆದರೆ ಈ ಶ್ರೀಮಂತ ವ್ಯಕ್ತಿಯ ಉಡುಗೊರೆ ಬಂದಾಗ ಕೊಡಲು ಮನೆಯಲ್ಲಿ ಏನೂ ಇರಲಿಲ್ಲ. ಆದುದರಿಂದ ಉಡುಗೊರೆಯನ್ನು ಹಿಂದಿರುಗಿಸಲು ಮುಂದಾದಾಗ ಆಯಿಶಾ(ರ)ರಿಗೆ "ಉಡುಗೊರೆಯನ್ನು ಹಿಂದಿರುಗಿಸುವುದರಿಂದ

ಪ್ರವಾದಿಯವರು(ಸ) ತಡೆದಿದ್ದಾರೆ" ಎಂಬ ಮಾತುಗಳು ನೆನಪಾದವು. ಅದನ್ನು ಇಟ್ಟುಕೊಂಡು ಬಡವರಲ್ಲಿ ಹಂಚಿಬಿಟ್ಟರು.

✦ ಗೌರವ-ಘನತೆ ಮತ್ತು ಸ್ವಾಭಿಮಾನದ ಕಾರಣ ಒಮ್ಮೆ ಆಯಿಶಾ(ರ)ರು ಸೋದರಿ ಪುತ್ರ ಅಬ್ದುಲ್ಲಾ ಬಿನ್ ಝುಬೈರ್(ರ)ರಿಂದ ಮುನಿಸಿಕೊಂಡರು. ಸ್ವಾಭಿಮಾನದ ಕಾರಣದಿಂದ ಅವರಿಗೆ ಪ್ರಶಂಸೆ ಇಷ್ಟವಿರಲಿಲ್ಲ. ಪ್ರಸಿದ್ಧ ಘಟನೆ. ಆಯಿಶಾ(ರ)ರು ಕೊನೆಯ ಕಾಲದಲ್ಲಿ ಅನಾರೋಗ್ಯ ಪೀಡಿತರಾದಾಗ ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಅವರ(ರ) ಕ್ಷೇಮ ವಿಚಾರಿಸಲು ಅನುಮತಿ ಕೇಳಿದರು. ಆಯಿಶಾ(ರ)ರ ಜ್ಞಾನಸಿದ್ಧಿ, ದೇವಭಯವನ್ನು ಪ್ರಶಂಸಿಸುವವರಲ್ಲಿ ಅಬ್ದುಲ್ಲಾ ಬಿನ್ ಅಬ್ಬಾಸ್(ರ)ರೂ ಓರ್ವರಾಗಿದ್ದರು. ಅಬ್ದುಲ್ಲಾ(ರ)ರು ಬಂದು ಪ್ರಶಂಸೆಯ ಮಾತುಗಳನ್ನಾಡಬಹುದೆಂಬ ಸಂಶಯ ಉಂಟಾದಾಗ ಆಯಿಶಾ(ರ)ರು ಸ್ವಲ್ಪ ತಡೆದರು. ಆಗ ಜನರು ಹ. ಅಬ್ದುಲ್ಲಾ(ರ)ರ ಸ್ಥಾನಮಾನವನ್ನು ನೆನಪಿಸಿ ಶಿಫಾರಸ್ಸು ಮಾಡಿದಾಗ, ಆಯಿಶಾ(ರ)ರು ಅನುಮತಿ ನೀಡಿದರು. ಅಬ್ದುಲ್ಲಾ(ರ)ರು ಒಳಗೆ ಪ್ರವೇಶಿಸಿದವರೇ ಆಯಿಶಾ(ರ)ರನ್ನು ಹೊಗಳ ತೊಡಗಿದರು. ಇದನ್ನು ಕೇಳಿದ ಆಯಿಶಾ(ರ)ರು "ಅಕಟ! ನಾನು ಹುಟ್ಟದೇ ಇರುತ್ತಿದ್ದರೆ!" ಎಂದರು.

**ಭರವಸೆ ಹಾಗೂ ಸಂತೃಪ್ತಿ:**

ಸಂತೃಪ್ತಿಯ ಬಗ್ಗೆ ಪ್ರವಾದಿಯವರು(ಸ) ಹ. ಆಯಿಶಾ(ರ)ರಿಗೆ ನೀಡಿದ್ದ ತರಬೇತಿಯಂತೆ ಅವರು(ರ) ಅದರ ಮಾದರಿಯಾಗಿದ್ದರು. ಪ್ರವಾದಿಯವರು(ಸ) ನಿಧನದ ವೇಳೆ, "ಆಯಿಶಾ! ಬಂಗಾರದ ಒಂದು ಸಣ್ಣ ತುಂಡು ಇರಬಹುದಲ್ಲವೇ?" ಎಂದರು. ಇದನ್ನು ಕೇಳಿದಾಕ್ಷಣ ಆಯಿಶಾ(ರ)ರು ಅದನ್ನು ತಂದರು. ಪ್ರವಾದಿಯವರು(ಸ) ಅದನ್ನು ದಾನ ಮಾಡಿಬಿಡುವಂತೆ ಹೇಳಿದರು. ಆಯಿಶಾ(ರ)ರು ಅದನ್ನು ದಾನ ಮಾಡಿದರು. ವಾಸ್ತವವಾಗಿ ಪ್ರವಾದಿಯವರು(ಸ) ನಿಧನ ಹೊಂದಿದ ದಿನ ಮನೆಯಲ್ಲಿ ತಿನ್ನಲು ಏನೂ ಇರಲಿಲ್ಲ.

✦ ಪ್ರವಾದಿಯವರ(ಸ) ನಂತರ ಹೆಚ್ಚೆಚ್ಚು ಉಡುಗೊರೆಗಳು ಬರುತ್ತಿದ್ದವು. ಆದರೆ ಸಂಜೆ ವೇಳೆಗೆ ಏನೂ ಉಳಿಯುತ್ತಿರಲಿಲ್ಲ. ಎಲ್ಲವನ್ನೂ ದಾನ ಮಾಡಿ ಬಿಡುತ್ತಿದ್ದರು. ದಾಸಿಯು ಟೀಕಿಸುತ್ತಿದ್ದಳು. ಅದಕ್ಕೆ "ಪ್ರವಾದಿಯವರ(ಸ) ಪ್ರಕಾರ ನಾವು ಎಂದಿಗೂ ಬಡವರಂತೆ ಜೀವಿಸಬೇಕು" ಎನ್ನುತ್ತಿದ್ದರು.

ಪ್ರವಾದಿ(ಸ)ಯವರೊಂದಿಗಿರುತ್ತಿದ್ದ ಅದೇ ಕೋಣೆಯಲ್ಲಿ ಜೀವನ

ಸವೆಸಿದರು. ಉಮರ್(ರ)ರು ತಮ್ಮ ಗೋರಿಗಾಗಿ ಜಾಗ ಕೇಳಿದಾಗ ಮಾತ್ರ ಆಯಿಶಾ(ರ)ರು ಆ ಕೋಣೆಯನ್ನು ಬಿಟ್ಟು ಕೊಟ್ಟಿದ್ದರು.

ಲಕ್ಷಗಟ್ಟಲೆ ಮೊತ್ತವನ್ನು ಒಂದೇ ದಿನದಲ್ಲಿ ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡಿ ಬಿಡುತ್ತಿದ್ದರು. ಬಳಿಕ ಸಂತೋಷ-ಸಂತೃಪ್ತಿಯೊಂದಿಗೆ ಎದ್ದು ನಿಲ್ಲುತ್ತಿದ್ದರು.

**ಕ್ಷಮಾಗುಣ:**

ಕ್ಷಮಾಗುಣದ ಸಾವಿರಾರು ಘಟನೆಗಳಿವೆ. ಸವತಿಯರೊಂದಿಗಿನ ಸಂಬಂಧದ, ಅವರೊಂದಿಗಿನ ವೈಮನಸ್ಸಿನ ಬಗ್ಗೆ ನಾವು ಈಗಾಗಲೇ ಉಲ್ಲೇಖಿಸಿದ್ದೇವೆ. ವೈಮನಸ್ಸಿದ್ದರೂ ಸವತಿಯರ ಬಗ್ಗೆ ಚಾಡಿ, ಪರದೂಷಣೆ ಮಾಡುತ್ತಿರಲಿಲ್ಲ. ಇತರರ ಬಗ್ಗೆ ಕೆಟ್ಟದ್ದನ್ನು ಕೇಳಲೂ ಅವರು ಇಷ್ಟಪಡುತ್ತಿರಲಿಲ್ಲ. ಎಲ್ಲಿಯ ವರೆಗೆಂದರೆ ಅಪವಾದದ ಸಂದರ್ಭದಲ್ಲಿ ಕಪಟವಿಶ್ವಾಸಿಗಳ ವದಂತಿಗಳಲ್ಲಿ ಹ. ಹಸ್ಸಾನ್(ರ) ಕೂಡಾ ದನಿಗೂಡಿಸಿದ್ದರು. ಅವರನ್ನೂ ಆಯಿಶಾ(ರ)ರು ಕ್ಷಮಿಸಿಬಿಟ್ಟರು. ಜನರು ಹಸ್ಸಾನ್(ರ)ರ ಬಗ್ಗೆ ಕೆಟ್ಟದ್ದನ್ನು ನುಡಿದಾಗ ಅವರನ್ನು ತಡೆದು ಆಯಿಶಾ(ರ)ರು ಹಸ್ಸಾನ್(ರ)ರನ್ನು ಹೊಗಳುತ್ತಾ, "ಪ್ರವಾದಿಯವರ(ಸ) ಪರ ಅರಬರ ಕಟು ಕಾವ್ಯದ ವಿರುದ್ಧ ಕಾವ್ಯ ರೂಪದಲ್ಲಿ ಉತ್ತರ ನೀಡಿದ ಸಹಾಬಿಯಾಗಿದ್ದಾರೆ" ಎಂದರು.

ಹ. ಹಸ್ಸಾನ್(ರ)ರು ಆಯಿಶಾ(ರ)ರ ಬಳಿ ಬಂದಾಗ ಅವರನ್ನು ಗೌರವದಿಂದ ಕುಳ್ಳಿರಿಸುತ್ತಿದ್ದರು. "ಇವರು ಪ್ರವಾದಿಯುವರನ್ನು(ಸ) ಪ್ರಶಂಸಿಸುವವರಾಗಿದ್ದಾರೆ" ಎಂದು ಜನರಲ್ಲಿ ಹೇಳುತ್ತಿದ್ದರು. ಹಸ್ಸಾನ್(ರ)ರ ಕಾವ್ಯವನ್ನು ಆಲಿಸಿ ಅವರನ್ನು ಪ್ರೋತ್ಸಾಹಿಸುತ್ತಿದ್ದರು.

ಒಂದು ಸ್ವಾರಸ್ಯಕರ ಘಟನೆ. ಓರ್ವ ವ್ಯಕ್ತಿಯ ಬಗ್ಗೆ ಆತ ಕೆಟ್ಟವನೆಂದು ಭಾವಿಸುತ್ತಿದ್ದರು. ಆತ ಸಾವನ್ನಪ್ಪಿದಾಗ ಆಯಿಶಾ(ರ)ರು ದುಆಕ್ಕಾಗಿ ಕೈಗಳನ್ನೆತ್ತಿದರು. ಅಲ್ಲಿ ಉಪಸ್ಥಿತರಿದ್ದ ಶಿಷ್ಯರು ಆಶ್ಚರ್ಯಚಕಿತರಾಗಿ ಆ ವ್ಯಕ್ತಿ ಇಂತಿಂತಹವನಾಗಿದ್ದಾನೆಂದರು. ಆಗ ಆಯಿಶಾ(ರ)ರು "ಮೃತರ ಒಳಿತಿನ್ನು ಸ್ಮರಿಸಿರಿ" ಎಂದು ಪ್ರವಾದಿಯವರು(ಸ) ಹೇಳಿದ್ದಾರೆ" ಎಂದರು.

**ಪರಾಕ್ರಮ:**

ಅಲ್ಲಾಹನ ಹೊರತು ಬೇರಾರಿಗೂ ಅವರು(ರ) ಭಯ ಪಡುತ್ತಿರಲಿಲ್ಲ. ರಾತ್ರಿ ವೇಳೆ ಕಬರಸ್ತಾನಕ್ಕೆ ಹೋಗುತ್ತಿದ್ದರು. ಯುದ್ಧ ಮೈದಾನದಲ್ಲಿ ರಕ್ತಸಿಕ್ತರಾದ ಗಾಯಾಳುಗಳಿಗೆ ನೀರು ಕುಡಿಸುತ್ತಿದ್ದರು. ಕಂದಕ ಯುದ್ಧದಲ್ಲಿ ಇಡೀ ಅರಬ್

ಮದೀನಾದ ಮೇಲೆ ಮುತ್ತಿಗೆ ಹಾಕಿದಾಗ ಮುಸ್ಲಿಮರಲ್ಲಿ ಆತಂಕದ ವಾತಾವರಣ ಸೃಷ್ಟಿಯಾಗಿತ್ತು. ಆಯಿಶಾ(ರ)ರು ಆಗಾಗ್ಗೆ ಹೋಗಿ ಯುದ್ಧ ಮೈದಾನವನ್ನು ನೋಡುತ್ತಿದ್ದರು. ಯುದ್ಧದಲ್ಲಿ ಪಾಲ್ಗೊಳ್ಳಲು ಹಲವು ಬಾರಿ ಪ್ರವಾದಿಯವರಲ್ಲಿ(ಸ) ಅನುಮತಿ ಕೇಳಿದರು. ಆದರೆ ಅನುಮತಿ ಸಿಗಲಿಲ್ಲ. ಜಮಲ್ ಯುದ್ಧದಲ್ಲಿ ಹ. ಅಲೀ(ರ)ಯವರ ವಿರುದ್ಧ ಪಾಲ್ಗೊಂಡು ಪರಾಕ್ರಮ ಮೆರೆದ ಬಗ್ಗೆ ನಾವು ಈಗಾಗಲೇ ತಿಳಿಸಿದ್ದೇವೆ. ಅಲೀ(ರ)ಯವರು ಆಯಿಶಾ(ರ)ರ ಒಂಟೆಯ ಕಾಲುಗಳನ್ನು ಕತ್ತರಿಸಿದಾಗ ಆಯಿಶಾ(ರ)ರು ಯುದ್ಧ ರಂಗದಿಂದ ಹಿಂದೆ ಸರಿದಿದ್ದರು. ಈ ಸಂದರ್ಭದಲ್ಲಿ ಸಹೋದರ ಮುಹಮ್ಮದ್ ಬಿನ್ ಅಬೂಬಕರ್ ಪಲ್ಲಕ್ಕಿಯ ಒಳಗಡೆ ಕೈ ಹಾಕಿ ಸಹೋದರಿಯನ್ನು ಬೀಳುವುದರಿಂದ ರಕ್ಷಿಸಿದಾಗ ಅವರನ್ನು ಗದರಿಸಿ "ಯಾರು?" ಎಂದು ಕೇಳಿದರು.

## ಪರ್ದಾ:

✦ ಹಜರುಲ್ ಅಸ್ವದ್ ಅನ್ನು ಚುಂಬಿಸುವುದಕ್ಕೆ ಅಧಿಕ ಪುಣ್ಯವಿದೆ. ಆದರೆ ಜನಸಂದಣಿಯಿಂದಾಗಿ ಅವರೆಂದಿಗೂ ಪ್ರಯತ್ನಿಸಲಿಲ್ಲ. ಒಮ್ಮೆ ಕೆಲವು ಸವತಿಯರು, "ಬನ್ನಿ ನಾವು ನಿಮ್ಮನ್ನು ಸುತ್ತವರಿಯುತ್ತೇವೆ" ಎಂದರು. ಆದರೂ ಆಯಿಶಾ(ರ)ರು ಅದಕ್ಕೆ ಸಮ್ಮತಿಸಲಿಲ್ಲ. ತವಾಫ್ ಮಾಡುವಾಗ ಮುಖದ ಮೇಲೆ ಪರದೆ ಹಾಕುತ್ತಿದ್ದರು. ಆಯಿಶಾ(ರ)ರು ತವಾಫ್ ಮಾಡುವ ವೇಳೆ ಪುರುಷರು ಮುತಾಫ್ ಅನ್ನು ಖಾಲಿ ಮಾಡುತ್ತಿದ್ದರು.

✦ ಹ. ಉಮರ್ ಫಾರೂಕ್(ರ)ರನ್ನು ಹ. ಆಯಿಶಾ(ರ)ರ ಕೋಣೆಯಲ್ಲಿ ದಫನ ಮಾಡಿದಾಗ ಮೃತರಿಂದ ಪರ್ದಾ ಮಾಡುವ ಅವಶ್ಯಕತೆ ಇಲ್ಲದಿದ್ದರೂ ಆಯಿಶಾ(ರ)ರು ಆ ಕೋಣೆಯನ್ನು ತೊರೆದಿದ್ದರು.

## ಪ್ರತಿನಿಧಿತ್ವ (ವಕಾಲತ್ತು)

ಪ್ರವಾದಿಯವರು(ಸ) ಅಲ್ಲಾಹನ ಅಂತಿಮ ಸಂದೇಶವಾಹಕರಾಗಿದ್ದಾರೆ. ಧರ್ಮ ಹಾಗೂ ಶರೀಅತ್‌ನಲ್ಲಿ ಪ್ರವಾದಿಯವರ(ಸ) ತೀರ್ಪನ್ನು ಅಂತಿಮ ತೀರ್ಪು ಎಂದು ಪರಿಗಣಿಸಲಾಗುತ್ತದೆ. ಪ್ರವಾದಿಯವರ(ಸ) ತೀರ್ಮಾನದಿಂದ ದೂರವುಳಿದರೆ ಈಮಾನ್‌ನಿಂದ ದೂರ ಉಳಿದಂತೆಯೇ ಸರಿ. ಪ್ರತಿಯೊಬ್ಬ ಪುರುಷನು ಸ್ವತಃ ಪ್ರವಾದಿಯವರ(ಸ) ಬಳಿ ಬಂದು ತಮ್ಮ ವಿಷಯಗಳನ್ನು ಮಂಡಿಸಿ, ಪ್ರವಾದಿಯವರ(ಸ) ನಿರ್ಣಯವನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಆದರೆ ಸ್ತ್ರೀಯರಿಗೆ ಇದು ಸುಲಭವಾಗಿರಲಿಲ್ಲ. ಸ್ತ್ರೀಯರಿಗೆ ಸಂಬಂಧಿಸಿದ ಹಲವಾರು ವಿಚಾರಗಳು ತಿಳಿದಿದ್ದರೂ ಅದನ್ನು ತಿಳಿಸಲು ಪ್ರವಾದಿಯವರು(ಸ)

ಸಂಕೋಚಪಡುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ಆಯಿಶಾ(ರ)ರು ಮಧ್ಯಸ್ಥಿಕೆ ವಹಿಸುತ್ತಿದ್ದರು. ಇದೇ ಕಾರಣದಿಂದ ಸ್ತ್ರೀಯರಿಗೆ ಸಂಬಂಧಿಸಿದ ಹಲವಾರು ವಿಷಯಗಳು ಆಯಿಶಾ(ರ)ರ ಮುಖಾಂತರ ಸಮುದಾಯಕ್ಕೆ ತಿಳಿಯಿತು. ಪ್ರವಾದಿ ಪತ್ನಿಯರಲ್ಲಿ ಹ. ಆಯಿಶಾ(ರ)ರು ಸ್ತ್ರೀಯರ ಪರ ಅತ್ಯುತ್ತಮ ರೀತಿಯಲ್ಲಿ ವಕಾಲತ್ತು ಮಾಡುತ್ತಿದ್ದರು. ಅವರು(ರ) ಸ್ತ್ರೀಯರ ಪರ ಪ್ರವಾದಿಯವರ(ಸ) ಮುಂದೆ ಶಿಫಾರಸ್ಸು ಮಾಡುತ್ತಿದ್ದರು ಹಾಗೂ ರಿಯಾಯಿತಿಗಳನ್ನು (ಸವಲತ್ತು) ಮಾಡಿಸುತ್ತಿದ್ದರು. ಇದಕ್ಕೆ ಸಂಬಂಧಿಸಿದ ಕೆಲವೊಂದು ಘಟನೆಗಳನ್ನು ನೋಡೋಣ.

✦ ಓರ್ವ ಹಿರಿಯ ಸಹಾಬಿಯಾಗಿದ್ದ ಹ. ಉಸ್ಮಾನ್ ಬಿನ್ ಮಝ್‌ಊನ್(ರ)ರು ಬಹಳ ದೇವಭಯವುಳ್ಳವರಾಗಿದ್ದರು. ಲೌಕಿಕ ಜೀವನದ ಲವಲೇಶವೂ ತನ್ನ ಜೀವನದ ಮೇಲೆ ಪ್ರಭಾವ ಬೀಳದಂತೆ ನೋಡಿಕೊಳ್ಳುತ್ತಿದ್ದರು. ಎಲ್ಲಾ ಸ್ವಾಭಾವಿಕ ವಿಚಾರಗಳನ್ನು ತೊರೆದು, ಸಂಪೂರ್ಣವಾಗಿ ತಮ್ಮ ಜೀವನವನ್ನು ಅಲ್ಲಾಹನಿಗಾಗಿ ಮುಡಿಪಾಗಿಟ್ಟಿದ್ದರು. ಒಮ್ಮೆ ಅವರ(ರ) ಪತ್ನಿ ಆಯಿಶಾ(ರ)ರ ಬಳಿ ಬಂದಾಗ ಅವರು ಶೃಂಗಾರ ಮಾಡದುದನ್ನು ಕಂಡು, "ಪತಿಯಿದ್ದೂ ಈ ಸರಳತೆಯೇಕೆ?" ಎಂದು ಆಯಿಶಾ(ರ)ರು ಪ್ರಶ್ನಿಸಿದರು.

ಬಹಳ ನಾಚಿಕೆ ಸ್ವಭಾವದವರಾಗಿದ್ದ ಉಸ್ಮಾನ್(ರ)ರ ಪತ್ನಿ ತಡವರಿಸುತ್ತಲೇ, "ಉಸ್ಮಾನ್(ರ)ರು ದಿನವಿಡೀ ಉಪವಾಸವನ್ನಾಚರಿಸುತ್ತಾರೆ ಹಾಗೂ ರಾತ್ರಿಯಿಡೀ ನಮಾಝ್ ನಿರ್ವಹಿಸುತ್ತಾರೆ" ಎಂದುತ್ತರಿಸಿದರು. ವಿಷಯವನ್ನು ಅರಿತ ಆಯಿಶಾ(ರ)ರು ಪ್ರವಾದಿಯವರು(ಸ) ಬಂದೊಡನೆ ಬಹಳ ಸುಂದರವಾಗಿ ವಿಚಾರವನ್ನು ಅವರ(ಸ) ಮುಂದಿರಿಸಿದರು. ಪ್ರವಾದಿಯವರು(ಸ) ಉಸ್ಮಾನ್ ಬಿನ್ ಮಝ್‌ಊನ್(ರ)ರ ಬಳಿ ತೆರಳಿ, "ಉಸ್ಮಾನ್! ಪ್ರಪಂಚದ ವ್ಯವಹಾರಗಳನ್ನು ತ್ಯಜಿಸಲು ಕಲಿಸುವಂತೆ ಅಲ್ಲಾಹನು ನನ್ನನ್ನು ಕಳುಹಿಸಿಲ್ಲ. ನೀವು ನನ್ನನ್ನು(ಸ) ಅನುಸರಿಸುವುದಿಲ್ಲವೇ? ನಾನು ನಿಮ್ಮೆಲ್ಲರ ಪೈಕಿ ಅತ್ಯಧಿಕವಾಗಿ ಅಲ್ಲಾಹನನ್ನು ಭಯಪಡುವವನು, ಅಲ್ಲಾಹನ ಆದೇಶಗಳನ್ನು ಅರಿಯುವವನು ಹಾಗೂ ಅದನ್ನು ಅನುಸರಿಸುವವನಾಗಿದ್ದೇನೆ. ಆದರೂ ನಾನು(ಸ) ಪತ್ನಿಯರ ಹಕ್ಕುಗಳನ್ನು ಪೂರೈಸುತ್ತೇನೆ" ಎಂದರು. ಬಳಿಕ ಆ ಪತ್ನಿ ಆಯಿಶಾ(ರ)ರ ಬಳಿ ಬಂದಾಗ ಶೃಂಗಾರ ಮಾಡಿಕೊಂಡಿದ್ದರು. ಇದು ಪುರುಷರಿಗೆ ಸಂಬಂಧಿಸಿದ ಘಟನೆ.

ಇನ್ನು ಸ್ತ್ರೀಯರಿಗೆ ಸಂಬಂಧಿಸಿದ ಘಟನೆ ನೋಡೋಣ. ಹ. ಹೌಲ(ರ) ಎಂಬ ಸಹಾಬಿ ಮಹಿಳೆಯೋರ್ವರು ಇಡೀ ರಾತ್ರಿಯನ್ನು ಆರಾಧನೆಯಲ್ಲಿ

ಕಳೆದುಬಿಡುತ್ತಿದ್ದರು. ಮಲಗುತ್ತಿರಲಿಲ್ಲ. ಒಮ್ಮೆ ಹೌಲಾ(ರ)ರು ಎಲ್ಲಿಗೋ ಹೋಗುತ್ತಿದ್ದುದನ್ನು ಆಯಿಶಾ(ರ)ರು ಗಮನಿಸಿದರು. ಪ್ರವಾದಿಯವರೂ(ಸ) ಅಲ್ಲಿ ಉಪಸ್ಥಿತರಿದ್ದರು. ಹ. ಆಯಿಶಾ(ರ)ರು ಹೇಳಿದರು, "ಪ್ರವಾದಿಗಳೇ(ಸ) ಇವರು ಹೌಲಾ(ರ) ಆಗಿದ್ದಾರೆ. ರಾತ್ರಿಯಿಡೀ ನಮಾಝ್ ನಿರ್ವಹಿಸುತ್ತಾರೆ ಮಲಗುವುದೇ ಇಲ್ಲ." ಪ್ರವಾದಿಯವರು(ಸ) ಹೌಲಾ(ರ)ರಲ್ಲಿ ಹೇಳಿದರು "ನಿಮ್ಮಿಂದ ಸಾಧ್ಯವಾದಷ್ಟೇ ಕೆಲಸ ಮಾಡಿರಿ."

✦ ಒಮ್ಮೆ ಓರ್ವ ಮಹಿಳೆಗೆ ಆತನ ಪತಿಯು ಬಹಳ ನಿರ್ದಾಕ್ಷಿಣ್ಯವಾಗಿ ಹೊಡೆದನು. ಆಕೆಯ ಬೆನ್ನ ಮೇಲೆ ಬಾಸುಂಡೆಗಳು ಮೂಡಿದವು. ಆ ಮಹಿಳೆ ಆಯಿಶಾ(ರ)ರ ಬಳಿ ಬಂದು ತನ್ನ ಬೆನ್ನು ತೋರಿಸಿದಳು ಪ್ರವಾದಿಯವರು(ಸ) ಮನೆಗೆ ಬಂದಾಗ ಆಯಿಶಾ(ರ)ರು, "ಮುಸ್ಲಿಮ್ ಪತ್ನಿಯರು ಸಂಕಷ್ಟಗಳನ್ನನುಭವಿಸುತ್ತಿರುವ ಉದಾಹರಣೆಯನ್ನು ನಾನು ಕಂಡಿಲ್ಲ, ಪ್ರವಾದಿಗಳೇ(ಸ)! ಆ ಮುಗ್ಧ ಸ್ತ್ರೀಯ ಬೆನ್ನು ಆಕೆಯ ವಸ್ತ್ರಕ್ಕಿಂತಲೂ ಹೆಚ್ಚು ಹಸಿರಾಗುತ್ತಿದೆ" ಎಂದರು. ವಿಷಯ ತಿಳಿದ ಆ ಪತ್ನಿಯರ ಪತಿಯಂದಿರು ಧಾವಿಸಿ ಬಂದರು. ಪ್ರವಾದಿಯವರು(ಸ) ಎಲ್ಲರನ್ನುದ್ದೇಶಿಸಿ ಇಂತಹ ಶಿಕ್ಷೆ ನೀಡುವುದರಿಂದ ಎಲ್ಲರನ್ನೂ ತಡೆದರು.

✦ ಅಬೂ ಹುರೈರಾ(ರ)ರು ವರದಿ ಮಾಡುತ್ತಾರೆ, "ಕುದುರೆ, ಮನೆ ಹಾಗೂ ಸ್ತ್ರೀ ಅಶುಭವಾಗಿವೆ." ಇದನ್ನು ಕೇಳಿದ ಆಯಿಶಾ(ರ)ರು, "ಪ್ರವಾದಿಯವರ(ಸ) ಮೇಲೆ ಕುರ್‌ಆನ್ ಅವತೀರ್ಣಗೊಳಿಸಿದ ಆ ಅಲ್ಲಾಹನಾಣೆ! ಅಜ್ಞಾನ ಕಾಲದಲ್ಲಿ ಅವುಗಳನ್ನು ಅಶುಭವೆನ್ನಲಾಗುತ್ತಿತ್ತು. ಅಬೂಹುರೈರಾ(ರ) ಪ್ರವಾದಿಯವರ(ಸ) ಸಂಪೂರ್ಣ ಮಾತು ಕೇಳಿರಲಿಲ್ಲ" ಎಂದರು.

✦ ಸ್ತ್ರೀಯರು ಸಮಸ್ಯೆಗಳ ಸಮಾಧಾನಕ್ಕಾಗಿ ಪ್ರವಾದಿಯವರ(ಸ) ಬಳಿ ಬರುತ್ತಿದ್ದರು. ಸಾಮಾನ್ಯ ಸಮಸ್ಯೆಗಳನ್ನು ಕೇಳುತ್ತಿದ್ದರು. ಆದರೆ ತಮ್ಮ ಬಹಳ ವೈಯಕ್ತಿಕ ವಿಚಾರಗಳನ್ನು ಕೇಳಲು ಮುಜುಗರ ಪಡುತ್ತಿದ್ದರು. ಈ ಸಂದರ್ಭದಲ್ಲಿ ಸ್ತ್ರೀಯರು ಹ. ಆಯಿಶಾ(ರ)ರನ್ನು ತಮ್ಮ ಪ್ರತಿನಿಧಿಯಾಗಿ ಮಾಡಿದ್ದರು. ಹ. ಆಯಿಶಾ(ರ)ರು ಪ್ರವಾದಿಯವರ(ಸ) ಬಳಿ ಅವರ ಸಮಸ್ಯೆಗಳನ್ನು ಹೇಳಿ ಅದರ ಉತ್ತರವನ್ನು ಸ್ತ್ರೀಯರಿಗೆ ತಿಳಿಸುತ್ತಿದ್ದರು.

✦ ಹೆಣ್ಣು ನಿಕಾಹ್‌ಗಾಗಿ ತನ್ನ ಒಪ್ಪಿಗೆ ನೀಡುವುದು ಆವಶ್ಯಕ. ವಿಧವೆಯರು ಮುಕ್ತವಾಗಿ ಸಮ್ಮತಿ ಸೂಚಿಸುತ್ತಾರೆ. ಆದರೆ ಅವಿವಾಹಿತ ಹೆಣ್ಣು ಮಕ್ಕಳು ಲಜ್ಜಿತರಾಗಿ ಸಂಕಷ್ಟದಲ್ಲಿ ಸಿಲುಕಿ ಬಿಡುತ್ತಾರೆ. ಇದರ ಬಗ್ಗೆ ಆಯಿಶಾ(ರ)ರು ಪ್ರವಾದಿಯವರ(ಸ) ಬಳಿ ವಿಚಾರಿಸಿದಾಗ, ಪ್ರವಾದಿಯವರು(ಸ) "ಅವರ ಮೌನವೇ ಸಮ್ಮತಿ" ಎಂದರು.

✦ ಒಮ್ಮೆ ಓರ್ವ ಯುವತಿ ಹ. ಆಯಿಶಾ(ರ)ರ ಬಳಿ, "ನಾನು ಅಪ್ರಾಪ್ತ ವಯಸ್ಸಿನವಳಾಗಿದ್ದಾಗ ನನ್ನ ತಂದೆ ನನ್ನ ವಿವಾಹ ಮಾಡಿಸಿದರು. ನನ್ನ ಅನುಮತಿಯೂ ಕೇಳಿರಲಿಲ್ಲ" ಎಂದಳು. ಪ್ರವಾದಿಯವರು(ಸ) ಬಂದಾಗ ನನ್ನ ಮುಂದೆಯೇ ಪ್ರವಾದಿಯವರಿಗೆ(ಸ) ಈ ವಿಚಾರ ತಿಳಿಸುವಿಯಂತೆ" ಎಂದರು ಆಯಿಶಾ(ರ). ಪ್ರವಾದಿಯವರು(ಸ) ಮನೆಗೆ ಬಂದಾಗ ಆ ಯುವತಿ ವಿಷಯವನ್ನು ಮುಂದಿಟ್ಟಳು. ಆಗ ಪ್ರವಾದಿಯವರು(ಸ), "ನೀನು ಬೇಕಾದರೆ ನಿಕಾಹ್ ಮುರಿಯಬಹುದು" ಎಂದರು. ಆ ಯುವತಿಯು, "ನನಗೆ ಈ ನಿಶ್ಚಯ ಒಪ್ಪಿಗೆಯಿದೆ. ನನ್ನ ಸಹೋದರಿ ಯರ ಹಕ್ಕನ್ನು ಸ್ಪಷ್ಟಪಡಿಸಲು ಬಯಸುತ್ತಿದ್ದೆ. ಅದು ಸ್ಪಷ್ಟವಾಯಿತು" ಎಂದಳು.

✦ ಒಂದು ವೇಳೆ ಪತಿಯು ನಿಧನ ಹೊಂದಿದರೆ ಆತನ ವಿಧವೆಯು ನಾಲ್ಕು ತಿಂಗಳು ಹತ್ತು ದಿನಗಳವರೆಗೆ ಇದ್ದತ್‌ಗೆ ಕುಳಿತುಕೊಳ್ಳಬೇಕು. ಮನೆಯಿಂದ ಹೊರಗೆ ಬೇರೆ ಸ್ಥಳಕ್ಕೆ ಹೋಗಬಾರದು. ಇದೊಂದು ಇಸ್ಲಾಮಿನ ನಿಯಮವಾಗಿದೆ. ಈ ವಿಚಾರದಲ್ಲಿ ಪತಿಯು ಎಲ್ಲಿ ನಿಧನ ಹೊಂದುತ್ತಾನೋ ಆತನ ಪತ್ನಿಯು ಅಲ್ಲೇ ಇದ್ದತ್‌ನ ದಿನಗಳನ್ನು ಕಳೆಯಬೇಕು ಅಥವಾ ಒಂದು ವೇಳೆ ಸ್ತ್ರೀಯು ಜೊತೆಯಲ್ಲಿಲ್ಲದಿದ್ದರೆ ಆಕೆಗೆ ಪತಿಯ ನಿಧನದ ವಾರ್ತೆ ತಿಳಿದರೆ ಆಕೆ ಎಲ್ಲಿದ್ದಾಳೋ ಅಲ್ಲೇ ಉಳಿದು ಇದ್ದತ್‌ಗೆ ಕುಳಿತುಕೊಳ್ಳಬೇಕು. ಅಲ್ಲಿಂದ ಹೊರಗೆ ಹೋಗುವುದು ಹಾಗೂ ಪ್ರಯಾಣ ಮಾಡುವುದು ಆಕೆಯ ಮೇಲೆ ನಿಷಿದ್ಧ ಆಗಿದೆ ಎಂದು ಜನರು ಫತ್ವಾ ನೀಡತೊಡಗಿದರು. ಈ ಫತ್ವಾದಿಂದಾಗಿ ವಿಧವೆಯರು ಸಂಕಷ್ಟಕ್ಕೆ ಸಿಲುಕಿದರು. ಕೆಲವೊಮ್ಮೆ ಪತಿಯು ಪರಊರಿನಲ್ಲಿ ನಿಧನ ಹೊಂದಿದರೆ ಆತನ ವಿಧವೆಯು ಪಾಲಿಗೆ, ಆಕೆಯ ಆಸ್ತಿ–ಅಂತಸ್ತು, ಮಾನ–ಮರ್ಯಾದೆಯ ನಿಟ್ಟಿನಲ್ಲಿ ಆ ಜಾಗವು ಅಪಾಯಕಾರಿಯಾಗಿ ಪರಿಣಮಿಸಬಹುದು. ಆಯಿಶಾ(ರ)ರು ಒಂದು ಸಂದರ್ಭದಲ್ಲಿ ಈ ಸಂಕಷ್ಟವನ್ನು ಪರಿಹರಿಸಿದರು. ಆಯಿಶಾ(ರ)ರ ಓರ್ವ ಸಹೋದರಿಯು ತಲ್ಹಾ(ರ)ರನ್ನು ವಿವಾಹವಾಗಿದ್ದರು. ತಲ್ಹಾ(ರ)ರು ಜಮಲ್ ಯುದ್ಧದಲ್ಲಿ ಹುತಾತ್ಮರಾದರು. ಪತ್ನಿಯು ಅವರ ಜೊತೆಗಿದ್ದರು. ಮೇಲೆ ಜನರು ಸೂಚಿಸಿದ ಫತ್ವಾದ ಪ್ರಕಾರ ತಲ್ಹಾ(ರ)ರ ವಿಧವೆಯು ಅಲ್ಲೇ ತಂಗಬೇಕಿತ್ತು. ಆದರೆ ಆಯಿಶಾ(ರ)ರು ಅವರನ್ನು ತಮ್ಮ ಜೊತೆ ಕರೆದುಕೊಂಡು ಹೋದರು. ಇದು ಫತ್ವಾದ ವಿರುದ್ಧವಾಗಿದ್ದರಿಂದ ಜನರು ಪರಸ್ಪರ ಚರ್ಚಿಸತೊಡಗಿದರು. ಪ್ರಸಿದ್ಧ ಇಮಾಮ್ ಆಗಿದ್ದ ಹ. ಅಯ್ಯೂಬ್ ತಾಬಿಈ(ರ)ಯವರಲ್ಲಿ ಆಯಿಶಾ(ರ)ರು ಹೀಗೇಕೆ ಮಾಡಿದರೆಂದು ಜನರು ಕೇಳಿದರು, ಹ. ಅಯ್ಯೂಬ್(ರ)ರು ಹೇಳಿದರು, "ಹ. ಆಯಿಶಾ(ರ)ರು

ತಲ್ಹಾ(ರ)ರ ವಿಧವೆಯನ್ನು ಮನೆಯಿಂದ ಹೊರಗೆ ತರಲಿಲ್ಲ, ಬದಲಾಗಿ ಮನೆಯೊಳಗೆ ಕರೆದುಕೊಂಡು ಹೋದರು." ಜನರೆಲ್ಲರೂ ಇದರಿಂದ ಸಂತುಷ್ಟರಾದರು. ಬಳಿಕ ಸಾಮಾನ್ಯವಾಗಿ ಇಂತಹ ಸಂದರ್ಭಗಳು ಎದುರಾದರೆ ಜನರು ಆಯಿಶಾ(ರ)ರ ಕ್ರಮವನ್ನು ಅನುಸರಿಸತೊಡಗಿದರು. ಇದು ಪೀಡಿತ ಸ್ತ್ರೀಯರ ಪಾಲಿಗೆ ದೊಡ್ಡ ಉಪಕಾರವಾಗಿದೆ.

✦ ಇನ್ನೊಂದು ವಿಚಾರದಲ್ಲಿ ಸ್ತ್ರೀಯರು ಪೀಡಿತರಾಗುತ್ತಿದ್ದರು. ಆ ವಿಚಾರ ಈ ರೀತಿ ಇದೆ, ಒಂದು ವೇಳೆ ಪತಿಯು ತನ್ನ ಪತ್ನಿಗೆ ತಲಾಕ್‌ನ ಆಯ್ಕೆ ನೀಡಿದರೆ ಹಾಗೂ ಆ ಪತ್ನಿಯು ತಲಾಕ್ ಸ್ವೀಕರಿಸದೇ ಪತಿಯ ಜೊತೆಗಿರಲು ಬಯಸಿದರೆ, "ಅದನ್ನು ಒಂದು ತಲಾಕ್ ಎಂದು ಪರಿಗಣಿಸಲಾಗುತ್ತದೆ" ಎಂದು ಕೆಲವು ಸಹಾಬಿಗಳು ಫತ್ವಾ ಹೊರಡಿಸಿದರು." ಈ ಫತ್ವಾವನ್ನು ಕಠೋರವಾಗಿ ರದ್ದುಪಡಿಸಿದ ಆಯಿಶಾ(ರ)ರು "ಅತ್ತಕ್‌ವೀರ್ ಸೂಕ್ತಗಳು ಅವತೀರ್ಣಗೊಂಡ ಬಳಿಕ (ಪ್ರವಾದಿ ಪತ್ನಿಯರು) ಪ್ರವಾದಿಯವರು(ಸ) ಇಂತಹ ಆಯ್ಕೆಯನ್ನು ನಮ್ಮ ಮುಂದಿಟ್ಟಿದ್ದರು. ನಾವೆಲ್ಲರೂ ಇದನ್ನು ನಿರಾಕರಿಸಿ ಪ್ರವಾದಿಯವರ(ಸ) ಜೊತೆಗಿರಲು ಬಯಸಿದ್ದೆವು. ಹಾಗಾದರೆ ನಮ್ಮದು ಒಂದು ತಲಾಕ್ ಆಯಿತೇ? ಇದು ನಮ್ಮ ಪ್ರಾಮಾಣಿಕತೆಯ ಕಗ್ಗೊಲೆಯಂತಾಗುವುದಿಲ್ಲವೇ? ಖಂಡಿತ ಇಲ್ಲ! ನಾವು ಮಾಡಿದ ತ್ಯಾಗ-ಬಲಿದಾನ, ಪ್ರವಾದಿ(ಸ)ಯವರೊಂದಿಗೆ ಬಡತನದ ಜೀವನ ಸಾಗಿಸುವುದನ್ನೇ ಬಯಸಿದ್ದಕ್ಕಾಗಿ ಶರೀಅತ್ ನಮಗೆ ಈ ರೀತಿ ಕಳಂಕಿತರನ್ನಾಗಿಸದು" ಎಂದರು. ಬಳಿಕ ಇಮಾಮರು ಹಾಗೂ ಮುಹದ್ದಿಸ್‌ಗಳು ಹ. ಆಯಿಶಾ(ರ)ರ ಫತ್ವಾವನ್ನು ಅಂಗೀಕರಿಸಿದರು.

✦ ಇನ್ನೊಂದು ವಿಚಾರ ನೋಡೋಣ. "ಒಂದು ವೇಳೆ ಓರ್ವ ವ್ಯಕ್ತಿಯು ಇನ್ನೋರ್ವ ವ್ಯಕ್ತಿ ಮೇಲೆ ಪತ್ನಿಗೆ ತಲಾಕ್ ನೀಡುವಂತೆ ಒತ್ತಡ ಹೇರಿದರೆ, ಕೊಲೆಯ ಬೆದರಿಕೆ ನೀಡಿದರೆ ಅಥವಾ ಶಿಕ್ಷೆಯ ಭಯ ಹುಟ್ಟಿಸಿದರೆ, ಆತನು ವಿವಶತೆಗೊಳಗಾಗಿ ದಾರಿ ಕಾಣದೆ ಪತ್ನಿಗೆ ತಲಾಕ್ ನೀಡಿದರೆ ಆ ತಲಾಕ್ ಸಿಂಧುವಾಗುತ್ತದೆಯೇ?" ಎಂಬುದು ಸವಾಲು. ಕೆಲವರು ಇದನ್ನು ತಲಾಕ್ ಎಂದೇ ಪರಿಗಣಿಸಲಾಗುತ್ತದೆ ಎಂದರು. ಆದರೆ ಆಯಿಶಾ(ರ)ರು, "ಈ ರೀತಿಯ ತಲಾಕ್ ಇಸ್ಲಾಮಿ ಕಾನೂನಿನ ಪ್ರಕಾರ ನಡೆದಿಲ್ಲ" ಎಂದರು. ನಂತರ ಇಮಾಮರಲ್ಲಿ ಇಮಾಮ್ ಅಬೂ ಹನೀಫಾ(ರ)ರ ಪ್ರಕಾರ ಅದು ತಲಾಕ್ ಆಗುತ್ತದೆ. ಇವರ ಹೊರತು ಇತರೆಲ್ಲಾ ಇಮಾಮರು, ಮುಹದ್ದಿಸ್‌ಗಳು ಹಾಗೂ ಫಿಕ್ಹ್‌ನ ವಿದ್ವಾಂಸರು ಆಯಿಶಾ(ರ)ರನ್ನು ಅನುಸರಿಸಿದರು.

ಅರಬ್‌ನ ಜನತೆ ಯಾವುದೇ ಮಿತಿಮೀರೆ ನಿರ್ಬಂಧಗಳಿಲ್ಲದೆ ಹಲವು ಬಾರಿ ತಲಾಕ್ ನೀಡುತ್ತಿದ್ದರು. ಮರುಕ್ಷಣವೇ ಮರಳುತ್ತಿದ್ದರು, ಬಳಿಕ ಪುನಃ ತಲಾಕ್ ನೀಡಿ ಬಿಡುತ್ತಿದ್ದರು. ಇದರಿಂದಾಗಿ ಬಡ-ನಿರ್ಗತಿಕ ಸ್ತ್ರೀಯರು ಸಂಕಷ್ಟ-ಆತಂಕದಲ್ಲಿ ಸಿಲುಕಿ ಬಿಡುತ್ತಿದ್ದರು. ಅವರು ಈ ದೌರ್ಜನ್ಯವನ್ನು ಸಹಿಸುತ್ತಿದ್ದರು. ಈ ದೌರ್ಜನ್ಯದ ನಿರ್ಮೂಲನೆಗಾಗಿ ಆಯಿಶಾ(ರ)ರು ಆಗಾಗ್ಗೆ ಪ್ರವಾದಿಯವರಲ್ಲಿ(ಸ) ಬಿನ್ನವಿಸಿಕೊಳ್ಳುತ್ತಿದ್ದರು. ಪ್ರವಾದಿಯವರು(ಸ) ಅಲ್ಲಾಹನ ಆದೇಶದ ನಿರೀಕ್ಷೆಯಲ್ಲಿದ್ದರು. ಕುರ್‌ಆನಿನ ಸೂಕ್ತ ಅವತೀರ್ಣವಾಯಿತು.

**"ತಲಾಕ್ (ವಿವಾಹ ವಿಚ್ಛೇದನ) ಎರಡು ಸಲ. ಅನಂತರ ನ್ಯಾಯೋಚಿತವಾಗಿ ಸ್ತ್ರೀಯರನ್ನು ತಡೆದಿರಿಸಿಕೊಳ್ಳಬೇಕು ಅಥವಾ ಯೋಗ್ಯ ರೀತಿಯಿಂದ ಅವಳನ್ನು ಬಿಡುಗಡೆಗೊಳಿಸಬೇಕು." (ಕುರ್‌ಆನ್ 2:229)**

ಇದು ಇಡೀ ಮುಸ್ಲಿಮ್ ಸಮುದಾಯಕ್ಕೆ ಆಯಿಶಾ(ರ)ರ ದಾನವಾಗಿದೆ. ಇದರಿಂದಾಗಿಯೇ ಇಂದು ಇಡೀ ಮುಸ್ಲಿಮ್ ಸಮುದಾಯವು ಒಂದು ದೊಡ್ಡ ದೌರ್ಜನ್ಯದಿಂದ ಸುರಕ್ಷಿತವಾಗಿದೆ. ಆದರೆ ಇಂದು ಪೌರಾತ್ಯ ದೇಶಗಳ ಸ್ತ್ರೀಯರು ಇದೇ ರೀತಿಯ ಸಂಕಷ್ಟದಲ್ಲಿ ಸಿಲುಕಿಕೊಂಡಿದ್ದಾರೆ.

✦ ಕೊನೆಯಲ್ಲಿ ಒಂದು ಸ್ವಾರಸ್ಯಕರ ಘಟನೆಯೊಂದಿಗೆ ಈ ವಿಷಯವನ್ನು ಮುಗಿಸುತ್ತಿದ್ದೇನೆ. ಒಮ್ಮೆ ಹಜ್ಜ್ ನಿರ್ವಹಿಸಲು ಹೋದ ಓರ್ವ ಸ್ತ್ರೀಯು ಋತುವಾವಸ್ಥೆಗೊಳಗಾದಳು. ಹಜ್ಜ್‌ನ ನಿಯತ್ತನ್ನು ಮುರಿದು ಮುಂದಿನ ವರ್ಷ ಹಜ್ಜ್‌ಗೆ ಬರಲೇ? ಒಂದು ವೇಳೆ ಮುಂದಿನ ವರ್ಷವೂ ಇದೇ ರೀತಿ ಆದರೆ, ನಾನು ಹಜ್ಜ್ ನಿರ್ವಹಿಸುವುದರಿಂದ ವಂಚಿತಳಾಗಿ ಬಿಡುತ್ತೇನೆ. ಒಂದು ವೇಳೆ ಹಜ್ಜ್ ಕರ್ಮ ವನ್ನು ಮುಂದುವರಿಸಿದರೆ ಅಶುದ್ಧಾವಸ್ಥೆಯಲ್ಲಿ ಸಾಧ್ಯವೇ? ಮುಂದೆ ಹೆಜ್ಜೆಯಿರಿಸುವುದೂ ತಪ್ಪು ಹಾಗೂ ಹಿಂದಿರುಗಲೂ ಕಷ್ಟ. ಆ ಸ್ತ್ರೀಯು ಇಕ್ಕಟ್ಟಿಗೆ ಸಿಲುಕಿದಳು.

ಪ್ರಸಿದ್ಧ ಸಹಾಬಿಗಳಾದ ಝೈದ್ ಬಿನ್ ಸಾಬಿತ್(ರ), ಅಬ್ದುಲ್ಲಾ ಬಿನ್ ಉಮರ್(ರ) ಹಾಗೂ ಉಮರ್ ಫಾರೂಕ್(ರ)ರು ಇಂತಹ ಸ್ತ್ರೀಯರನ್ನು ಹಜ್ಜ್ ನಿರ್ವಹಿಸುವುದರಿಂದ ತಡೆದಿದ್ದಾರೆ. ಆದರೆ ಅರಫಾ ಮೈದಾನ, ಮಿನಾ ಅಥವಾ ಮುಝ್ದಲಿಫಾದಲ್ಲಿ ಸ್ತ್ರೀಯರು ಅಶುದ್ಧಾವಸ್ಥೆಗೊಳಗಾದರೆ ಏನು ಮಾಡಬೇಕು?

ಅಲ್ಲಾಹನು ಸ್ತ್ರೀಯರನ್ನು ಸಂಕಷ್ಟದಿಂದ ಹೊರ ತರಬಯಸಿದ್ದರು. ಆದರೆ ಆಯಿಶಾ(ರ)ರು ಪ್ರವಾದಿಯವರೊಂದಿಗೆ(ಸ) ಹಜ್ಜ್ ನಿರ್ವಹಿಸಲು

ಹೋದ ಸಂದರ್ಭದಲ್ಲಿ ಇದೇ ಸಂಕಷ್ಟದಲ್ಲಿ ಸಿಲುಕಿ ಬಿಟ್ಟರು
ಪ್ರವಾದಿಯವರೊಂದಿಗೆ(ಸ) ಈ ವಿಚಾರದಲ್ಲಿ ಫತ್ವಾ ಕೇಳಿದಾ
ಪ್ರವಾದಿಯವರು(ಸ), "ಓ ಆಯಿಶಾ! ಕಅಬಾದ ತವಾಫ್ ಮಾಡುವುದನ್ನು
ಹೊರತುಪಡಿಸಿ (ಏಕೆಂದರೆ ಅದು ಮಸೀದಿಯೊಳಗಡೆಯಿದೆ) ಹಾಜಿಗಳ
ಮಾಡುವ ಇತರೆಲ್ಲಾ ಸೂಕ್ತ ಕರ್ಮಗಳನ್ನು ಪೂರೈಸಬಹುದು" ಎಂದರು.

ಮುಂದಿನ ಹಜ್ಜ್‌ನ ಸಂದರ್ಭಗಳಲ್ಲಿ ಆಯಿಶಾ(ರ)ರ
ಮಾಲಿನ್ಯಾವಸ್ಥೆಯಲ್ಲಿದ್ದ ಸ್ತ್ರೀಯರನ್ನು ತವಾಫ್‌ನ ವಿಧಿಯನ್ನು ಹೊರತುಪಡಿ
ಇತರೆಲ್ಲಾ ವಿಧಿಗಳನ್ನು ನಿರ್ವಹಿಸುವಂತೆ ಸೂಚಿಸಿದರು. ಹ. ಝೈದ್(ರ
ಹಾಗೂ ಅಬ್ದುಲ್ಲಾ(ರ)ರು ಆಯಿಶಾ(ರ)ರನ್ನು ಅನುಸರಿಸಿದರು. ಆದರೆ ಹ
ಉಮರ್(ರ)ರು ತಮ್ಮ ಫತ್ವಾದ ಮೇಲೆ ಅಚಲರಾಗಿ ನಿಂತರು. ಇದ
ಪರಿಣಾಮದಿಂದಾಗಿ ಉಮರ್(ರ)ರ ಆಡಳಿತಾವಧಿಯಲ್ಲಿ ಒಮ್ಮೆ ಆರು ಸಾವಿ
ಸ್ತ್ರೀಯರು ಮಿನಾದ ಮೈದಾನದಲ್ಲಿ ಉಳಿದು ಬಿಟ್ಟರು. ಬಳಿಕ ಆ ಸ್ತ್ರೀಯ
ಜೊತೆ ಪುರುಷರಿಗಾದ ಸಂಕಷ್ಟವು ಎಲ್ಲರಿಗೂ ತಿಳಿದಿರುವ ವಿಚಾರ.

## ಹ. ಆಯಿಶಾ(ರ)ರ ಇನ್ನಿತರ ವಿದ್ಯೆಗಳು:

### ವೈದ್ಯಕೀಯ ಚಿಕಿತ್ಸೆ

ಆಯಿಶಾ(ರ)ರ ಸೋದರಿ ಪುತ್ರ ಹಾಗೂ ಆ ಕಾಲದ ಪ್ರಸಿದ್ಧ
ಇಮಾಮರಾಗಿದ್ದ ಅರ್‌ವಾರವರು ಹೇಳುತ್ತಾರೆ, "ವೈದ್ಯಶಾಸ್ತ್ರದಲ್ಲಿ
ಆಯಿಶಾ(ರ)ರಿಗಿಂತ ಅತ್ಯುತ್ತಮರನ್ನು ನಾನು ಕಂಡಿಲ್ಲ" ಅರ್‌ವಾರ ಪುತ್ರ
ಹಿಶಾಮ್ ಹಾಗೂ ಇನ್ನಿತರ ಶಿಷ್ಯರ ಅಭಿಪ್ರಾಯವೂ ಇದೇ ಆಗಿತ್ತು.

ಹ. ಆಯಿಶಾ(ರ)ರು ವೈದ್ಯ ಶಾಸ್ತ್ರದಲ್ಲಿ ಪ್ರವೀಣರಾಗಿದ್ದರು ಅಥವಾ
ಅತ್ಯುನ್ನತ ದರ್ಜೆಯ ವೈದ್ಯರಾಗಿದ್ದರೆಂಬುದು ಇದರರ್ಥವಲ್ಲ. ಬದಲಾಗಿ
ಅಂದು ಅರಬ್‌ನಲ್ಲಿ ವೈದ್ಯಶಾಸ್ತ್ರವು ಚರ್ಚಿತ ವಿಷಯವಾಗಿರಲಿಲ್ಲ. ಯಾವ
ರೀತಿ ಇಂದು ನಮ್ಮ ಮನೆ ಗಳಲ್ಲಿ ವೃದ್ಧೆಯರು ಮನೆಯೌಷಧಿ ತಯಾರಿಸಿ
ಚಿಕಿತ್ಸೆಗೆ ಬಳಸುತ್ತಾ ಅದರಲ್ಲಿ ಪರಿಪಕ್ವತೆ ಹೊಂದಿರುತ್ತಾರೋ, ಅದೇ ರೀತಿ
ಆಯಿಶಾ(ರ)ರು ಔಷಧಿಗಳನ್ನು ನೆನಪಿನಲ್ಲಿರಿಸಿದ್ದರು. "ನಿಮಗೆ(ರ) ಇಷ್ಟೊಂದು
ಔಷಧಿಗಳು ಹೇಗೆ ನೆನಪಿವೆ?" ಎಂದು ಪ್ರಶ್ನಿಸಲಾದಾಗ ಆಯಿಶಾ(ರ)ರು,
"ಪ್ರವಾದಿಯವರ(ಸ) ಬಳಿ ದೂರದೂರಿಂದ ಜನರು ಆಗಮಿಸುತ್ತಿದ್ದರು.
ಪ್ರವಾದಿಯವರು(ಸ) ಅನಾರೋಗ್ಯಪೀಡಿತರಾಗಿರುತ್ತಿದ್ದರೆ ಜನರು ಔಷಧಿಗಳನ್ನು
ಹೇಳುತ್ತಿದ್ದರು. ನಾನು ಅದನ್ನು ನೆನಪಿಡುತ್ತಿದ್ದೆ" ಎಂದರು.

ಆಯಿಶಾ(ರ)ರು ಔಷಧಿಗಳನ್ನು ನೆನಪಿನಲ್ಲಿಟ್ಟ ಕಾರಣ ಜನರ ಸೇವೆ ಮಾಡುತ್ತಿದ್ದರು. ಯುದ್ಧ ಸಂದರ್ಭದಲ್ಲಿ ಸ್ತ್ರೀಯರ ಜೊತೆಗೂಡಿ ಗಾಯಾಳುಗಳ ಶುಶ್ರೂಷೆ ಮಾಡುತ್ತಿದ್ದರು. ಉಹುದ್ ಯುದ್ಧದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮುಸ್ಲಿಮರು ಗಾಯಾಳುಗಳಾದರು. ಅವರ ಶುಶ್ರೂಷೆಯಲ್ಲಿ ತೊಡಗಿದ್ದ ಸ್ತ್ರೀಯರಲ್ಲಿ ಆಯಿಶಾ(ರ)ರೂ ಓರ್ವರು. ಓರ್ವ ವ್ಯಕ್ತಿ ಆಶ್ಚರ್ಯಚಕಿತನಾಗಿ ಆಯಿಶಾ(ರ)ರಲ್ಲಿ ಪ್ರಶ್ನಿಸಿದನು, "ವಾಕ್ಚಾತುರ್ಯವುಳ್ಳ, ಪ್ರಸಿದ್ಧ ಕವಿ ಹಾಗೂ ಅನುಭವಶಾಲಿಯಾದ ಅಬೂಬಕರ್(ರ)ರ ಪುತ್ರಿಯಾಗಿ ಕವಿತೆ ಹಾಗೂ ಇತಿಹಾಸದಲ್ಲಿ ತಮಗೆ ದೊರೆತ ಅತ್ಯುನ್ನತ ಸ್ಥಾನಮಾನದಲ್ಲಿ ನನಗೆ ಆಶ್ಚರ್ಯವಿಲ್ಲ. ಆದರೆ ನಿಮಗೆ(ರ) ವೈದ್ಯಶಾಸ್ತ್ರದ ಜ್ಞಾನ ಎಲ್ಲಿಂದ ಬಂತು?" ಆಗ ಆಯಿಶಾ(ರ)ರು, ಅರಬ್‌ನ ವೈದ್ಯರು ಪ್ರವಾದಿಯವರ(ಸ) ಸನ್ನಿಧಿಗೆ ಬರುತ್ತಿದ್ದರು. ಅವರು ಹೇಳುತ್ತಿದ್ದುದನ್ನೆಲ್ಲಾ ನಾನು ನೆನಪಿಡುತ್ತಿದ್ದೆ" ಎಂದರು.

**ಇತಿಹಾಸ:**

ಹ. ಆಯಿಶಾ(ರ)ರು ಇತಿಹಾಸದ ಕೌಶಲ್ಯವನ್ನು ತನ್ನ ಪಿತರಾದ ಅಬೂಬಕರ್(ರ)ರಿಂದ ಕಲಿತರು. ಅರಬ್‌ನ ಪರಿಸ್ಥಿತಿ, ಅಜ್ಞಾನ ಕಾಲದ ಆಚರಣೆಗಳು, ಪ್ರಸಿದ್ಧ ಗೋತ್ರಗಳ ವಂಶವೃಕ್ಷವು ಅಬೂಬಕರ್(ರ)ರಿಗೆ ಚೆನ್ನಾಗಿ ತಿಳಿದಿತ್ತು. ಅವರು(ರ) ತಮ್ಮ ಪುತ್ರಿ ಆಯಿಶಾ(ರ)ರಿಗೆ ಇದನ್ನೆಲ್ಲಾ ತಿಳಿಸಿದ್ದರು ಹಾಗೂ ಆಯಿಶಾ(ರ)ರು ಅದನ್ನು ನೆನಪಿನಲ್ಲಿಟ್ಟರು. ಹ. ಅರ್‌ವಾರು ಹೇಳುತ್ತಾರೆ, "ನಾನು ಇತಿಹಾಸ ಹಾಗೂ ವೈದ್ಯಶಾಸ್ತ್ರದಲ್ಲಿ ಆಯಿಶಾ(ರ)ರಿಗಿಂತ ಉತ್ತಮರನ್ನು ಕಂಡಿಲ್ಲ." ನಮಗೆ ಹದೀಸ್ ಗ್ರಂಥಗಳಲ್ಲಿ ಅರಬರ ಆಚರಣೆಯ ಕುರಿತು ಸಿಗುವ ಎಲ್ಲಾ ವಿಚಾರಗಳನ್ನು ಹ. ಆಯಿಶಾ(ರ)ರೇ ತಿಳಿಸಿದ್ದಾರೆ. ಅರಬರ ಸಾಮಾಜಿಕ ಪರಿಸ್ಥಿತಿ, ವಿವಾಹದ ಆಚರಣೆಗಳು, ವಿಚ್ಛೇದನ, ಇಸ್ಲಾಮಿಗಿಂತ ಮೊದಲು ಅರಬರು ಯಾವೆಲ್ಲಾ ದಿನಗಳಲ್ಲಿ ಉಪವಾಸವನ್ನಾಚರಿಸುತ್ತಿದ್ದರು, ಮೃತರ ಕುರಿತಾದ ಆಚರಣೆಗಳು, ಕುರೈಶರ ಹಜ್ಜ್‌ನ ಸಂದರ್ಭದಲ್ಲಿ ತಂಗುತ್ತಿದ್ದ ಸ್ಥಳ ಇತ್ಯಾದಿ ಇವೆಲ್ಲವನ್ನೂ ಆಯಿಶಾ(ರ)ರೇ ನಮ್ಮ ಮುಂದಿರಿಸಿದ್ದಾರೆ.

ಅನ್ಸಾರರ ಪರಿಸ್ಥಿತಿಯನ್ನೂ ಆಯಿಶಾ(ರ)ರೇ ತಿಳಿಸಿದ್ದಾರೆ. ಬಹಸ್ ಯುದ್ಧದ (ಅನ್ಸಾರರ ಎರಡು ಗೋತ್ರಗಳ ನಡುವೆ ನಡೆದ ಯುದ್ಧ) ಪರಿಸ್ಥಿತಿಯನ್ನು ಅವರು(ರ) ತಿಳಿಸಿದರು. ಇಸ್ಲಾಮೀ ಇತಿಹಾಸದ ಪ್ರಸಿದ್ಧ ಘಟನೆಗಳು ನಮಗೆ ಆಯಿಶಾ(ರ)ರಿಂದಲೇ ದೊರೆತಿವೆ. ಜಿಬ್ರೀಲ್(ಅ)ರು ವಹೀ ತರುತ್ತಿದ್ದ ಕುರಿತು, ಪ್ರವಾದಿಯವರು(ಸ) ಪ್ರವಾದಿಯಾದುದು, ಹಿಜ್ರತ್‌ನ

ವಿಷಯ, ತನ್ನ ಎಲ್ಲಾ ವಿಚಾರಗಳು, ಅಪವಾದದ ಘಟನೆ, ಅವರ(ರ) ಕುರಿತು ಅವತೀರ್ಣಗೊಂಡ ಕುರ್‌ಆನ್ ಸೂಕ್ತಗಳು ಇತ್ಯಾದಿ ಎಲ್ಲವನು ಆಯಿಶಾ(ರ)ರು ವಿವರವಾಗಿ ಜನರ ಮುಂದಿರಿಸಿದರು.

ಪ್ರಸಿದ್ಧ ಯುದ್ಧಗಳಾದ ಬದ್ರ್, ಉಹುದ್, ಕಂದಕ ಯುದ್ಧಗಳ ಕುರಿ ವಿವರವಾಗಿ ತಿಳಿಸಿದರು. ಬನೂ ಕುರೈಝಾ ಗೋತ್ರದ ಹಲವಾರು ವಿಷಯಗಳ ಪ್ರವಾದಿ ಯವರು(ಸ) ವಿದಾಯ ಹಜ್ಜ್ ಸಂದರ್ಭದಲ್ಲಿ ನೀಡಿದ ಪ್ರವಚನ ನಮಗೆ ಆಯಿಶಾ(ರ)ರಿಂದಲೇ ದೊರೆತಿವೆ.

ಪ್ರವಾದಿಯವರ(ಸ) ಜೀವನ ಸಂದೇಶದ ಅಧಿಕ ಭಾಗವು ಆಯಿಶಾ(ರ) ಮುಖಾಂತರ ನಮಗೆ ತಿಳಿಯಿತು. ಪ್ರವಾದಿಯವರ(ಸ) ಅಂತಿಮ ಘಳಿಗೆ ಪರಿಸ್ಥಿತಿ, ಅವರ(ಸ) ಆರಾಧನೆ, ಕೌಟುಂಬಿಕ ಜೀವನ, ಚಾರಿತ್ರ್ಯ, ಕೆಲಸ ಕಾರ್ಯಗಳು, ವ್ಯಕ್ತಿತ್ವ, ಇಸ್ಲಾಮಿಗಾಗಿ ಮಾಡಿದ ಪ್ರಯತ್ನಗಳು, ಅಬೂಬಕರ್(ರ ಹಾಗೂ ಅಲೀ(ರ)ರ ಆಡಳಿತ, ಹ. ಫಾತಿಮಾ(ರ) ಹಾಗೂ ಇತರ ಪ್ರವಾ ಪತ್ನಿಯರು, ಈಲಾ, ತಖ್‌ಯೀರ್‌ನ ಸೂಕ್ತಗಳು ಇತ್ಯಾದಿ ಎಲ್ಲವೂ ನಮ ಆಯಿಶಾ(ರ)ರಿಂದಲೇ ದೊರೆತಿವೆ. ಒಂದು ವೇಳೆ ಆಯಿಶಾ(ರ)ರು ಇತಿಹಾಸ ಈ ಅಮೂಲ್ಯ ಪುಟಗಳನ್ನು ತೆರೆಯದಿರುತ್ತಿದ್ದರೆ ನಾವು ಹಲವಾರ ವಿಷಯಗಳಿಂದ ವಂಚಿತರಾಗುತ್ತಿದ್ದೆವು.

**ಕವನ ರಚನೆ ಕೌಶಲ್ಯ:**

ಹ. ಆಯಿಶಾ(ರ)ರು ಕವನ ರಚನೆಯ ಕೌಶಲ್ಯವನ್ನು ತನ್ನ ತಂದೆಯಿಂ ಕಲಿತಿದ್ದರು. ಇಸ್ಲಾಮಿನ ಶತ್ರುಗಳಿಗೆ ಕವನಗಳ ಮೂಲಕ ಉತ್ತರ ನೀಡಬೇಕಿ ಕಾಲದಲ್ಲಿ ಪ್ರವಾದಿಯವರು(ಸ) ಹ. ಹಸ್ಸಾನ್(ರ) ಹಾಗೂ ಇನ್ನಿತರ ಮುಸ್ಲಿಮ ಕವಿಗಳಿಗೆ, "ನೀವು ಮೊದಲು ಅಬೂಬಕರ್(ರ)ರೊಂದಿಗೆ ಸಮಾಲೋಚಿಸಿ ಅವರು(ರ) ಇತಿಹಾಸ ಹಾಗೂ ಕವನ ರಚನೆಯ ಸೂಕ್ಷ್ಮಾತಿಸೂಕ್ಷ ವಿಷಯಗಳನ್ನೂ ಚೆನ್ನಾಗಿ ಬಲ್ಲವರಾಗಿದ್ದಾರೆ" ಎಂದು ಸಲಹೆ ನೀಡಿದರು.

"ತಂದೆಯಂತೆ ಮಗಳು" ಎಂಬಂತೆ ಆಯಿಶಾ(ರ)ರು ತಂದೆಯ ಹಾದಿಯಲ್ಲೇ ನಡೆದರು. ಕವನಗಳನ್ನು ಅರ್ಥೈಸುವುದು, ವಿಶ್ಲೇಷಿಸುವುದು ನಾಲಗೆಯ ಬಗ್ಗೆ ಜಾಗ್ರತೆ ವಹಿಸುವುದು, ಭಾಷಣ ಮಾಡುವ ಸಂದರ್ಭದ ಸಮರ್ಪಕವಾದ ಪದಗಳ ಬಳಕೆ, ಉಪಮೆ-ಅಲಂಕಾರಗಳ ಬಳ ಇತ್ಯಾದಿಗಳೆಲ್ಲವನ್ನೂ ನಾವು ಆಯಿಶಾ(ರ)ರಲ್ಲಿ ಕಾಣಬಹುದು. ಆಯಿಶಾ(ರ) ಕವಿತೆಯನ್ನು ಸರಿಯಾಗಿ ಅರ್ಥೈಸುವ ಸಾಮರ್ಥ್ಯವನ್ನು ಕಂಡು ಪ್ರಸಿದ್ಧ

ಕವಿಗಳಾದ ಖನ್ಸಾ(ರ), ಹಸ್ಸಾನ್(ರ) ಹಾಗೂ ಇನ್ನಿತರ ಕವಿಗಳು ಆಯಿಶಾ(ರ)ರ ಬಳಿ ತಮ್ಮ ಕವಿತೆಗಳನ್ನು ಹೇಳುತ್ತಿದ್ದರು. ಹ. ಆಯಿಶಾ(ರ)ರು ಅವರ ಕವಿತೆಗಳನ್ನು ಕೇಳಿ ಪ್ರಶಂಸಿಸುತ್ತಿದ್ದರು ಹಾಗೂ ಅಗತ್ಯ ಬಿದ್ದರೆ ಸಲಹೆಗಳನ್ನು ನೀಡುತ್ತಿದ್ದರು. ಅರಬಿ ಭಾಷೆಯ ಕವನಗಳನ್ನು ವಿಶ್ಲೇಷಿಸುವವರು ಈ ರೀತಿ ಹೇಳು ತ್ತಿದ್ದರು, "ನಮಗೆ ನಿಮ್ಮ ಈ ಸಾಮರ್ಥ್ಯದ ಬಗ್ಗೆ ಆಶ್ಚರ್ಯವಾಗುವುದಿಲ್ಲ. ಏಕೆಂದರೆ ನೀವು ಅಬೂಬಕರ್(ರ) ಪುತ್ರಿಯಾಗಿದ್ದೀರಿ." ಹ. ಮೂಸಾ ಬಿನ್ ತಲ್‌ಹಾರು ಹೇಳುತ್ತಾರೆ, "ಆಯಿಶಾ(ರ)ರಿಗಿಂತ ಉತ್ತಮ ವಾಗ್ಮಿಯನ್ನು ನಾನು ಕಂಡಿಲ್ಲ."

ಅತ್ಯುತ್ತಮ ವಾಗ್ಮಿಯಾಗಿದ್ದ ಹ. ಅಹ್ನಫ್ ಬಿನ್ ಕೈಸ್‌ರ್ ಹೇಳುತ್ತಾರೆ, "ಹ. ಆಯಿಶಾ(ರ)ರು ಅತ್ಯುತ್ತಮವಾಗಿ ಪದಗಳನ್ನು ಬಳಸುವ ರೀತಿ ಹಾಗೂ ಗಾಂಭೀರ್ಯವಾದ ಮಾತಿನ ಶೈಲಿಯಲ್ಲಿ ಅವರಿಗೆ ಸಾಟಿಯಿರಲಿಲ್ಲ."

ಹ. ಅಹ್ನಫ್‌ರು ಹೇಳುತ್ತಾರೆ, "ನಾನು ಅಬೂಬಕರ್(ರ) ಉಮರ್(ರ), ಉಸ್ಮಾನ್(ರ), ಅಲೀ(ರ) ಹಾಗೂ ಅವರ ನಂತರದ ಎಲ್ಲಾ ಖಲೀಫರ ಭಾಷಣಗಳನ್ನು ಆಲಿಸಿದ್ದೇನೆ. ಆದರೆ ಆಯಿಶಾ(ರ)ರ ಭಾಷಣಗಳಲ್ಲಿದ್ದ ಪ್ರಭಾವ ನಾನು ಬೇರಾರಲ್ಲೂ ಕಂಡಿಲ್ಲ."

ಬಹಳ ವಿವೇಕಿ ಹಾಗೂ ಕಾವ್ಯ ರಚನೆಯನ್ನು ಬಲ್ಲವರಾಗಿದ್ದ ಹ. ಮುಆವಿಯ(ರ)ರು ಹೇಳುತ್ತಾರೆ, "ಹ. ಆಯಿಶಾ(ರ)ರು ಬಹಳ ಚತುರೆ ಹಾಗೂ ಅತ್ಯುತ್ತಮ ವಾಗ್ಮಿಯಾಗಿದ್ದರು."

ಈ ರೀತಿಯ ಹಲವಾರು ವಿಚಾರಗಳಿವೆ. ನಾವು ಕೆಲವೊಂದು ಉದಾಹರಣೆಗಳನ್ನು ನಿಮ್ಮ ಮುಂದಿರಿಸುತ್ತೇವೆ.

✦ ಓರ್ವ ವ್ಯಕ್ತಿಯು "ಪ್ರವಾದಿಯವರ(ಸ) ಚಾರಿತ್ರ್ಯ ಹೇಗಿತ್ತು?" ಎಂದು ಪ್ರಶ್ನಿಸಿದನು. ಆಗ ಆಯಿಶಾ(ರ)ರು, "ನೀವು ಕುರ್‌ಆನ್ ಓದುವುದಿಲ್ಲವೇ? ಪ್ರವಾದಿಯವರ(ಸ) ಚಾರಿತ್ರ್ಯವು ಕುರ್‌ಆನ್ ಆಗಿತ್ತು. (ಅಂದರೆ ಕುರ್‌ಆನಿನಂತೆ ಅವರ ಚಾರಿತ್ರ್ಯವಾಗಿತ್ತು)" ಎಂದುತ್ತರಿಸಿದರು.

✦ ಶಿಷ್ಯರಲ್ಲಿ ಓರ್ವನು ವಹೀ (ದಿವ್ಯವಾಣಿ)ಯ ವಿಧಗಳ ಬಗ್ಗೆ ಚರ್ಚಿಸುತ್ತಾ ಕೇಳಿದನು, "ಪ್ರವಾದಿಯವರ(ಸ) ಸ್ವಪ್ನಗಳ ವಾಸ್ತವಿಕತೆ ಏನಾಗಿತ್ತು?" "ಅವರು(ಸ) ಕಾಣುತ್ತಿದ್ದ ಸ್ವಪ್ನಗಳು, ಮುಂಜಾವಿನ ಬೆಳಕಿನಂತೆ ಭಾಸವಾಗುತ್ತಿತ್ತು."

ಶುಭ್ರವಾದ ಮುಂಬೆಳಕಿನಿಂದ ಪ್ರವಾದಿಯವರ(ಸ) ಸತ್ಯ ಸ್ವಪ್ನಗಳನ್ನು

ಅರಿಯುವುದು ಎಷ್ಟೊಂದು ಪ್ರಬುದ್ಧ ದೇವವಾಣಿ.

✦ "ಪ್ರವಾದಿಯವರ(ಸ) ಮೇಲೆ ವಹೀ ಅವತೀರ್ಣಗೊಳ್ಳುವಾಗ ಅವರ(ಸ) ಸ್ಥಿತಿ-ಗತಿ ಏನಾಗುತ್ತಿರುತ್ತಿತ್ತು" ಎಂದು ಕೇಳಲಾದಾಗ, ಆಯಿಶಾ(ರ)ರು, "ಅವರ(ಸ) ಹಣೆಯ ಮೇಲೆ ಮುತ್ತುಗಳು ಮೂಡಿದಂತೆ ಭಾಸವಾಗುತ್ತಿತ್ತು" ಎಂದು ಹೇಳಿದರು. ಇಲ್ಲಿ ಆಯಿಶಾ(ರ)ರು ಬೆವರಿನ ಹನಿಗಳನ್ನು ಮುತ್ತುಗಳಿಗೆ ಹೋಲಿಸಿದ್ದಾರೆ.

✦ ಹ. ಆಯಿಶಾ(ರ)ರ ಮೇಲೆ ಹೊರಿಸಲಾದ ಅಪವಾದದ ಘಟನೆ ನಮಗೆಲ್ಲಾ ತಿಳಿದಿದೆ. ಈ ದುಃಖದ ಸಂದರ್ಭದಲ್ಲಿ ಆಯಿಶಾ(ರ)ರು ತನಗಾದ ವ್ಯಾಕುಲತೆಯನ್ನು ಈ ರೀತಿ ಬಣ್ಣಿಸಿದ್ದಾರೆ, "ನಾನು ಕಣ್ಣುಗಳಿಗೆ ನಿದ್ದೆಯ ಸುರ್ಮವನ್ನೂ ಹಚ್ಚಲಿಲ್ಲ."

✦ ಹ. ಆಯಿಶಾ(ರ)ರು ಹನ್ನೊಂದು ಮಹಿಳೆಯರ ಕಥೆಯನ್ನು ಹೇಳಿದ್ದರು. ಅದನ್ನು ನಾವು ಈಗಾಗಲೇ ತಿಳಿಸಿದ್ದೇವೆ. ಆ ಕಥೆಯಲ್ಲಿ ಅವರು(ರ) ಬಳಸಿದ ಉಪಮೆ, ಅಲಂಕಾರಗಳನ್ನು ನಾವು ಕಾಣಬಹುದು.

**ಕವಿತಾ ವಾಚನದ ಕಲೆ:**

ಅಜ್ಞಾನ ಕಾಲದಲ್ಲಿ ಹಾಗೂ ಪ್ರವಾದಿ(ಸ) ಮತ್ತು ಖಲೀಫರ ಆಡಳಿತ ಕಾಲದಲ್ಲಿ ಅರಬ್‌ನಾದ್ಯಂತ ಕಾವ್ಯವು ಬಹಳ ವ್ಯಾಪಕವಾಗಿತ್ತು. ಯಾವುದೇ ಉದ್ದೇಶವಿಲ್ಲದೆ ಜನರು ಕವಿತೆಗಳನ್ನು ಹಾಡುತ್ತಿದ್ದರು. ಜನರು ದೊಡ್ಡ-ದೊಡ್ಡ ಕವನಗಳನ್ನು, ಶೋಕ ಗೀತೆಗಳನ್ನು ಮನನ ಮಾಡುತ್ತಿದ್ದರು. ಪ್ರಸಿದ್ಧ ಕವಿಗಳನ್ನು ಗೌರವಿಸುತ್ತಿದ್ದರು. ಕವಿತೆಯಲ್ಲಿ ಸ್ತ್ರೀ-ಪುರುಷರೀರ್ವರೂ ಹೆಸರುವಾಸಿಯಾಗಿದ್ದರು. ಪ್ರಸಿದ್ಧ ಕವಯಿತ್ರಿಯಾಗಿದ್ದ ಹ. ಖನ್ಸಾ(ರ)ರ ಶೋಕ ಗೀತೆಗಳು ಅಪ್ರತಿಮವಾಗಿದ್ದುವು.

ಪ್ರಸಿದ್ಧ ಕವಿಗಳು ಗೌರವಕ್ಕೆ ಪಾತ್ರರಾಗಿದ್ದರು. ಕವನದ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ಅರಿತು, ವಿಶ್ಲೇಷಿಸಿ, ಒಳ್ಳೆಯ ಹಾಗೂ ಕೆಟ್ಟ ಕವಿತೆಯನ್ನು ಪರಿಚಯಿಸುವ, ಅರಬಿ ಭಾಷೆಯಲ್ಲಿ ಪಾಂಡಿತ್ಯ ಪಡೆದ ಪ್ರಸಿದ್ಧ ಕವಿಗಳನ್ನು ಬಹಳ ಗೌರವಿಸುತ್ತಿದ್ದರು.

ಅಬೂಬಕರ್(ರ)ರು ಕವನದ ವಿಶ್ಲೇಷಣೆ ಹಾಗೂ ವಂಶ ವೃಕ್ಷದ ಜ್ಞಾನದಲ್ಲಿ ಪರಿಣಿತರಾಗಿದ್ದರು. ಅಂದು ಕವಿತೆಯ ರೂಪದಲ್ಲಿ ಕವಿಗಳ ವಂಶವೃಕ್ಷವನ್ನೂ ಹೇಳಲಾಗುತ್ತಿತ್ತು. ಹಾಗಾಗಿ ಪ್ರಸಿದ್ಧ ಕವಿಗಳು ಅಬೂಬಕರ್(ರ)ರ ಬಳಿ ಬಂದು ಸಲಹೆಗಳನ್ನು ಪಡೆಯುತ್ತಿದ್ದರು.

ಪ್ರವಾದಿಯವರು(ಸ) ಮಕ್ಕಾದಿಂದ ಮದೀನಾಕ್ಕೆ ಹಿಜ್ರತ್ ಹೋದ ಬಳಿಕ, ಇಸ್ಲಾಮಿನ ವಿರುದ್ಧ ಕವನಗಳನ್ನು ವಾಚಿಸುವವರಿಗೆ ಕವನಗಳ ಮೂಲಕವೇ ಪ್ರತ್ಯುತ್ತರ ನೀಡಿರಿ, ಹಾಗೂ ಈ ಕುರಿತು ಅಬೂಬಕರ್(ರ)ರೊಂದಿಗೆ ಸಮಾಲೋಚಿಸಿರಿ ಎಂದು ಮದೀನಾದ ಕವಿಗಳಿಗೆ ಆದೇಶಿಸಿದರು. ಪ್ರಸಿದ್ಧ ಅನ್ಸಾರಿ ಕವಿಗಳಾಗಿದ್ದ ಅಬ್ದುಲ್ಲಾ ಬಿನ್ ರವಾಹ(ರ), ಕಅಬ್ ಬಿನ್ ಮಾಲಿಕ್(ರ) ಹಾಗೂ ಹಸ್ಸಾನ್ ಬಿನ್ ಸಾಬಿತ್(ರ)ರು ಅಬೂಬಕರ್(ರ)ರ ಸಲಹೆಯಂತೆ ಕವಿತೆಯ ಮೂಲಕ ಇಸ್ಲಾಮೀ ಶತ್ರುಗಳಿಗೆ ಪ್ರತ್ಯುತ್ತರ ನೀಡಲು ಆರಂಭಿಸಿದರು. ಅನ್ಸಾರಿ ಕವಿಗಳ ಕವನಗಳನ್ನು ಆಲಿಸಿದ ಮಕ್ಕಾದ ಸರದಾರರು ಹಾಗೂ ಇತರ ಕವಿಗಳು. "ದೇವನಾಣೆ! ಈ ಕವಿಗಳು ಖಂಡಿತವಾಗಿಯೂ ಅಬೂಬಕರ್(ರ)ರಿಂದ ಸಲಹೆಗಳನ್ನು ಪಡೆದಿದ್ದಾರೆ" ಎನ್ನುತ್ತಿದ್ದರು.

ಆಯಿಶಾ(ರ)ರು ತಂದೆ ಅಬೂಬಕರ್(ರ)ರಿಂದಲೇ ಕವನದ ಕಲೆಯನ್ನು ಕಲಿತಿದ್ದರು. ಸುಖ–ದುಃಖ ಹಾಗೂ ವಿಶೇಷ ಸಂದರ್ಭಗಳಲ್ಲಿ ಅರಬರು ಕವನ ವಾಚಿಸುತ್ತಿದ್ದರು. ಆಯಿಶಾ(ರ)ರಲ್ಲೂ ಈ ಗುಣವಿತ್ತು, ಎಲ್ಲರಿಗಿಂತ ಮಿಗಿಲಾಗಿ ಕವನವನ್ನು ವಿಶ್ಲೇಷಿಸುವ ರೀತಿಯು ಆಯಿಶಾ(ರ)ರಲ್ಲಿ ಉನ್ನತ ಮಟ್ಟದಲ್ಲಿತ್ತು. ಇದೇ ಕಾರಣದಿಂದ ಪ್ರಸಿದ್ಧ ಕವಿಗಳು ಆಯಿಶಾ(ರ)ರ ಬಳಿ ಬಂದು ಕವನಗಳನ್ನು ವಾಚಿಸಿ ಸಲಹೆ ಪಡೆಯುತ್ತಿದ್ದರು. ಆಯಿಶಾ(ರ)ರು ತಮ್ಮ ಶಿಷ್ಯರಿಗೆ ಕುರ್‌ಆನ್ ಹಾಗೂ ಹದೀಸ್‌ನ ಸೂಕ್ಷ್ಮ ವಿಷಯಗಳನ್ನು, ಅರಬಿ ಭಾಷೆಯನ್ನು ತಿಳಿಸುವಾಗ ಪ್ರಸಿದ್ಧ ಕವಿಗಳ ಕವನಗಳನ್ನೂ ವಾಚಿಸುತ್ತಿದ್ದರು, ಅವುಗಳನ್ನು ವಿಮರ್ಶಿಸುತ್ತಿದ್ದರು. ಆಗ ಶಿಷ್ಯರು, "ಮಾತೆ! ನಮಗೆ ನಿಮ್ಮ ಕವನ ವಾಚನದ ಬಗ್ಗೆ ಆಶ್ಚರ್ಯವಾಗುವುದಿಲ್ಲ. ಏಕೆಂದರೆ ನೀವು ಅಬೂಬಕರ್(ರ)ರ ಪುತ್ರಿಯಾಗಿದ್ದೀರಿ" ಎನ್ನುತ್ತಿದ್ದರು.

ಒಮ್ಮೆ ಶಿಷ್ಯರು ಕೇಳಿದರು, "ಉಮ್ಮುಲ್ ಮೂಮಿನೀನ್(ರ)! ಪ್ರವಾದಿಯವರೂ(ಸ) ಕವನ ವಾಚಿಸುತ್ತಿದ್ದರೇ?" ಆಯಿಶಾ(ರ), "ಹೌದು" ಎಂದುತ್ತರಿಸುತ್ತಾ, ಪ್ರವಾದಿಯವರಿಂದ(ಸ) ಆಲಿಸಿದ್ದ ಕವನವನ್ನು ವಾಚಿಸ ತೊಡಗಿದರು. ಅದೇ ರೀತಿ, "ಪ್ರವಾದಿಯವರ(ಸ) ಕವನಗಳನ್ನು ನೆನಪಿನಲ್ಲಿಡುತ್ತಿರಲಿಲ್ಲ. ಅದನ್ನು ವಾಚಿಸುವಾಗ ಪದಗಳನ್ನು ಆಚೀಚೆ ಮಾಡಿ ಬಿಡುತ್ತಿದ್ದರು. ಅದರ ಕುರಿತು ಆಯಿಶಾ(ರ)ರು, "ಈ ಚರಣ ಈ ರೀತಿ ಇದೆ" ಎಂದು ಹೇಳಿದಾಗ, ಪ್ರವಾದಿಯವರು(ಸ), "ಕವನ ವಾಚಿಸಲಿಕ್ಕಾಗಿ ನನ್ನನ್ನು ಸೃಷ್ಟಿಸಲಾಗಿಲ್ಲ" ಎನ್ನುತ್ತಿದ್ದರು. ಈ ಘಟನೆಯನ್ನು ಆಯಿಶಾ(ರ)ರೇ ನಮಗೆ ತಿಳಿಸಿದ್ದಾರೆ.

ಆಯಿಶಾ(ರ)ರು ಹೇಳುತ್ತಾರೆ, "ಕೆಲವೊಮ್ಮೆ ಪ್ರವಾದಿಯವರು(ಸ) ಅಬ್ದುಲ್ಲಾ ಬಿನ್ ರವಾಹ(ರ)ರ ಕವನಗಳನ್ನು ಹೇಳುತ್ತಿದ್ದರು. ಶಿಷ್ಯರು ಕವನ ಯಾವುದೆಂದು ಪ್ರಶ್ನಿಸಿದಾಗ, ಆಯಿಶಾ(ರ)ರು, "ಉದಾಹರಣೆಗೆ ಈ ಕವನ, ಯಾರಿಗೆ ನೀವು ದಾರಿದೀಪ ನೀಡಿ ಕಳುಹಿಸಲಿಲ್ಲವೋ, ಅವರು ಸಂದೇಶ ಪಡೆದು ಮರಳುವರು." ಈ ಕವನವನ್ನು ಆಲಿಸಿದ ಶಿಷ್ಯರು ವ್ಯಾಕುಲಕ್ಕೊಳಗಾದರು ಬಳಿಕ ಆಯಿಶಾ(ರ)ರು ಆ ಕವನ ಅರ್ಥವನ್ನು ತಿಳಿಸಿದಾಗ ಶಿಷ್ಯರು ಮಂತ್ರಮುಗ್ಧರಾದರು. (ಆ ಕವನದ ಅರ್ಥ: "ಯಾರು" ಅಂದರೆ– ಆತ್ಮವನ್ನು ತೆಗೆಯುವ ಮರಣದ ದೇವಚರ. ಒಂದು ವೇಳೆ ಅವರೊಂದಿಗೆ "ದಾರಿದೀಪ" ಅಂದರೆ ಸತ್ಕರ್ಮಗಳನ್ನು ಕಳುಹಿಸದೇ ಇದ್ದರೆ ನೀವು ಪುನರುತ್ಥಾನ ದಿನದಂದು ಕೆಟ್ಟ ಸುದ್ದಿಯನ್ನು ಕೇಳುವಿರಿ.)

✦ ಒಮ್ಮೆ ಪ್ರವಾದಿಯವರು(ಸ) ಆಯಿಶಾ(ರ)ರ ಕೊಠಡಿಗೆ ಪ್ರವೇಶಿಸಿದಾಗ ಬಹಳ ಸಂತುಷ್ಟರಾಗಿರುವಂತೆ ಕಂಡರು. ಆಗ ಆಯಿಶಾ(ರ)ರು ಈ ಎರಡು ಕವನಗಳನ್ನು ವಾಚಿಸಿದರು. "ಅವರು ತಾಯಿಯ ಒಡಲಿನ ಹಾಲುಣಿಸಿದ ದಾದಿಯ ಎಲ್ಲಾ ಬೇನೆಯಿಂದಲೂ ಪರಿಶುದ್ಧರಾಗಿದ್ದಾರೆ. ನೀವು ಅವರ ಮೇಲಿನ ಗೆರೆಗಳನ್ನು ನೋಡಿದರೆ ಮಳೆಯನ್ನು ವರ್ಷಿಸುವ ಮೋಡಗಳೆಡೆಯಲ್ಲಿ ಮಿಂಚು ಪ್ರಜ್ವಲಿಸುವಂತೆ ಕಾಣುವಿರಿ." ಬಳಿಕ ಆಯಿಶಾ(ರ)ರು, "ಓ ಪ್ರವಾದಿಗಳೇ(ಸ)! ಈ ಪ್ರಶಂಸೆಯ ಹಕ್ಕುದಾರರು ತಾವಾಗಿದ್ದೀರಿ" ಎಂದರು. ಇದನ್ನು ಕೇಳಿದ ಪ್ರವಾದಿಯವರು(ಸ) ಸಂತುಷ್ಟರಾದರು.

ಕವನದಲ್ಲಿ ಯಾವ ರೀತಿ ಇಸ್ಲಾಮಿನ ವಿಚಾರಗಳನ್ನು ಮಂಡಿಸಬೇಕೆಂದು ಕಲಿಸಿಕೊಟ್ಟರು. ಅದೇ ರೀತಿ ಈ ವಿಚಾರದಲ್ಲಿ ಪ್ರಾವೀಣ್ಯತೆ ಪಡೆದ ಮುಸ್ಲಿಮ್ ಕವಿಗಳ ಕವನಗಳನ್ನು ಓದಿ ಹೇಳುತ್ತಿದ್ದರು. ಆಯಿಶಾ(ರ)ರ ಬಳಿ ಓರ್ವ ಸ್ತ್ರೀಯು ಬರುತ್ತಿದ್ದಳು. ಕರಿಯಳಾಗಿದ್ದರೂ ಆಕೆಯು ವಾಚಿಸುತ್ತಿದ್ದ ಕವನಗಳಲ್ಲಿ ಇಸ್ಲಾಮಿನ ಬೆಳಕು ಪ್ರಜ್ವಲಿಸುತ್ತಿತ್ತು. "ಸೋಲಿನ ದಿನವು ನಮ್ಮ ಪಾಲಿಗೆ ದೇವನ ಅದ್ಭುತಗಳಲ್ಲೊಂದಾಗಿತ್ತು. ಆದರೆ ನಮ್ಮನ್ನು ಸತ್ಯನಿಷೇಧದಿಂದ ಮುಕ್ತವಾಗಿಸಿದ ಅಲ್ಲಾಹನಿಗೆ ಕೃತಜ್ಞತೆಗಳು." ಅಂದರೆ ಇಸ್ಲಾಮ್ ಸ್ವೀಕರಿಸುವ ಮೊದಲು ಪುನರುತ್ಥಾನ ದಿನವು ನಮ್ಮ ಪಾಲಿಗೆ ಸೋಲಿನ ದಿನವಾಗಿತ್ತು. ನಾವದನ್ನು ದೇವನ ಅದ್ಭುತ ಎನ್ನುತ್ತಿದ್ದೆವು. ಆದರೆ ಮುಸ್ಲಿಮರಾದ ಮೇಲೆ ನಾವು ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಿದೆವು."

ಝುಬಾ ಗೋತ್ರದ ಯುವಕರು ಜಮಲ್ ಯುದ್ಧದಲ್ಲಿ ಹ. ಆಯಿಶಾ(ರ)ರ ಪರವಾಗಿ ಯುದ್ಧ ಮಾಡಿದರು. ಅವರು ಶತ್ರುಗಳನ್ನು ಆಯಿಶಾ(ರ)ರ

ಒಂಟೆಯ ಬಳಿ ಬರಲು ಬಿಡಲಿಲ್ಲ. ಆ ಯುವಕರು ಯುದ್ಧಗೀತೆಯೊಂದಿಗೆ ವೀರಾವೇಶದಿಂದ ಹೋರಾಡುತ್ತಿದ್ದರು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲೂ ಅವರು ಹಾಡಿದ ಯುದ್ಧ ಗೀತೆಯನ್ನು ಆಯಿಶಾ(ರ)ರು ನೆನಪಿಟ್ಟರು. ಯುದ್ಧ ಮುಗಿದ ಬಳಿಕ ಝುಬಾ ಗೋತ್ರದ ಓರ್ವ ವ್ಯಕ್ತಿ ಆಯಿಶಾ(ರ)ರ ಬಳಿ ಬಂದನು. ಆತ ಬಹಳ ದುಃಖಿತನಾಗಿದ್ದ. ಆತನ ಸಹೋದರ ಯುದ್ಧದಲ್ಲಿ ಆಯಿಶಾ(ರ)ರ ಒಂಟೆಯನ್ನು ರಕ್ಷಿಸುತ್ತಿದ್ದ ವೇಳೆ ಹುತಾತ್ಮನಾದನು. ಹ. ಆಯಿಶಾ(ರ)ರು ಆ ವ್ಯಕ್ತಿಯಲ್ಲಿ, "ಯುದ್ಧ ಗೀತೆ ಯಾರು ಹಾಡುತ್ತಿದ್ದರೆಂದು ಪ್ರಶ್ನಿಸಿದರು." (ಓ ನಮ್ಮ ಮಾತೆ! ನಮ್ಮ ಅತ್ಯುತ್ತಮ ಮಾತೆ! ಅವರನ್ನು ನಾವು ಚೆನ್ನಾಗಿ ಬಲ್ಲವರಾಗಿದ್ದೇವೆ. ನಾವು ಝುಬಾದ ಸುಪುತ್ರರು, ಈ ಒಂಟೆಯ ರಕ್ಷಕರು. ಮರಣವು ನಮ್ಮ ಪಾಲಿಗೆ ಜೇನು ತುಪ್ಪಕ್ಕಿಂತಲೂ ಸಿಹಿಯಾಗಿವೆ.)

ಆ ವ್ಯಕ್ತಿಯು, "ಆತ ನನ್ನ ಸಹೋದರ" ಎಂದನು. ಇದನ್ನು ಕೇಳಿದ ಆಯಿಶಾ(ರ)ರಿಗೆ ದುಃಖವು ಒತ್ತರಿಸಿ ಬಂತು. ಈ ರೀತಿಯಲ್ಲಿ ಆಯಿಶಾ(ರ)ರು ಸಂತಾಪ ಸೂಚಿಸಿದರೆಂದು ಆ ವ್ಯಕ್ತಿಯು ಹೇಳುತ್ತಾರೆ.

✦ ಕಂದಕ ಯುದ್ಧವು ಇಸ್ಲಾಮೀ ಇತಿಹಾಸದ ಪ್ರಸಿದ್ಧ ಯುದ್ಧವಾಗಿದೆ. ಒಂದು ದಿನ ಭೀಕರ ಯುದ್ಧವು ಆರಂಭವಾಯಿತು. ಯುವಕರಾಗಿದ್ದ ಹ. ಸಅದ್ ಬಿನ್ ಮುಆದ್(ರ)ರು ಸ್ವಲ್ಪ ಸಮಯದ ಬಳಿಕ ಮನೆಯಿಂದ ಹೊರಟು ಒಂಟೆಯನ್ನು ಅತ್ತ ಕಡೆ ಓಡಿಸಿದರು. ಈ ಪರಿಸ್ಥಿತಿಯಲ್ಲೂ ಅವರು(ರ) ಯುದ್ಧಗೀತೆಯನ್ನು ಹಾಡುತ್ತಾ ಮುಂದೆ ಸಾಗಿದರು.

"ಅಕಟ! ನನ್ನ ಒಂಟೆಯು ಬೇಗನೆ ಯುದ್ಧ ಮೈದಾನಕ್ಕೆ ತಲುಪಲಿ. ಮರಣವು ಅದರ ಸಮಯಕ್ಕೆ ಬಂದರೆ ಎಷ್ಟೊಂದು ಉತ್ತಮ."

ಹ. ಸಅದ್(ರ)ರ ಯುದ್ಧ ಕವಚವು ಸಣ್ಣದಾಗಿತ್ತು. ಮಣಿಗಂಟಿಗೂ ಕವಚವಿರಲಿಲ್ಲ. ಹ. ಆಯಿಶಾ(ರ)ರು ಇದನ್ನು ನೋಡುತ್ತಿದ್ದರು. ಸಅದ್(ರ)ರ ತಾಯಿಯ ಬಳಿಯಲ್ಲಿ ನಿಂತಿದ್ದರು. ಅವರನ್ನುದ್ದೇಶಿಸಿ ಆಯಿಶಾ(ರ)ರು ಕವನ ವಾಚಿಸಿದರು, "ಅಕಟ! ಸಅದ್‌ರ ಮಣಿಗಂಟನ್ನು ಯುದ್ಧ ಕವಚದಿಂದ ಮುಚ್ಚಿರುತ್ತಿದ್ದರೆ! ಅದು ಅದರ ರಕ್ಷಣೆ ಮಾಡುತ್ತಿತ್ತು. ವಾಸ್ತವದಲ್ಲಿ ಅಲ್ಲಾಹನು ದೊಡ್ಡ ಸಂರಕ್ಷಕನಾಗಿದ್ದಾನೆ."

ವಿಸ್ಮಯವೆಂದರೆ ಯುದ್ಧ ಸಂದರ್ಭದಲ್ಲಿ ಒಂದು ಬಾಣವು ಸಅದ್(ರ)ರ ಮಣಿಗಂಟಿಗೆ ತಗುಲಿತು. ಅವರು ಅದರಿಂದಲೇ ಹುತಾತ್ಮರಾದರು.

✦ ಪ್ರಸಿದ್ಧ ಕವಿಯಾಗಿದ್ದ ಹಸ್ಸಾನ್(ರ)ರು ಆಯಿಶಾ(ರ)ರ ಬಳಿ ಬಂದು ಕವನ ವಾಚಿಸುತ್ತಿದ್ದರು. ಒಮ್ಮೆ ಆಯಿಶಾ(ರ)ರನ್ನು ಪ್ರಶಂಸಿಸುತ್ತಾ ಕವನ ವಾಚಿಸಿದರು, "ಅವರು [ಆಯಿಶಾ(ರ)] ಒಂದು ಮುಗ್ಧ ಸ್ತ್ರೀಯ ಮೇಲೆ ಅಪವಾದ ಹೊರಿಸುವುದಿಲ್ಲ." ಇದನ್ನು ಕೇಳಿದೊಡನೆ ಆಯಿಶಾ(ರ)ರು ಅವರನ್ನು(ರ) ತಡೆದು, "ನೀವು ಈ ರೀತಿ ಇಲ್ಲ!" ಎಂದರು. ಏಕೆಂದರೆ ಆಯಿಶಾ(ರ)ರ ಮೇಲೆ ಅಪವಾದ ಹೊರಿಸಲಾದಾಗ ಹಸ್ಸಾನ್(ರ)ರೂ ವದಂತಿ ಹಬ್ಬಿಸುವವರಲ್ಲಿ ಸೇರಿದ್ದರು. ಇನ್ನೊಂದೆಡೆಯಲ್ಲಿ ಜನರು ಹಸ್ಸಾನ್(ರ)ರ ವಿರುದ್ಧ ಕೆಟ್ಟದ್ದನ್ನು ಹೇಳಿದಾಗ ಅವರನ್ನು ತಡೆದ ಆಯಿಶಾ(ರ)ರು, "ಅವರ(ರ) ಬಗ್ಗೆ ಕೆಟ್ಟದ್ದನ್ನು ನುಡಿಯಬೇಡಿರಿ. ಇವರು(ರ) ಪ್ರವಾದಿಯವರ(ಸ) ಪರ ಇಸ್ಲಾಮೀ ಶತ್ರುಗಳ ವಿರುದ್ಧ ಕವನ ವಾಚಿಸುವವರಾಗಿದ್ದರು" ಎನ್ನುತ್ತಿದ್ದರು.

ಹ. ಹಸ್ಸಾನ್(ರ)ರಿಗೆ ಸಂಪೂರ್ಣ ಕವನಗಳು ನೆನಪಿರುತ್ತಿದ್ದವು. ಅಜ್ಞಾನ ಕಾಲದ ಪ್ರಸಿದ್ಧ ಕವಿಗಳ ಕವನಗಳು, ಕಅಬ್ ಬಿನ್ ಮಾಲಿಕ್(ರ)ರ ಉದ್ದುದ್ದ ಕವನಗಳೂ ನೆನಪಿರುತ್ತಿದ್ದವು. ಇಸ್ಲಾಮ್ ಸ್ವೀಕರಿಸುವ ಮುನ್ನ ಖನ್ಸಾ(ರ)ರ ಪ್ರಿಯ ಸಹೋದರ ನಿಧನ ಹೊಂದಿದರು. ಅತೀವ ದುಃಖದೊಂದಿಗೆ ಖನ್ಸಾ(ರ)ರು ಮುಖಕ್ಕೆ ಬಡಿದುಕೊಂಡು, ವಸ್ತ್ರ ಹರಿದುಕೊಂಡು ಅಳುತ್ತಿದ್ದರು. ಸಹೋದರನ ನೆನಪಲ್ಲಿ ಶೋಕ ಗೀತೆಯನ್ನು ರಚಿಸಿದರು. ಅದನ್ನು ಆಲಿಸುತ್ತಿದ್ದ ಜನರೂ ಅತ್ತು ಬಿಡುತ್ತಿದ್ದರು. ಇಸ್ಲಾಮ್ ಸ್ವೀಕರಿಸಿದ ಖನ್ಸಾ(ರ)ರು ಮದೀನಾಕ್ಕೆ ಬಂದು ಆಯಿಶಾ(ರ)ರನ್ನು ಭೇಟಿಯಾದರು. ತಮ್ಮ ಸಹೋದರನ ಬಗ್ಗೆ ಬರೆದ ಶೋಕ ಗೀತೆಯನ್ನು ಮಂಡಿಸಿದರು. ಆಯಿಶಾ(ರ)ರ ದುಃಖಿತಪ್ತರಾದರು. ಖನ್ಸಾ(ರ)ರಿಗೆ ಸಾಂತ್ವನ ಹೇಳಿದರು. ಇಸ್ಲಾಮೀ ಕವನಗಳನ್ನು ಖನ್ಸಾ(ರ)ರಿಗೆ ತಿಳಿಸಿದರು. ಇಲ್ಲಿಂದ ತೆರಳಿದಾಗ ಖನ್ಸಾ(ರ)ರ ಪರಿಸ್ಥಿತಿಯೇ ಬದಲಾಗಿತ್ತು. ಇರಾನ್‌ನಲ್ಲಿ ಕಾದಿಸಿಯ್ಯಾ ಯುದ್ಧ ನಡೆಯುತ್ತಿತ್ತು. ಅವರು ತನ್ನ ನಾಲ್ವರು ಪುತ್ರರೊಂದಿಗೆ ಕಾದಿಸಿಯ್ಯಾ ಯುದ್ಧದಲ್ಲಿ ಭಾಗಿಯಾದರು. ಅಲ್ಲಿ ತಮ್ಮ ಪುತ್ರರನ್ನುದ್ದೇಶಿಸಿ, "ಪ್ರೀತಿಯ ಮಕ್ಕಳೇ, ನೀವು ಸ್ವಂತ ಇಚ್ಛೆಯಿಂದ ಸನ್ಮಾರ್ಗವನ್ನು ಸ್ವೀಕರಿಸಿದ್ದೀರಿ. ಸಂಪೂರ್ಣ ಸಂತೃಪ್ತಿಯಿಂದ ಸ್ವದೇಶವನ್ನು ತೊರೆದು ಬಂದಿದ್ದೀರಿ. ನೀವು ನಿಮ್ಮ ದೇಶಕ್ಕೆ ಹೊರೆಯಾಗಿರಲಿಲ್ಲ ಹಾಗೂ ಅಲ್ಲಿ ಕ್ಷಾಮವೂ ಬಂದಿರಲಿಲ್ಲ. ಆದರೂ ನೀವು ನಿಮ್ಮ ವೃದ್ಧ ಮಾತೆಯನ್ನು ಇಲ್ಲಿಗೆ ಕರೆದುಕೊಂಡು ಬಂದಿರಿ. ಅಲ್ಲಾಹನಾಣೆ! ನೀವೊಂದು ಮಾತಾ-ಪಿತರ ಪುತ್ರರಾಗಿದ್ದೀರಿ. ನಾನು ನಿಮ್ಮ ತಂದೆಗೆ ದ್ರೋಹ ವೆಸಗಲಿಲ್ಲ ಹಾಗೂ ನಿಮ್ಮ ಮಾವಂದಿರನ್ನು ಅಪಮಾನಿಸಲಿಲ್ಲ. ಜಗತ್ತು ವಿನಾಶವಾಗಲಿದೆ ಹಾಗೂ

ಸತ್ಯನಿಷೇಧಿಗಳೊಂದಿಗೆ ಜಿಹಾದ್ ಮಾಡುವುದರಲ್ಲಿ ಪುಣ್ಯವಿದೆ ಎಂದು ನಿಮಗೆ ತಿಳಿದಿದೆ. ಏಳಿರಿ! ಎದ್ದೇಳಿರಿ! ಕೊನೆಯ ವರೆಗೂ ಹೋರಾಡಿರಿ" ಎಂದರು.

ನಾಲ್ವರು ಪುತ್ರರೂ ಕಾದಿಸಿಯ್ಯಾ ಯುದ್ಧದಲ್ಲಿ ಹುತಾತ್ಮರಾದರು. ಸಹೋದರನ ಸಾವಿಗೆ ಶೋಕತಪ್ತ ಗೀತೆಯನ್ನು ಹಾಡಿ ದುಃಖಿತರಾಗಿದ್ದ ಅದೇ ಖನ್ಸಾ(ರ)ರು ಪುತ್ರರು ಹುತಾತ್ಮರಾದಾಗ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಿದರು.

ಹ. ಖನ್ಸಾ(ರ)ರಲ್ಲಿ ಬದಲಾವಣೆಗೆ ಇಸ್ಲಾಮ್ ಧರ್ಮವು ಕಾರಣವಾದುದರ ಜೊತೆಗೆ ಆಯಿಶಾ(ರ)ರ ಮಾತುಗಳೂ ಅವರನ್ನು(ರ) ಪ್ರಭಾವಿತಗೊಳಿಸಿದ್ದವು.

## ಹ. ಆಯಿಶಾ(ರ): ಮಹಿಳೆಯರಿಗಾಗಿ ಒಂದು ಅತ್ಯುತ್ತಮ ಮಾದರಿ

ಆಯಿಶಾ(ರ)ರ ಜೀವನವನ್ನು ಸಂಕ್ಷಿಪ್ತ ರೂಪದಲ್ಲಿ ನಾವು ನಿಮ್ಮ ಮುಂದಿರಿಸಿದ್ದೇವೆ. ಜ್ಞಾನ ಹಾಗೂ ಅದನ್ನು ಕಾರ್ಯರೂಪಕ್ಕೆ ತಂದ ಹಲವಾರು ಮಾದರಿಗಳನ್ನು ನಾವು ನಿಮ್ಮ ಮುಂದೆ ಪ್ರಸ್ತುತ ಪಡಿಸಿದೆವು. ನೀವು ವಿಶ್ವದ ಹಲವಾರು ಮಹಾನ್ ಮಹಿಳಾ ಮಣಿಗಳ ಸಾಧನೆ, ಕಾರ್ಯರೂಪವನ್ನು ನೋಡಿರಬಹುದು ಅಥವಾ ಓದಿ ತಿಳಿದಿರಬಹುದು. ಆದರೆ ಎಲ್ಲಾ ಮಹಾನ್ ಮಹಿಳಾ ಮಣಿಗಳಿಗೆ ಹೋಲಿಸಿದರೆ, ಆಯಿಶಾ(ರ)ರು ಸರ್ವ ಸಂಪೂರ್ಣವಾಗಿ ಅತ್ಯುನ್ನತ ಚಾರಿತ್ರ್ಯವುಳ್ಳಂತಹ ಮಾದರಿಯೋಗ್ಯ ಮಹಿಳಾ ಮಣಿಯಾಗಿದ್ದಾರೆ.

ನೀವು ಪ್ರಸಿದ್ಧ ಮಹಿಳಾ ಮಣಿಗಳ ಸಾಧನೆಗಳನ್ನು ಓದಿರಬಹುದು. ಅವರು ಅಕಸ್ಮಾತ್ತಾಗಿ ಯಾವುದೋ ಒಂದು ಸಾಧನೆ ಮಾಡಿ ರಾತ್ರಿ ಬೆಳಗಾಗುವುದರೊಳಗೆ ಜನರ ನೆಚ್ಚಿನ ತಾರೆಯರಾಗಿ ಬಿಡುತ್ತಾರೆ. ಉದಾಹರಣೆಗೆ, ಜನರ ಮುಂದೆ ಸ್ಫೂರ್ತಿದಾಯಕ ಭಾಷಣ ಮಾಡಿ ಅಥವಾ ದೇಶಪ್ರೇಮಿ ಬೇಹುಗಾರ್ತಿರೋರ್ವಳು ಶತ್ರುಗಳ ಕುತಂತ್ರಗಳನ್ನು ಬಹಿರಂಗಗೊಳಿಸಿ ದೇಶವನ್ನು ಗುಲಾಮಗಿರಿಯಿಂದ ಮುಕ್ತಗೊಳಿಸಿದುದು. ಅಥವಾ ತನ್ನ ಬುದ್ಧಿವಂತಿಕೆ ಹಾಗೂ ಸೇನಾ ಚಾತುರ್ಯದಿಂದ ಆಡಳಿತದ ಚುಕ್ಕಾಣಿ ಹಿಡಿದುದು, ಓರ್ವ ಸ್ತ್ರೀಯು ಯುದ್ಧ ರಂಗದಲ್ಲಿ ಶೌರ್ಯ ಮೆರೆದುದು ಇತ್ಯಾದಿ.

ಈ ಸಾಧಕಿಯರ ಸಾಧನೆಗಳನ್ನು ನಮ್ಮಲ್ಲಿ ಸ್ಫೂರ್ತಿಯನ್ನುಂಟು ಮಾಡುತ್ತವೆ. ನಾವು ರೋಮಾಂಚನಗೊಳ್ಳುತ್ತೇವೆ. ಇದರ ಹೊರತು ಅವರ ಜೀವನದಿಂದ ನಮ್ಮ ಸುಧಾರಣೆಗಾಗಿ ಏನೂ ದೊರಕುವುದಿಲ್ಲ. ಅವರ ಜೀವನದ ಇನ್ನೊಂದು

ಮಗ್ಗುಲಲ್ಲಿ ಅಂಧಕಾರ ಗೋಚರಿಸುತ್ತದೆ. ಆದುದರಿಂದ ನಮಗೆ ಆಯಿಶಾ(ರ)ರ ಜೀವನದಿಂದ ದೊರಕುವ ಮಾದರಿಯನ್ನು ಈ ಸಾಧಕಿಯರ ಜೀವನದಲ್ಲಿ ಹುಡುಕುವುದು ವ್ಯರ್ಥ.

ಪ್ರವಾದಿಯವರಿಂದ(ಸ) ಶಿಕ್ಷಣ ತರಬೇತಿ ಪಡೆಯುವ ಸೌಭಾಗ್ಯ ದೊರೆತ ಮಹಿಳಾ ರತ್ನಗಳ ವ್ಯಕ್ತಿತ್ವವನ್ನು ಹ. ಆಯಿಶಾ(ರ)ರಿಗೆ ಹೋಲಿಸಬಹುದು. ಪ್ರವಾದಿ ಪತ್ನಿಯರು, ಪುತ್ರಿಯರು ಅವರ ಬಗೆಗಿನ ಪ್ರಶಂಸನೀಯ ವಿಷಯಗಳು ನಮಗೆ ಹಲವಾರು ಹದೀಸ್‌ಗಳಲ್ಲಿ ಕಂಡುಬರುತ್ತದೆ. ಈ ಹದೀಸ್‌ಗಳ ಆಧಾರದಲ್ಲಿ ಇಸ್ಲಾಮಿನ ಎಲ್ಲಾ ವಿದ್ವಾಂಸರ ಹೇಳಿಕೆಯಂತೆ ಸ್ತ್ರೀಯರಲ್ಲಿ ಖದೀಜಾ(ರ), ಫಾತಿಮಾ(ರ) ಹಾಗೂ ಆಯಿಶಾ(ರ)ರ ಸ್ಥಾನವು ಅತ್ಯುನ್ನತವಾಗಿದೆ. ಫಿರ್‌ಔನ್‌ನ ಪತ್ನಿ ಆಸಿಯಾ ಹಾಗೂ ಈಸಾ(ಅ)ರ ತಾಯಿ ಮರ್ಯಮ್(ಅ)ರನ್ನು ಸ್ತ್ರೀಯರಲ್ಲಿ ಪರಿಪೂರ್ಣರು ಎಂಬುದಕ್ಕೆ ಇನ್ನೊಂದು ಹದೀಸ್ ಪುಷ್ಟಿ ನೀಡುತ್ತದೆ.

ಅಬೂ ಮೂಸಾ ಅಶ್‌ಅರಿ(ರ)ರ ವರದಿ ಮಾಡಿರುತ್ತಾರೆ, ಪ್ರವಾದಿವರ್ಯರು(ಸ) ಹೇಳಿದರು, "ಪುರುಷರಲ್ಲಿ ಹಲವಾರು ಮಂದಿ ಪರಿಪೂರ್ಣ ವ್ಯಕ್ತಿಗಳು ಗತಿಸಿ ಹೋಗಿದ್ದಾರೆ. ಆದರೆ ಸ್ತ್ರೀಯರಲ್ಲಿ ಮರ್ಯಮ್ ಬಿಂತಿ ಇಮ್ರಾನ್(ರ) ಹಾಗೂ ಫಿರ್‌ಔನ್‌ನ ಪತ್ನಿ ಆಸಿಯಾ(ರ)ರಂತೆ ಪರಿಪೂರ್ಣರು ಯಾರೂ ಇಲ್ಲ. ಇತರ ಭೋಜನಗಳಿಗೆ ಹೋಲಿಸಿದರೆ ಸಾರಿನಲ್ಲಿ ಅದ್ದಿದ ರೊಟ್ಟಿಯ ತುಂಡುಗಳಿಗೆ ಎಷ್ಟು ಮಹತ್ವವಿದೆಯೋ, ಅದೇ ರೀತಿ ಸ್ತ್ರೀಯರಲ್ಲಿ ಆಯಿಶಾ(ರ)ರಿಗೆ ಅತ್ಯುನ್ನತ ಸ್ಥಾನವಿದೆ."

ಹ. ಆಸಿಯಾರು ಫಿರ್‌ಔನ್‌ನಂತಹ ದುಷ್ಟ ರಾಜನ ಪತ್ನಿಯಾಗಿದ್ದರು. ಮೂಸಾ(ರ)ರ ಮೇಲೆ ವಿಶ್ವಾಸ ತಂದಾಗ, ಫಿರ್‌ಔನನು ಆಸಿಯಾ(ಅ)ರನ್ನು ಕ್ರೂರವಾಗಿ ಹಿಂಸಿಸಿದನು. ಮರ್ಯಮ್(ಅ)ರು ಒಂದು ಅನೈಸರ್ಗಿಕ ಪರೀಕ್ಷೆಗೊಳಗಾದರು. ಆದರೆ ಇವರೀರ್ವರು ತಾಳ್ಮೆಯಿಂದ ಎಲ್ಲವನ್ನೂ ಸಹಿಸಿದರು. ಖದೀಜಾ(ರ)ರು ಇಸ್ಲಾಮಿನ ಸಂದೇಶ ಪ್ರಚಾರ ಕಾರ್ಯದಲ್ಲಿ ತನು-ಮನ-ಧನದಿಂದ ಹೆಜ್ಜೆ-ಹೆಜ್ಜೆಗೂ ಪ್ರವಾದಿಯವರ(ಸ) ಬೆನ್ನೆಲುಬಾಗಿ ನಿಂತರು. ಫಾತಿಮಾ(ರ)ರು ಪ್ರವಾದಿವರ್ಯರ(ಸ) ಪ್ರಿಯ ಪುತ್ರಿ ಹಾಗೂ ಸ್ವರ್ಗದಲ್ಲಿ ಮಹಿಳೆಯರ ನಾಯಕಿಯಾಗಿದ್ದಾರೆ. ಇವರೆಲ್ಲರೂ ಇಡೀ ಮಾನವಕುಲದ ಸ್ತ್ರೀಯರಿಗೆ ಮಾದರಿಯೋಗ್ಯರಾಗಿದ್ದಾರೆ.

ಈ ಎಲ್ಲಾ ಮಹಾನ್ ಮಹಿಳಾಮಣಿಗಳಲ್ಲಿ ಆಯಿಶಾ(ರ)ರ ಸ್ಥಾನ ಅತ್ಯುನ್ನತವಾಗಿತ್ತು. ಅವರು(ರ) ಧಾರ್ಮಿಕ, ಸಾಮಾಜಿಕ, ಆಡಳಿತಾತ್ಮಕ

ಕ್ಷೇತ್ರದಲ್ಲಿ ಅತ್ಯುನ್ನತ ಸಾಧನೆ ಮಾಡಿದ್ದಾರೆ. ಅವರ(ರ) ಜ್ಞಾನಾರ್ಜನೆ, ಚಾತುರ್ಯ, ತರಬೇತಿಯ ಶೈಲಿ, ಧರ್ಮ-ಶರೀಅತ್ ಅನ್ನು ವಿಸ್ತಾರವಾಗಿ ತಿಳಿಸುವ ರೀತಿ, ಕುರ್‌ಆನ್ ಹಾಗೂ ಹದೀಸ್‌ನ ಜ್ಞಾನವನ್ನು ಪಸರಿಸುವ ಶೈಲಿ, ಇತರರ ಹಕ್ಕು ಬಾಧ್ಯತೆಗಳನ್ನು ಪೂರೈಸುವುದು, ತರಬೇತಿಯ ಶೈಲಿಯಿಂದಾಗಿ ಅವ ಶಿಷ್ಯರು ಮುಂದೆ ಪ್ರಸಿದ್ಧ ಇಮಾಮರಾದರು. ಹೀಗೆ ಆಯಿಶಾ(ರ)ರು ಎಲ್ಲಾ ರಂಗದಲ್ಲೂ ಆದರ್ಶ ಮಹಿಳೆಯಾಗಿದ್ದಾರೆ. ಇಡೀ ಮಾನವಕುಲದ ಸ್ತ್ರೀಯರಿಗೆ ಆಯಿಶಾ(ರ)ರ ಜೀವನದಲ್ಲಿ ಒಂದು ಮಾದರಿಯಿದೆ.

❖ ❖ ❖